# ಶ್ರೀ ಗುರುಕೃಪಾ ತರಂಗಿಣೀ

(ಕನ್ನಡದ ಅನುವಾದ ಸಹಿತ)

ಗ್ರಂಥಕರ್ತರು
**ವಿದ್ವಾನ್. ಕೆ. ಎಸ್. ಭಾಸ್ಕರ ಭಟ್ಟ**
ಭೀಮನಕೋಣೆ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

ಪ್ರಕಾಶಕರು ,
ಶ್ರೀರಾಮ ಪ್ರಸಾದ ಪೋಷಿತ ವೈದಿಕಗ್ರಂಥ ಪ್ರಕಾಶನಸಮಿತಿ
ಶ್ರೀಮದ್ರಾಮಚಂದ್ರಾಪುರ ಮಠ, ತೀರ್ಥಹಳ್ಳಿ
ಶಿವಮೊಗ್ಗ ಜಿಲ್ಲೆ, ಕರ್ನಾಟಕ ರಾಜ್ಯ

SRI GURUKRUPA TARANGINI a Felicitation Volume dedicated to H.H. the Jagadguru Shankaracharya Srimad Raghavendra Bharathi Swamiji of Sri Ramachandrapura Mutt, Hosanagara, Shimoga Dist., edited by Vidvan Sri K.S. Bhaskara Bhatta, Bheemanakone, Sagar Taluk, Shimoga Dist , Karnataka.

Copies: 1000 Rs. 20/-

Published by:

Sri Rama Prasada Poshita Vydikagrantha
Prakashana Samithi,
Sri Madramachandrapura Mutt,
Thirthahalli, Shimoga.

First Edition : December. 1989
ಶುಕ್ಲ ಸಂವತ್ಸರದ ಮಾರ್ಗಶಿರ ಬಹುಳ ಚತುರ್ಥೀ

Printed by : Sri Satyanarayana Sastry
at Mythry Printers & Binders
1465, Muneshwara Block
Bangalore-560 026. Phone : 604899

ಬೆಲೆ : ರೂ. 20-00

# ಪ್ರಕಾಶಕರ ನುಡಿ

ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀಗೋಕರ್ಣ ಮಹಾಸಂಸ್ಥಾನದ ಶ್ರೀಮದ್ರಾಮಚಂದ್ರಾಪುರಮಠಾಧೀಶ್ವರರಾದ ಶ್ರೀಮದ್ರಾಘವೇಂದ್ರಭಾರತೀಮಹಾಸ್ವಾಮಿಗಳವರ ಪಾವನ ಹಾಗೂ ಸಮರ್ಥವಾದ ಜೀವನ ವೃತ್ತಾಂತವನ್ನು ಗೀರ್ವಾಣಭಾಷೆಯ ಕಾವ್ಯಗ್ರಂಥರೂಪದಲ್ಲಿ ಕನ್ನಡಾನುವಾದ ಸಹಿತವಾಗಿ ಇದೀಗ ಪ್ರಕಟಿಸಲು ಸಾಧ್ಯವಾಗಿರುವ ಬಗೆಗೆ ಸಂತೋಷಪಡುತ್ತೇವೆ.

'ಶ್ರೀ ಗುರುಕೃಪಾತರಂಗಿಣೀ' ಕಾವ್ಯವು ಸಂಸ್ಕೃತ ವಿದ್ವಾಂಸರೂ ಗುರುಪೀಠದ ಶಿಷ್ಯರೂ ಅಭಿಮಾನಿಗಳೂ ಆಗಿರುವ ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು ಭೀಮನ ಕೋಣೆ ವಾಸಿಗಳಾದ (ಇಕ್ಕೇರಿ) ಕಲ್ಮನೆ ಸುಬ್ಬಾಭಟ್ಟರ ಮಕ್ಕಳು ವಿದ್ವಾನ್ ಕೆ. ಎಸ್. ಭಾಸ್ಕರ ಭಟ್ಟರವರಿಂದ ವಿರಚಿತವಾಗಿದೆ ಇದರಲ್ಲಿ ಶ್ರೀಮದ್ರಾಮಚಂದ್ರಾಪುರ ಮಠದ ಶ್ರೀ ಮದ್ರಾಘವೇಂದ್ರಭಾರತೀಸ್ವಾಮಿಗಳವರ ಪವಿತ್ರಜೀವನ, ಶ್ರೀಮಠದ ಗುರು ಪರಂಪರೆಯಲ್ಲಿ ಬೆಳಗಿ ಬಂದ ಸ್ತುತ್ಯರ್ಹ ಪೂಜ್ಯ ಜಗದ್ಗುರುಮಹಾಸ್ವಾಮಿಗಳಲ್ಲಿ ಅನೇಕರ ದಿವ್ಯ ಜೀವನದ ವೈಶಿಷ್ಟ್ಯ ಹಾಗೂ ಅಲೌಕಿಕ ಮಹಿಮಾ ವಿಚಾರಗಳು, ಮಠೀಯ ಧಾರ್ಮಿಕ ಪರಂಪರೆ, ಗುರುಪೀಠ ಹಾಗೂ ಸಮಾಜದ ಅಭಿವೃದ್ಧಿ ಕಾರ್ಯಗಳು, ನೂತನ ಮಠಾಯತನ ಮತ್ತು ವಿದ್ಯಾಮಂದಿರಾದಿಗಳ ನಿರ್ಮಾಣಗಳ ಮತ್ತು ಸಂದೇಶಗಳ ಕುರಿತಾಗಿ ಸುಂದರಚಿತ್ರಣಗಳಿವೆ. ಇಂತಹ ವಿದ್ವತ್ ಪೂರ್ಣವೂ ಸಾಹಿತ್ಯ ಸುಂದರವೂ ಆದ ಕಾವ್ಯಕೃತಿಯನ್ನು ರಚಿಸಿ ಪ್ರಕಟಣೆಗೆ ಸಿದ್ಧಪಡಿಸಿಕೊಟ್ಟಿರುವ ವಿದ್ವಾನ್ ಶ್ರೀ ಕೆ. ಎಸ್. ಭಾಸ್ಕರಭಟ್ಟರವರಿಗೆ ಪ್ರಕಾಶನ ಸಮಿತಿಯ ವತಿಯಿಂದ ವಿಶೇಷವಾಗಿ ಕೃತಜ್ಞತೆಗಳು ಸಲ್ಲುತ್ತವೆ.

ನಾಡಿನ ಸುಪ್ರಸಿದ್ಧ ವಿದ್ವಾಂಸರಾದ ವಿದ್ವಾನ್ ಶ್ರೀ ಎನ್. ರಂಗನಾಥ ಶರ್ಮರವರು ಗ್ರಂಥ ಮುದ್ರಣ ಕಾಲದಲ್ಲಿ ಅಂತಿಮಪರಿಶೋಧನಾ ಕಾರ್ಯವನ್ನು ನಿರ್ವಹಿಸಿ ಸಿದ್ದಲ್ಲದೇ ವಿದ್ವತ್ ಪೂರ್ಣವಾದ ಮುನ್ನುಡಿಯನ್ನೂ ಬರೆದು ಗ್ರಂಥದ ಗೌರವವನ್ನು ಹೆಚ್ಚಿಸಿರುತ್ತಾರೆ. ಈ ಬಗ್ಗೆ ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರವರಿಗೆ ವಿಶೇಷ ವಂದನೆಗಳನ್ನು ಸಲ್ಲಿಸುತ್ತೇವೆ.

'ಶ್ರೀ ಗುರುಕೃಪಾತರಂಗಿಣೀ' ಗ್ರಂಥದ ಮುದ್ರಣದ ಸಂದರ್ಭದಲ್ಲಿ ವಿದ್ವಾನ್ ಎಸ್. ಎ. ರಾಮಚಂದ್ರಭಟ್ಟರು ಅಚ್ಚಿನ ಕರಡು ಪ್ರತಿಯನ್ನು ಪರಿಶೋಧಿಸುವ ಗುರುತರವಾದ ಕಾರ್ಯವನ್ನು ಬಹಳ ತಾಳ್ಮೆಯಿಂದ ಮತ್ತು ಕುಶಲತೆಗಳಿಂದ ಪರಿಶ್ರಮವಹಿಸಿ ನಿರ್ವಹಿಸಿರುತ್ತಾರೆ. ಈ ಬಗ್ಗೆ ವಿದ್ವಾನ್ ಎಸ್. ಎ. ರಾಮಚಂದ್ರ ಭಟ್ಟರವರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

ಶ್ರೀ ಮದ್ರಾಮಚಂದ್ರಾಪುರಮಠದ ಪ್ರಾಚೀನ ಭವ್ಯಪರಂಪರೆಯನ್ನು ಉಳಿಸಿ ಪೋಷಿಸಿಕೊಂಡು ಬರುತ್ತಾ ಗುರುಪೀಠದಲ್ಲಿ ಇಂದು ವಿರಾಜಮಾನರಾಗಿರುವ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳವರು ಮಹಾಪುರುಷರು, ಮಹಿಮಾನ್ವಿತರು ಎಂಬುದು ಶ್ರೀಮಠದ ಶಿಷ್ಯವೃಂದದವರಾದ ನಮಗೆಲ್ಲ ವಿಶೇಷವಾಗಿ ಗೌರವಾಭಿಮಾನದ ವಿಷಯವಾಗಿದೆ.

ಶ್ರೀಮದಾದಿಶಂಕರ ಭಗವತ್ಪಾದಾಚಾರ್ಯರು ಮತ್ತು ಅವರ ಅವಿಚ್ಛಿನ್ನವಾದ ಗುರುಪರಂಪರೆಯಲ್ಲಿ ಮೂಡಿ ಬಂದಿರುವ ಅನೇಕ ವಿಭೂತಿ ಮಹಾಪುರುಷರ ಮತ್ತು ಪರಮಪೂಜ್ಯ ಶ್ರೀಮದ್ರಾಘವೇಂದ್ರಭಾರತೀಮಹಾಸ್ವಾಮಿಗಳವರಜೀವನ ವೃತ್ತಾಂತದ ಸ್ಮರಣೆ, ಪಾರಾಯಣ, ಮನನಗಳಿಂದ ಭವಬಂಧನ ನಿವಾರಣೆಯಾಗುವುದರಲ್ಲಿ ಸಂದೇಹವಿಲ್ಲ. ಈ ನಿಟ್ಟಿನಲ್ಲಿ "ಶ್ರೀಗುರುಕೃಪಾತರಂಗಿಣೀ" ಭಕ್ತರಿಗೆ, ಸಾಧಕರಿಗೆ, ಹಾಗೂ ಶಿಷ್ಯರಿಗೆ ವಿಶೇಷವಾಗಿ ಪ್ರಯೋಜನಕ್ಕೆ ಬರುವ ಪವಿತ್ರಗ್ರಂಥ ಎಂಬುದು ನಮ್ಮ ವಿನಮ್ರ ನಂಬಿಕೆ.

'ಶ್ರೀ ಗುರುಕೃಪಾತರಂಗಿಣೀ, ಮೂಲತಃ ಪರಮಪೂಜ್ಯ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀಮದ್ರಾಘವೇಂದ್ರ ಭಾರತೀಸ್ವಾಮಿಗಳವರ ಕೃಪಾಶೀರ್ವಾದದ ಫಲವೇ ಸರಿ ಎಂದರೆ ಅತಿಶಯೋಕ್ತಿಯಾಗಲಾರದು. ಗ್ರಂಥರಚನೆ ಹಾಗೂ ಪ್ರಕಾಶನದ ತನಕದ ಎಲ್ಲಸಂದರ್ಭಗಳಲ್ಲಿಯೂ ಪರಮಕರುಣಾಳು ಶ್ರೀ ಶ್ರೀ ಗಳವರು ವಿಶೇಷವಾಗಿ ಆಶೀರ್ವದಿಸಿ ಈ ಕೃತಿಯು ಪ್ರಕಟಗೊಳ್ಳಲು ಅನುಕೂಲಾವಕಾಶ ಮಾಡಿ ಕೊಟ್ಟಿರುತ್ತಾರೆ. ಹಾಗಾಗಿ ಪರಮ ಪೂಜ್ಯ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀಮದ್ರಾಘವೇಂದ್ರ ಭಾರತೀ ಮಹಾಸ್ವಾಮಿಗಳವರಿಗೆ ಪ್ರತ್ಯೇಕವಾಗಿ ನಮ್ಮ ಸಾಷ್ಟಾಂಗ ಪ್ರಣಾಮಗಳನ್ನು ಕೃತಜ್ಞತಾ ಭಾವದೊಡನೆ ಸಮರ್ಪಿಸುತ್ತೇವೆ.

ಈ ಗ್ರಂಥವನ್ನು ಸುಂದರವಾಗಿ ಮುದ್ರಣಮಾಡಿ ಸಿದ್ಧಪಡಿಸಿ ಕೊಟ್ಟಿರುವ ಮೈತ್ರಿ ಪ್ರಿಂಟರ್ಸ್ ಅಂಡ್ ಬೈಂಡರ್ಸ್, ಬೆಂಗಳೂರು–26 ಒಡೆಯರಾದ ಶ್ರೀ ಸತ್ಯನಾರಾಯಣ ಶಾಸ್ತ್ರಿಗಳವರಿಗೂ ಮತ್ತು ಅವರ ಸಿಬ್ಬಂದಿವರ್ಗದವರಿಗೂ ನಮ್ಮ ಹಾರ್ದಿಕಕೃತಜ್ಞತೆಗಳು. ಶ್ರೀಗುರುದೇವತಾ ಕೃಪೆಯಿಂದ ಸರ್ವತ್ರ ಶಾಂತಿಸುಖ ಸಮೃದ್ಧಿಗಳು ನೆಲೆಗೊಳ್ಳಲಿ ಎಂದು ಪ್ರಾರ್ಥಿಸುತ್ತೇವೆ,

ಬೆಂಗಳೂರು<br>
ತಾ 16–12–1989<br>
ಶುಕ್ಲ ಸಂವತ್ಸರದಮಾರ್ಗಶಿರ<br>
ಬಹುಳ ಚತುರ್ಥೀ<br>
ಶನಿವಾರ

ಇಂತು ಪ್ರಕಾಶಕರು<br>
ಶ್ರೀರಾಮ ಪ್ರಸಾದ ಪೋಷಿತ ವೈದಿಕ–<br>
ಗ್ರಂಥ ಪ್ರಕಾಶನ ಸಮಿತಿ<br>
ಶ್ರೀಮದ್ರಾಮಚಂದ್ರಾಪುರ ಮಠ<br>
ತೀರ್ಥಹಳ್ಳಿ, ಶಿವಮೊಗ್ಗ

# ಮುನ್ನುಡಿ

**ಶಂಕರಚೂಡಾಸಂಗಾತ್ ಗಂಗೋತ್ತುಂಗಾ ತರಂಗಿಣೀವ್ಯೈಷಾ |**
**ಶಂಕರಪಾದಸ್ಪರ್ಶಾತ್ ವಾಣೀ ಲೋಕಾನ್ ಪವಿತ್ರಯತಿ ||**

ಈ ಗ್ರಂಥಕ್ಕೆ ಮುನ್ನುಡಿಯೊಂದನ್ನು ಬರೆಯಬೇಕೆಂದು ಶ್ರೀರಾಮಚಂದ್ರಾಪುರ ಮಠಾಧೀಶರಾದ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀ ಶ್ರೀರಾಘವೇಂದ್ರ ಭಾರತೀಸ್ವಾಮಿಗಳವರು ನನಗೆ ಆದೇಶವನ್ನಿತ್ತರು. ಮಿತ್ರರಾದ ವಿದ್ವಾನ್ ಕೆ. ಎಸ್. ಭಾಸ್ಕರ ಭಟ್ಟರ ಸ್ನೇಹಪೂರ್ಣವಾದ ಅನುರೋಧವೂ ಸಂಸ್ಕೃತ ಸಾಹಿತ್ಯದಲ್ಲಿ ನನಗಿರುವ ಅಭಿಮಾನವೂ ಸೇರಿಕೊಂಡವು. ಪ್ರಭುಸಂಮಿತ, ಮಿತ್ರಸಂಮಿತ, ಕಾಂತಾಸಂಮಿತಗಳಾದ – ಈ ಮೂರು ಅಂಶಗಳು ಮುನ್ನುಡಿಗೆ ಪ್ರೇರಕವಾದವು.

ಇಂದು ಸಂಸ್ಕೃತಸಾಹಿತ್ಯೋದ್ಯಾನದಲ್ಲಿ ಸಾಕಷ್ಟು ಕಾವ್ಯಕುಸುಮಗಳು ಅರಳಿವೆ. ಸೌಂದರ್ಯದಿಂದಲೂ ಸುಗಂಧದಿಂದಲೂ ಸಹೃದಯರ ಹೃದಯವನ್ನು ಆಕರ್ಷಿಸಬಲ್ಲ ಹೂಗಳು ಪರಿಮಿತ ಸಂಖ್ಯೆಯಲ್ಲಿವೆಯೆಂದು ನನಗೆ ತೋರುತ್ತದೆ. ಗುಣಮಟ್ಟದ ಇಳಿತಕ್ಕೆ ಕಾರಣಗಳು ಹಲವಿರಬಹುದು. ಪಾಶ್ಚಾತ್ಯಸಾಹಿತ್ಯವು ಭಾರತೀಯ ಭಾಷಾಕವಿಗಳ ಮೇಲೆ ತನ್ನ ಪ್ರಭಾವವನ್ನು ಮುದ್ರಿಸಿದಾಗ ದೇಶಭಾಷೆಗಳಲ್ಲಿ ಹೊಸ ಬಗೆಯ ಕಾವ್ಯಗಳು ಬರಲಾರಂಭಿಸಿದವು. ಈ ಪ್ರಭಾವದಿಂದ ನಮ್ಮ ಸಾಹಿತ್ಯದ ಮೇಲೆ ಕೆಲವು ಸತ್ಪರಿಣಾಮಗಳಾದವು. ಆದರೆ ಸಂಬಂಧಿಸಿಗ ದುಷ್ಪರಿಣಾಮವು ಉಪೇಕ್ಷಣೀಯವಲ್ಲ. ಭಾರತೀಯ ಕಾವ್ಯ ಮೀಮಾಂಸೆ ಕವಿಗಳ ಕೈಕಟ್ಟುವ ನಿಯಮಾವಳಿ ಎಂಬ ಅಭಿಪ್ರಾಯ ಬಲಿಯಿತು. ಅದರ ಫಲವಾಗಿ ಈಗ ನವೋದಯ ಸಾಹಿತ್ಯವೆಂದು ಹೆಸರಾಂತ ವಾಙ್ಮಯದ ಉದಯ. ಸಾಹಿತ್ಯಪ್ರಪಂಚದಲ್ಲಿ ಈ ಬದಲಾವಣೆ ಮತ್ತು ಬೆಳವಣಿಗೆ ಸಹಜವಾದದ್ದು. ಇದು ಆಕ್ಷೇಪಣೀಯವೆಂದೇನೂ ನಮ್ಮ ಅಭಿಪ್ರಾಯವಲ್ಲ ಮನುಷ್ಯನಿಗೆ ಯೌವನ ಬಂದಂತೆ ಅಂಗಗಳಲ್ಲಿ ಬದಲಾವಣೆ ಬೆಳವಣಿಗೆಗಳು ಒಟ್ಟಿಗೆ ನಡೆಯುತ್ತವೆ. ಈ ಪ್ರಕಾರವಾದ ಬದಲಾವಣೆಯಾಗಲಿ, ಬೆಳವಣಿಗೆಯಾಗಲಿ, ನಮಗೆ ಅಪೇಕ್ಷಣೀಯವಾದದ್ದು. ಮುಪ್ಪಿನಿಂದಾಗುವ ಬದಲಾವಣೆಯಾಗಲಿ, ಕ್ಯಾನ್ಸರಿನಿಂದಾಗುವ ಬೆಳವಣಿಗೆಯಾಗಲಿ, ಇಷ್ಟವಾದದ್ದಲ್ಲ,

ಪಾಶ್ಚಾತ್ಯ ಸಂಸ್ಕೃತಿಯು ನಮ್ಮ ರಾಷ್ಟ್ರದೊಳಗೆ ನುಸುಳಿದಾಗ, ಧರ್ಮಶಾಸ್ತ್ರದ ವಿಧಿಗಳು ಹೇಗೆ ಗಾಳಿಗೆ ತೂರಿಹೋದವೋ ಹಾಗೆಯೇ ನವೋದಯ ಸಾಹಿತ್ಯವು ಬೆಳೆಯುತ್ತ ಬಂದಾಗ ಕಾವ್ಯಮೀಮಾಂಸೆಯ ನಿಯಮಗಳು ಅಳಿಸಿಹೋದವು. ನಿಯಮಗಳೆಲ್ಲವೂ ಬಂಧಕಗಳೆಂಬ ಭಾವನೆ ತಳ ಊರಿತು. ದೇಶ

ಕಾಲಾನುರೋಧವಾಗಿ ನಿಯಮಗಳ ಪರಿವರ್ತನೆ ಆವಶ್ಯಕವೇನೋ ಹೌದು. ಆದರೆ ಆದದ್ದೇನು? ಹೊಸನಿಯಮ ಯಾವುದೂ ಬರಲಿಲ್ಲ ಹಳೆಯನಿಯಮವೆಲ್ಲ ಸಡಿಲಿತು. ಈ ಸರ್ವೋದಯ ಕಾವ್ಯಗಳ ಪ್ರಭಾವವು ಸಂಸ್ಕೃತ ಸಾಹಿತ್ಯದ ಮೇಲೂ ಆಯಿತು. ಆಲಂಕಾರಿಕರ ಕಟ್ಟುಪಾಡುಗಳೂ ದೀರ್ಘಾನುಭವದಿಂದ ಬಂದ ಉಪದೇಶಗಳೂ ಮೂಲೆಗುಂಪಾದವು. ಛಂದಃಶಾಸ್ತ್ರವನು ಕಾಲ್ತೊಡಕೆಂದು ಗಣಿಸಲಾಯಿತು. ವ್ಯಾಕರಣನಿಯಮೋಲ್ಲಂಘನೆ ಸಹಜವಾಯಿತು. ನಿತ್ಯವ್ಯವಹಾರದಲ್ಲಿರುವ ದೇಶ ಭಾಷೆಗಳಲ್ಲಿ ವ್ಯಾಕರಣದ ಕಟ್ಟು ಸಡಿಲವಾಗುವುದು ಸಹಜ. ಆ ಸಡಿಲಿಕೆ ಆ ಭಾಷೆಗೆ ಒಗ್ಗಿಕೊಂಡಿರುತ್ತದೆ ಸಂಸ್ಕೃತದಲ್ಲಿ ಮಾತ್ರ ಅದು ಎಂದಿಗೂ ಸಹ್ಯವಲ್ಲ. ಸಂಸ್ಕೃತ ದಲ್ಲಿ ಅದು ಪ್ರಾಪ್ತವಾದರೆ ಅಜ್ಞಾನ ವಿಜೃಂಭಿತವಾಗಿ ಉಪಹಸನೀಯವಾಗುತ್ತದೆ. ಕಾವ್ಯಪ್ರಕಾಶದ ಸಪ್ತಮೋಲ್ಲಾಸದಲ್ಲಿ ಮಮ್ಮಟ ಭಟ್ಟರು ಎಣಿಸಿರುವ ಎಲ್ಲ ಕಾವ್ಯ ದೋಷಗಳಿಗೆ ಉದಾಹರಣೆಗಳನ್ನು ಹುಡುಕುವುದು ಈ ಕಾಲದಲ್ಲಿ ಕಷ್ಟವೇನಲ್ಲ.

ಸಾಹಿತ್ಯವೆಂದರೇನು? ಕುಂತಕನು ಹೇಳುತ್ತಾನೆ–

"ತಸ್ಯಾಂ (ಸಹೃದಯಾಹ್ಲಾದಕಾರಿತಾಯಾಂ) ಸ್ಪರ್ಧಿತ್ವೇನ ಯಾಸಾವವಸ್ಥಿತಿಃ ಪರಸ್ಪರ ಸಾಮ್ಯಮವಸ್ಥಾನಂ ಸಾ ಸಾಹಿತ್ಯಮುಚ್ಯತೇ"(ವಕ್ರೋಕ್ತಿಜೀವಿತ ೧–೧೭) ರಸಿಕರಿಗೆ ಆನಂದವನ್ನುಂಟುಮಾಡುವ ಕಾವ್ಯದಲ್ಲಿ ಶಬ್ದಾರ್ಥಗಳು ನಾನು ಮುಂದು ತಾನು ಮುಂದೆಂದು ಸ್ಪರ್ಧಿಸುತ್ತ ಜೊತೆಯಲ್ಲಿರುವುದು ಸಾಹಿತ್ಯ.

ರಾಜಶೇಖರನು ತನ್ನ ಕಾವ್ಯಮೀಮಾಂಸೆಯಲ್ಲಿ (ಅಧ್ಯಾಯ ೨)"ಶಬ್ದಾರ್ಥಯೋ–ರ್ಯಥಾವತ್ ಸಹಭಾವೇನ ವಿದ್ಯಾ ಸಾಹಿತ್ಯವಿದ್ಯಾ" ಎಂದು ಬರೆದಿದ್ದಾನೆ. ಶಬ್ದಾರ್ಥಗಳ ಸಹಭಾವವೇ ಸಾಹಿತ್ಯ. ಶಾಸ್ತ್ರ ಗ್ರಂಥದಲ್ಲಿಯೂ ವರ್ತಮಾನ ಪತ್ರದಲ್ಲಿ ಯೂ ಶಬ್ದಾರ್ಥಗಳು ಸಹಭಾವದಿಂದಲೇ ಇರುತ್ತವೆಯಲ್ಲವೆ? ಕಾವ್ಯವಾಙ್ಮಯದಲ್ಲಿ ವಿಶೇಷವೇನೆಂದರೆ, ಸಹೃದಯರಿಗೆ ಆನಂದವನ್ನುಂಟುಮಾಡುವ ರಮಣೀಯತೆಯೇ ವಿಶೇಷ. ಈ ರಮಣೀಯತೆ ಶಬ್ದದಿಂದಲೋ ಅರ್ಥದಿಂದಲೋ ಆಗಬೇಕಾದ್ದು. ಯಾವ ಗ್ರಂಥದಲ್ಲಿ ಇವೆರಡೂ ಅಹಮಹಮಿಕೆಯಿಂದ ರಮಣೀಯತೆಯನ್ನುಂಟು ಮಾಡುತ್ತವೆಯೋ ಅದು ಸಾಹಿತ್ಯ.

ಕಾವ್ಯಲಕ್ಷಣ, ಶಬ್ದಾರ್ಥಸ್ವರೂಪ, ಗುಣ, ಅಲಂಕಾರ, ರೀತಿ, ಭಾವ, ರಸ–ಮುಂತಾದವುಗಳ ಕೂಲಂಕಷವಾದ ವಿವೇಚನೆ ಕಾವ್ಯಮೀಮಾಂಸೆ. ಇದೇ ಸಾಹಿತ್ಯ ವಿದ್ಯೆ ಕಾವ್ಯಪುರುಷನ ಪತ್ನಿ 'ಸಾಹಿತ್ಯವಿದ್ಯೆ' ಎನ್ನುತ್ತಾನೆ ರಾಜಶೇಖರ. ಸಾಹಿತ್ಯ-ವಿದ್ಯೆಯೇ ಅಲಂಕಾರಶಾಸ್ತ್ರ. ಇದಕ್ಕೆ ಆತನು ಎಷ್ಟು ಪ್ರಾಧಾನ್ಯವನ್ನು ಕೊಟ್ಟಿದ್ದಾ ನೆಂದರೆ,– ಈ ಶಾಸ್ತ್ರವು ವೇದಕ್ಕೆ ಏಳನೇ ಅಂಗವೆನ್ನುತ್ತಾನೆ (ಉಪಕಾರಕತ್ವಾತ್ ಅಲಂಕಾರಃ ಸಪ್ತಮಮಂಗಮಿತಿ ಯಾಯಾವರೀಯಃ) ಕವಿಯು ಕಾವ್ಯರಚನೆಗೆ

ತೊಡಗುವುದಕ್ಕೆ ಮೊದಲು ವ್ಯಾಕರಣಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಬೇಕೆಂದು ಆತನ ದೃಢವಾದ ಅಭಿಪ್ರಾಯ. (ಶಾಸ್ತ್ರಪೂರ್ವಕತ್ವಾತ್ ಕಾವ್ಯಸ್ಯ ಪೂರ್ವಂ ಶಾಸ್ತ್ರೇಷ್ವಭಿನಿವಿಶೇತ) ಲೋಕಶಾಸ್ತ್ರಕಾವ್ಯಾದ್ಯವೇಕ್ಷಣಗಳಿಂದಲೂ ಕಾವ್ಯಜ್ಞರಲ್ಲಿ ಪಡೆದ ಶಿಕ್ಷಣದಿಂದಲೂ ಸನ್ನದ್ಧರಾಗಿರುವ ಪ್ರತಿಭಾಶಾಲಿಗಳು ಕಾವ್ಯರಚನೆಗೆ ಕೈಹಾಕಬೇಕೆಂದು ಅಭಿಜ್ಞರಾದ ಪ್ರಾಚೀನರು ಉಪದೇಶ ಮಾಡಿದ್ದಾರೆ.

ಕಾವ್ಯರಚನೆಯ ಉದ್ದೇಶಗಳಲ್ಲಿ ಕಾಂತಾಸಂಮಿತವಾದ ಉಪದೇಶವಿರಬೇಕೆಂಬು ದೊಂದು ಮುಖ್ಯವಾದದ್ದು. ಮೊದಲೇ ದಾರಿಗೆಟ್ಟಿರುವ ಜನತೆಗೆ ಮಾರ್ಗ ದರ್ಶಕವೂ ಪರಿಣಾಮಕಾರಿಯಾದ ಪ್ರಭಾವವನ್ನು ಬೀರತಕ್ಕದ್ದೂ ಆದ ಜೀವನ ಸಂದೇಶವಿಲ್ಲದ ಕಾವ್ಯವನ್ನು ರಚಿಸಬೇಕಾದ ಅವಶ್ಯಕತೆಯಾದರೂ ಏನು? ಕಾವ್ಯವನ್ನು ಬರೆಯಬೇಕೆಂದು ರಾಜಾಜ್ಞೆಯೇನೂ ಇಲ್ಲವಷ್ಟೆ! ಬರೆಯದಿದ್ದರೆ ಪಾಪ ಬರುತ್ತದೆ ಎಂದು ಧರ್ಮಶಾಸ್ತ್ರವು ಹೇಳಿಯೂ ಇಲ್ಲ! ಭಾವಗೀತೆಯೆಂಬ ಹೆಸರನ್ನು ಹೊತ್ತು ಬರುತ್ತಿರುವ ಅರ್ಥವಾಗದ ಕಗ್ಗಗಳಿಂದ ಮನೋರಂಜನೆಯೂ ಇಲ್ಲ.

ಪದ್ಯಕಾವ್ಯದಲ್ಲಿ ಗೇಯತಾಗುಣವು ಅಧಿಕವಾಗಿರುವುದರಿಂದ ಗದ್ಯಕಾವ್ಯಕ್ಕಿಂತ ಹೆಚ್ಚು ಪ್ರಿಯವಾಗಬಲ್ಲುದು. ಗೇಯತೆಯನ್ನು ಸಂಪಾದಿಸತಕ್ಕದ್ದು ಛಂದಸ್ಸು. ತಾಳಲಯಬದ್ಧವಾಗಿವಾಚನಮಾಡುವುದಕ್ಕೆ ಛಂದೋನಿಯಮವು ಆವಶ್ಯಕ. 'ಅಪಿ ಮಾಷಂ ಮಷಂ ಕುರ್ಯಾತ್ ಛಂದೋಭಂಗಂ ನ ಕಾರಯೇತ್' ಎಂಬನುಡಿಯು ಛಂದಸ್ಸಿನ ಪ್ರಾಶಸ್ತ್ಯವನ್ನು ಸಾರುತ್ತದೆ. ಯತಿನಿಯಮವನ್ನು ಗೊತ್ತುಮಾಡಿರು ವುದೂ ವಾಚನಸೌಕರ್ಯಕ್ಕಾಗಿಯೇ. ಛಂದಃಶಾಸ್ತ್ರವು ಅಪರಿಮಿತವಾಗಿದ್ದು ಹೊಸಹೊಸ ಛಂದಃ ಪ್ರಕಾರಗಳನ್ನು ಕಲ್ಪಿಸಿಕೊಳ್ಳುವುದಕ್ಕೆ ಅವಕಾಶವಿದೆ. ಯಾವ ಹೊಸ ಪ್ರಕಾರವಾದರೂ ಮೂಲಭೂತವಾದ ಅಕ್ಷರ, ಮಾತ್ರಾ, ಪಾದ, ಯತಿಗಳ ನಿಯಮಗಳನ್ನು ಪಾಲಿಸದೇ ಹೋದಾಗ, ಇತ್ತ ಪದ್ಯವೂ ಆಗದೆ ಅತ್ತ ಗದ್ಯವೂ ಆಗದೆ ವಾಚಕರ ಅವಹೇಳನಕ್ಕೆ ಪಾತ್ರವಾಗುತ್ತದೆ.

ಯಾವ ಶಾಸ್ತ್ರವನ್ನೂ ಅಭ್ಯಾಸಮಾಡದೆ ಕಾವ್ಯಲಕ್ಷಣಗ್ರಂಥಗಳನ್ನೋದದೆ ಕಾವ್ಯಗ್ರಂಥಗಳನ್ನೂ ಓದದೆ, ಕಾವ್ಯಜ್ಞರ ಅನುಭವ ಪೂರ್ಣವಾದ ಸಲಹೆಯನ್ನೂ ಪಡೆಯದೆ ಅಕ್ಷರಾಭ್ಯಾಸವೇ ಪರಿಣತಿಯೆಂದುಕೊಂಡಿರತಕ್ಕವರು ಕವಿಕರ್ಮದಲ್ಲಿ ತೊಡಗುತ್ತಿದ್ದಾರೆಂಬುದು ಚಿಂತೆಗೆ ಕಾರಣವಾಗಿದೆ. ಈ ಪಿಡುಗು ಸಂಸ್ಕೃತ ಕವಿಗಳಲ್ಲಿಯೂ ಸಂಕ್ರಮಿಸುತ್ತಿದೆಯೆಂಬುದು ನಮ್ಮ ಕೊರಗು. ಯಾವುದೇ ಒಂದು ಸಂಪ್ರದಾಯವು ಬಹುಕಾಲದಿಂದ ಬಹುಜನರ ಪರೀಕ್ಷೆಗೆ ಒಳಗಾದ ಪ್ರಯುಕ್ತ ಸಾರವತ್ತಾಗಿರುತ್ತದೆ. ಬಡಗಿಯೂಸಹ ತನ್ನ ಶಿಲ್ಪಕರ್ಮದಲ್ಲಿ ಪರಿಣತಿಯನ್ನು ಪಡೆಯದೆ ಮರಕೆತ್ತುವ ಕೆಲಸಕ್ಕೆ ಕೈಹಾಕುವುದಿಲ್ಲ.

ಪ್ರಕೃತ, ಶ್ರೀಗುರುಕೃಪಾತರಂಗಿಣಿಯು ಸಂಪ್ರದಾಯದ ಚೌಕಟ್ಟಿನಲ್ಲಿ ರಚಿತವಾದ ಕಾವ್ಯ. ಇಲ್ಲಿ ಬಳಸಿರುವ ವೃತ್ತಗಳು ಸುಪ್ರಸಿದ್ಧವಾದವು ಕವಿಸಮಯ ವನ್ನು ಪರಿಪಾಲಿಸಲಾಗಿದೆ. ವ್ಯಾಕರಣ ಶಾಸ್ತ್ರದ ಮರ್ಯಾದೆಯನ್ನು ಉಲ್ಲಂಘಿಸಿಲ್ಲ ಕವಿಯ ಶಬ್ದಸಂಪತ್ತು, ಕಲ್ಪನಾಸಾಮರ್ಥ್ಯ, ಅಲಂಕಾರವಿನ್ಯಾಸ, ಸಮುಚಿತ ವಾದ ಪದಶಯ್ಯೆ, ಐತಿಹಾಸಿಕ ಕಥಾಸರಣಿ–ಇವು ಮೆಚ್ಚತಕ್ಕವು ಪ್ರಾಚೀನ ಸಂಸ್ಕೃತ ಕಾವ್ಯಗಳಿಗೆ ಸರಿದೂಗುವ ಅರ್ಹತೆಯುಳ್ಳ ಇಂತಹ ಕಾವ್ಯವನ್ನು ರಚಿಸ ಬಲ್ಲ ಕವಿಗಳು ಈಗಲೂ ಇದ್ದಾರೆಂಬುದು ಹೆಮ್ಮೆ ಪಡತಕ್ಕ ಸಂಗತಿ,

ಬಹು ನಾಯಕವಾದ ಕಾವ್ಯವೂ ಉಂಟು, ಕಾಳಿದಾಸಮಹಾಕವಿಯ ರಘು ವಂಶವು ಇದಕ್ಕೆ ಪ್ರಥಮೋದಾಹರಣೆ ಶ್ರೀಗುರುಕೃಪಾತರಂಗಿಣಿಯ ನಾಯಕ ರೆಲ್ಲರೂ ಮಠಾಧಿಪತಿಗಳಾದ ಯತೀಶ್ವರರು. ಪ್ರಧಾನವಾದದ್ದು ಶಾಂತರಸ ಯತಿ ಪರಂಪರೆಯ ಸಾಧನೆ ಕಥಾವಸ್ತು. ಶ್ರೀಶಂಕರಭಗವತ್ಪಾದರ ಆಜ್ಞೆಯಂತೆ ಅವರ ಶಿಷ್ಯರಿಂದ ಮಠದ ಸ್ಥಾಪನೆ, ಅನಂತರ ಬಂದ ಪೀಠಾಧಿಪತಿಗಳ ಚರಿತೆ ಇವಿಷ್ಟು ಕಾವ್ಯ- ಶೈಲಿಯಲ್ಲಿ ವರ್ಣಿತವಾಗಿವೆ. ರಘುವಂಶ ಮಹಾಕಾವ್ಯದಲ್ಲಿ ಶ್ರೀರಾಮಚರಿತೆಗೆ ಪ್ರಾಧಾನ್ಯವಿದ್ದಂತೆ, ಈ ಕಾವ್ಯದಲ್ಲಿ ಪ್ರಕೃತ ಪೀಠದಲ್ಲಿರುವ ಪೂಜ್ಯ ಗುರುವರ್ಯರಾದ ಶ್ರೀ ಶ್ರೀ ರಾಘವೇಂದ್ರಭಾರತೀಮಹಾಸ್ವಾಮಿಗಳ ಚರಿತೆಗೆ ಪ್ರಾಧಾನ್ಯವು ಸಂದಿದೆ. ಈ ಚರಿತೆ ಕವಿಗೆ ಪ್ರತ್ಯಕ್ಷವಾದ್ದರಿಂದ ವಿಸ್ತಾರವಾಗಿ ವರ್ಣಿಸಲು ಸಾಧ್ಯವಾಗಿದೆ. ಹಿಂದಿನ ಯತೀಶ್ವರರು ತಪಸ್ವಿಗಳೂ ಮಹಾಮಹಿಮರೂ ಆಗಿದ್ದು ಹಲವಾರು ಪ್ರಶಂಸನೀಯಕಾರ್ಯಗಳನ್ನು ಸಾಧಿಸಿದ್ದರೆಂಬುದು ಸುನಿಶ್ಚಿತ.

ಯತೀಶ್ವರರೇ ಕಾವ್ಯದಲ್ಲಿ ಕಥಾನಾಯಕರಾದಾಗ ಶಾಂತರಸವು ಪ್ರಧಾನಸ್ಥಾನ ವನ್ನುವಹಿಸಿಕೊಳ್ಳುವುದು ಸಹಜ. ತಪೋಮಾಹಾತ್ಮ್ಯದ ನಿರೂಪಣೆ ಬಂದಾಗ ಅದ್ಭುತ ರಸವು ಅಲ್ಲಲ್ಲಿ ಮಿಂಚುತ್ತದೆ ಧರ್ಮನಿಷ್ಠೆ, ವೈರಾಗ್ಯ, ಔದಾರ್ಯ, ಕಾರು ಣ್ಯ ವಿದ್ಯಾ ಮಹಿಮೆಗಳು ಈ ಯತೀಶ್ವರರಲ್ಲಿ ಕೀರ್ತನೀಯ ಅಂಶಗಳು. ಗುರು ಭಕ್ತಿ, ಕರ್ಮನಿಷ್ಠೆ, ಸತ್ಕಾರ್ಯ ಪ್ರವಣತೆ – ಮುಂತಾದವು ಭಕ್ತರಲ್ಲಿ ವರ್ಣನೀಯ ವಿಷಯಗಳು. ಶೃಂಗಾರ ವೀರಾದಿಗಳ ಪ್ರಸಕ್ತಿಯೇ ಇಲ್ಲದಿದ್ದರೂ ಕವಿಯ ಜಾಣ್ಮೆ ಯಿಂದ ಇದೊಂದು ಶ್ರೇಷ್ಠವಾದ ಕಾವ್ಯವಾಗಿ ಪರಿಣಮಿಸಿದೆ

ಶ್ರೀ ರಾಮಚಂದ್ರಾಪುರದ ಮಠದ ಇಷ್ಟದೇವತೆಯಾದ ಶ್ರೀರಾಮನ ಸ್ತುತಿ ಯಿಂದ ಕಾವ್ಯವು ಆರಂಭವಾಗುತ್ತದೆ–

**ಯನ್ನಾಮ ಕೀರ್ತನರಸಾಪ್ಲುತಚಿತ್ತವೃತ್ತಿ–**
**ರ್ನಿಷ್ಕಲ್ಮಶಃ ಕುಲಪತಿಃ ಪ್ರಥಮಃ ಕವೀನಾಮ್ ।**
**ರಾಮಾಯಣಂ ನವರಸಾಂಬುನಿಧಿಂ ವ್ಯತಾನೀತ್**
**ತಂ ರಾಮಚಂದ್ರಮನಿಶಂ ಪ್ರಣಮಾಮಿ ಮೂರ್ಧ್ನಾ ॥**

ಈ ಮಂಗಳಶ್ಲೋಕವನ್ನು ಓದುತ್ತಿದ್ದಂತೆಯೇ ಕಾವ್ಯದ ಮಂಜುಳತೆ ಗೋಚರವಾಗಿ ಬಿಡುತ್ತದೆ. ಚರಿಗೆಯು ಅನ್ನ ಪಕ್ವವಾಗಿದೆಯೆಂಬುದನ್ನು ತಿಳಿಯಲು ಒಂದು ಅಗಳು ಸಾಕಾಗುತ್ತದೆ. ಚಂದ್ರಮೌಳೀಶ್ವರನ ಲಿಂಗವು ಭಗವತ್ಪಾದಾಚಾರ್ಯರಿಂದವರಕ್ಕೆ ಅನುಗೃಹೀತವಾದದ್ದು. ಚಂದ್ರಮೌಳಿಯು "ಘನಚಿತ್‌ಪ್ರಕಾಶ" ನಾದ್ದರಿಂದ ಲೋಕಾಂಧಕಾರದಂತಿದ್ದ ಅಂಧಕಾಸುರನನ್ನು ಲೀಲೆಯಿಂದ ಸಂಹರಿಸಿದನು. ಶಿವನು "ಕರುಣಾಂಬುರಾಶಿ" ಯಾದ್ದರಿಂದಲೇ ಲೋಕದ ಅಂಧಕಾರವನ್ನು ನೀಗಿಸುವುದು ಅವನ ಕರ್ತವ್ಯವಾಯಿತು. ಚಂದ್ರನು ಮೌಳಿಯಲ್ಲಿದ್ದುದರಿಂದ ಅಂಧಕಾಸುರನನ್ನು ಸುಟ್ಟರೂ ಲೋಕಕ್ಕೆ ಉರಿ ತಾಗದೆ ತಂಪಾದ ಬೆಳದಿಂಗಳು ಹರಡಿತೆಂಬುದು ಎರಡನೆಯ ಶ್ಲೋಕದಲ್ಲಿ ಅಭಿವ್ಯಕ್ತವಾದ ಕವಿಯ ಆಶಯ. ಈ ಪ್ರಕಾರವಾಗಿ ಕಾವ್ಯದಲ್ಲಿ ಬಳಸಿದ ಪದಗಳು ಎಷ್ಟು ಅರ್ಥಪುಷ್ಟವಾಗಿವೆಯೆಂಬುದನ್ನು ತಿಳಿದು ಸಹೃದಯನು ಆನಂದಿಸಬಲ್ಲ.

'ಕ್ವಾಹಂ ಮಂದಮತಿಃ ಕ್ವಾಯಂ ಮಹಿಮಾ ಸದ್ಗುರೋರ್ಮಹಾನ್' ಎಂದು ತಿಳಿಸಿರುವ ಕವಿನಿಷ್ಠ ವಿನಯದಲ್ಲಿ ಮಹಾಕವಿಕಾಳಿದಾಸನ "ಕ್ವ ಸೂರ್ಯಪ್ರಭವೋ ವಂಶಃ" ಎಂಬ ಶ್ಲೋಕದ ಛಾಯೆ ಇದ್ದರೂ ನೂತನ ನಿದರ್ಶನಪ್ರದರ್ಶನದಿಂದ ಮನೋಹರವಾಗಿದೆ ಮೂಲಮಠ ಸ್ಥಾಪನೆಗೆ ಮಹಾಕಾರಣ ನ್ಥಾನರಾದ ಶ್ರೀಶಂಕರ ಭಗವತ್ಪಾದರ ವರ್ಣನೆ ವಿಸ್ತೃತವಾಗಿದ್ದರೂ ಪ್ರಕೃತೋಚಿತವೇ ಸರಿ. ಈ ಸಂದರ್ಭದಲ್ಲಿ ಪ್ರವೃತ್ತವಾದ ಶ್ಲೋಕಗಳ ಪ್ರೌಢಿಮ ಪ್ರಸನ್ನರಮಣೀಯವಾದದ್ದು. 'ಕಲ್ಲೋಲ ಮಾಲವರುಣಾಲಯತೀರಚಾರೀ (೧-೨೧), ದ್ರಾಕ್ಷೇಕ್ಷು ಮುಗ್ಧಮಧು ಸಂನಿಭವಾಕ್ ಪ್ರವಾಹೈಃ (೧-೪). ಕಲ್ಲೋಲ ಫೇನಿಲ ಜಲೋತ್ಕಿರಸಿಂಧುಕೂಲೇ' (೧-೩೨) ಮುಂತಾದಪದರಚನೆಯು ಶಿಶುಪಾಲವಧಾದಿಪ್ರಾಚೀನಮಹಾಕಾವ್ಯಗಳ ಸ್ಮರಣೆಯನ್ನು ತರುತ್ತದೆ.

ರಘುವಂಶದ ಹದಿನೇಳನೆಯ ಸರ್ಗದಿಂದ ಕಥೆ ಶೀಘ್ರವಾಗಿ ಮುಂದುವರೆಯುತ್ತದೆ ಕುಶಪುತ್ರನಾದ ಅತಿಥಿಯಿಂದಾರಂಭಿಸಿ ರಘುವಂಶದಲ್ಲಿ ಜನಿಸಿದ ಬಹುಸಂಖ್ಯೆಯ ರಾಜರನ್ನು ನಾಮ ಕೀರ್ತನ ಪೂರ್ವಕವಾಗಿ ಸ್ಮರಿಸುತ್ತಾ ಅವರಲ್ಲಿದ್ದ ವಿಶೇಷ ಗುಣಗಳನ್ನು ಮಾತ್ರಎತ್ತಿತೋರಿಸುತ್ತ ಕಾಳಿದಾಸನು ಶೀಘ್ರಗಾಮಿಯಾಗುತ್ತಾನೆ. "ವ್ಯಾಸಸಮಾಸಾಭ್ಯಾಮ್" ಎಂಬ ನ್ಯಾಯವನ್ನು ಮಹಾಕವಿಯುಅನುಸರಿಸುತ್ತಾನೆ. ಅಂತೆಯೇ ಪ್ರಕೃತ, ಕವಿಯು ಭಗವತ್ಪಾದರ ಶಿಷ್ಯರಾದ ಶ್ರೀವಿದ್ಯಾನಂದಸ್ವಾಮಿಗಳಿಂದ ಮುಂದಕ್ಕೆ ಕರಕಮಲ ಜನ್ಮರಾದ ಅನೇಕ ಯತೀಶ್ವರರನ್ನು ನಾಮಗ್ರಾಹವಾಗಿ ತಿಳಿಸುತ್ತ ಮುಂದುವರೆಯುವುದು ಕಾವ್ಯಮಾರ್ಗದಲ್ಲಿ ಅನುಸರಿಸ ಬೇಕಾದ ಒಂದು ಚಾತುರ್ಯ ವೆನಿಸುತ್ತದೆ. ಉದಾಹರಣೆಗೆ, ಈ ಶ್ಲೋಕವನ್ನು ನೋಡಬಹುದು.

ಚಿದ್ಬೋಧಾಖ್ಯಾನ್ನಿಜಕುಲಗುರೋಃ ಪ್ರಾಪ್ತತುರ್ಯಾಶ್ರಮ ಶ್ರೀಃ
ಗೋಕರ್ಣೇಽಸ್ಮಿನ್ ಮಠಪತಿರಭೂದ್ರಾಘವೇಶಾಭಿಧಾನಃ ।
ತೇನೋನ್ನೀತಃ ಕಿಲ ಸುಮನಸಾಽದ್ವೈತಸಿದ್ಧಾಂತಸಾರಃ ।
ಸ್ತಂಭೀಭೂತೋ ಯದಿಹ ಮುಖರಃ ಶೂನ್ಯವಾದಿಪ್ರವಾದಃ ॥
೨-೯

ವಿಶೇಷವೇನೆಂದರೆ, ರಘುವಂಶದಲ್ಲಿ ಶ್ರೀರಾಮಚಂದ್ರನ ತರುವಾಯ ಆತನ ವಂಶೀಯರ ರಾಜಪರಂಪರೆಯಲ್ಲಿ ಯಾರೂ ಆತನ ಔನ್ನತ್ಯಕ್ಕೆ ಏರದೆ ಹೋದರು. ಗುಣ, ಕೀರ್ತಿ, ಪೌರುಷಗಳಲ್ಲಿ ಕ್ರಮೇಣ ಹ್ರಾಸ ಉಂಟಾದ ಅನುಭವ ಓದುಗರಿಗೆ ಆಗುತ್ತ ಹೋಗುತ್ತದೆ. ಈ ಅವನತಿಪ್ರವಾಹವು ಹರಿಯುತ್ತ ಅಗ್ನಿವರ್ಣನಲ್ಲಿ ಸಮಾಪ್ತವಾಗುತ್ತದೆ. ಈ ಗುರುಪರಂಪರೆಯಲ್ಲಾದರೋ ತಪೋವಿದ್ಯಾದಿ ಮಹಾ ಗುಣಪ್ರವಾಹವು ಯಾವ ಹ್ರಾಸವನ್ನೂ ಅನುಭವಿಸದೆ ಏಕರೂಪವಾಗಿ ಹರಿಯುತ್ತ ಹೋಗುತ್ತದೆ. ಕೆಲವೆಡೆ ಈ ಪ್ರವಾಹವು ತನ್ನ ನಿರ್ಮಲ ಜಲವನ್ನು ಇನ್ನೂ ಹೆಚ್ಚಿಸಿ ಕೊಂಡು ಮಹಾನದಿಯಾಗಿ ಪ್ರವಹಿಸುತ್ತ ಬಂದಿದೆ. ಕ್ರಮವಾಗಿ ಪ್ರಾಚೀನ ಆಚಾರ್ಯರ ಸಂಕ್ಷಿಪ್ತವಾದ ವರ್ಣನೆ ಮೊದಲನೆಯ ಎರಡು ತರಂಗಗಳಲ್ಲಿ ಬಂದಿದೆ.

ಶ್ರೀರಾಮಚಂದ್ರಭಾರತೀಸ್ವಾಮಿಗಳ ಕಾಲದಲ್ಲಿ ನಿರ್ಮಿತವಾದ ದಂತಸಿಂಹಾ ಸನದ ವರ್ಣನೆಯು ಕಾವ್ಯದೃಷ್ಟಿಯಿಂದ ಅತ್ಯಂತ ಮನೋಹರವಾಗಿದೆ. ಮಠದ ಪಟ್ಟದಾನೆ ಮೃತವಾದ ಮೇಲೆ ಅದರ ದಂತಗಳಿಂದಲೇ ನಿರ್ಮಿಸಿದ ಫಲಕಗಳಲ್ಲಿ ರುವ ಕೆತ್ತನೆಗಳಿಂದ ಭೂಷಿತವಾದ ಸಿಂಹಾಸನವಿದು. ಶ್ರೀಮಠದ ಭಕ್ತರಾದ ಹೊಸ ಬಾಳೆ ಪುಟ್ಟಪ್ಪನವರ ಮಾರ್ಗದರ್ಶನದಲ್ಲಿ ಸೊರಬದ ಹಿರಣ್ಯಪ್ಪ ಎಂಬ ವಿಖ್ಯಾತ ಶಿಲ್ಪಿವರ್ಯರು ವಿಸ್ಮಯಾವಹವಾದ ಶಿಲ್ಪವನ್ನು ಕೆತ್ತಿದ್ದಾರೆ. ಈ ಬಗೆಯ ಕಲಾ ಪ್ರಾವೀಣ್ಯವು ಅನ್ಯತ್ರ ದುರ್ಲಭ. ರಾಮಾಯಣ ಮಹಾಭಾರತಾದಿಗಳ ಮುಖ್ಯ ಸನ್ನಿವೇಶಗಳನ್ನು ಚಿತ್ರಿಸಿರುವ ಈ ದಂತ ಶಿಲ್ಪವು ಬೇಲೂರು, ಹಳೇಬೀಡುಗಳಲ್ಲಿ ರುವ ಶಿಲಾಶಿಲ್ಪದ ಘನತೆಗೆ ಏರಬಲ್ಲದು, ಕವಿಯ ಮಾತುಗಳಲ್ಲಿ ಇದರ ಸೌಂದರ್ಯ ವನ್ನು ಸವಿಯಬಹುದು–

ದೇವ ಶಿಲ್ಪಿಯಾದ ವಿಶ್ವಕರ್ಮನು ಜಗತ್ತಿಗೆ ತನ್ನ ಕೌಶಲದ ಒಂದು ಅಚ್ಚರಿ ಯನ್ನು ತೋರಿಸುವುದಕ್ಕಾಗಿ ಈ ಶಿಲ್ಪವನ್ನು ನಿರ್ಮಿಸಿರಬೇಕು-

ತ್ವಷ್ಟಾ ನೂನಂ ನಿಖಿಲಜಗತೀಂ ಕೌತುಕಂ ದರ್ಶಯಿಷ್ಯನ್
ನವ್ಯಂ ಕಾವ್ಯಂ ವ್ಯರಚಯದಿದಂ ದಿವ್ಯಶಿಲ್ಪಾಪದೇಶಮ್ । ೨-೭೯

ಈ ಶಿಲ್ಪವನ್ನು ನಮ್ಮಕಾವ್ಯವೆಂದಿರುವುದು ತುಂಬ ಮನೋಜ್ಞವಾಗಿದೆ. ರಾಮಾಯಣ ಮಹಾಭಾರತಗಳ ಪ್ರತಿಕೃತಿಯಾಗಿ ರಸ ಭಾವ ಘನವಾದ ಈ ಚಿತ್ರಗಳ ಸಮುದಾಯ ಒಂದು ಕಾವ್ಯವೇ ಸರಿ. ಇದು ದೃಶ್ಯಕಾವ್ಯ! ಇಲ್ಲಿ "ದೃಶೇಶ್ಚ" ಎಂಬ ವಾರ್ತಿಕದಿಂದ "ನಿಖಿಲ ಜಗತೀಂ ಕೌತುಕಂ" ಎಂಬ ಎರಡು ಕರ್ಮಗಳು ಬಂದಿವೆ– ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಸಿಂಹಾಸನದ ವರ್ಣನೆಯಲ್ಲಿ ಬಂದಿರುವ ಉಪಮಾ ರೂಪಕ ಉತ್ಪ್ರೇಕ್ಷೆ ಅತಿಶಯೋಕ್ತಿಗಳು ಯಥಾರ್ಥವಾದವು. ಈ ಪ್ರಸಂಗದಲ್ಲಿ ಪ್ರಸ್ತುತವಾದ, ಒಂಭತ್ತು ಶ್ಲೋಕಗಳು ಕವಿತಾಸಾಮರ್ಥ್ಯಕ್ಕೆ ಉತ್ತಮ ನಿದರ್ಶನಗಳು ಈ ಸಿಂಹಾಸನವನ್ನು ಸಂದರ್ಶಿಸಿರುವ ಯಾರೂ ಈ ವರ್ಣನೆಗಳು ಕವಿಕಲ್ಪನಾಮಾತ್ರಗಳೆಂದು ಹೇಳಲಾರರು.

ಬಹಳ ವರ್ಷಗಳ ಹಿಂದೆ ಈ ಸಿಂಹಾಸನವನ್ನು ನೋಡಿದ ನೆನಪು ಈ ಶ್ಲೋಕಗಳನ್ನು ರಚಿಸುವಂತೆ ಈಗ ನನ್ನನ್ನು ಚೋದಿಸಿತು–

ಅಮೃತಸಿಂಧು ಸಮುದ್ಗತ ವೀಚಯೋ
 ಹಿಮಕರಸ್ಯ ಕರೈಃ ಕಲಿತಾ ಭೃಶಮ್ ।
ನನು ಮಯೇನ ಘನತ್ವಮವಾಪಿತಾ
 ವಿದಧಿರೇ ಮನಸಾ ನವಮೂರ್ತಯಃ ॥ ೧

ಕಿಮು ಸುಧರ್ಮ ವಿಭೂಷಣಮಾಸನಂ
 ಸುರಪತೇರ್ವಚನಾದಮರಾಂಗನಾಃ ।
ಮೃದುಲಹಸ್ತಸಮುದ್ಧೃತಮಾದರಾತ್
 ಗುರುಪದೇ ವಿನಿವೇಶ್ಯ ದಿವಂ ಯಯುಃ ॥ ೨

ನಯನಮೋಹನ ಶಿಲ್ಪಕಲಾಗೃಹೇ
 ಭುವನಭಾಗ್ಯಬಲೇನ ಸಮಾರ್ಜಿತೇ ।
ಅವಹಿತಾಶ್ಶಿರದರ್ಶನಕೌತುಕಾತ್
 ಅನಿಮಿಷಾ ನಿಮಿಷಾದಭವನ್ ಜನಾಃ ॥ ೩

ಅಹಹ! ಭಕ್ತಿರಹೋ! ಗಜಸತ್ತಮಃ
 ಸ್ಥಿರಮವಾಪ ಯಶೋ ಗುರುಸೇವಯಾ ।
ಪುನರನೇನ ಪರಿತ್ಯಜತಾ ತನುಂ
 ರುಚಿರದಂತಯುಗಂ ಗುರವೇಽರ್ಪಿತಮ್ ॥ ೪

ಮೂರನೆಯ ತರಂಗದಲ್ಲಿ ಈ ಪರಂಪರೆಯ ಮೂವತ್ತೈದನೆಯ ಆಚಾರ್ಯರಾದ ಅದ್ಯತನ ಶ್ರೀರಾಘವೇಂದ್ರಭಾರತೀಸ್ವಾಮಿಗಳ ಪೂರ್ವಾಶ್ರಮಕ್ಕೆ ಸಂಬಂಧಿಸಿ

ದಂತೆ ಜನನ ಬಾಲ್ಯ, ವೇದಾಧ್ಯಯನ, ಅವರನಂತರ ಶ್ರೀರಾಮಚಂದ್ರಭಾರತೀ ಸ್ವಾಮಿಗಳ ಕೃಪಾದೃಷ್ಟಿ, ಶ್ರೀಮಠದ ಉತ್ತರಾಧಿಕಾರಿಯಾಗಿ ಆಯ್ಕೆ,-ಮುಂತಾದ ವೃತ್ತಾಂತಗಳೂ ಅನಂತರ ಸಂನ್ಯಾಸದೀಕ್ಷಾಪೂರ್ವಕವಾಗಿ ವ್ಯಾಖ್ಯಾನ ಪೀಠಾರೋಹಣವೂ ಸುಂದರವಾಗಿ ನಿರೂಪಿತವಾಗಿವೆ ಗುರುಗಳು ಪಟ್ಟಾಭಿಷಿಕ್ತರಾದಾಗ ಶಿಷ್ಯರಿಗೆ ಮಾಡಿದ ಉಪದೇಶವನ್ನು ವರ್ಣಿಸುವ ಈ ಶ್ಲೋಕವು ಶಬ್ದಾರ್ಥಗಳೆರಡರಿಂದಲೂ ಮನೋಹರವಾಗಿದೆ. ಇದೊಂದು ಉದಾಹರಣೆ-

**ಜ್ಞಾನಿನೋ ಹ್ಯಕಿಂಚನಾ ಸದೈವಯೋಗ ಚಿಂತನಾಃ**
**ಭೋಗಿಶಾಯಿನೋ ಹರೇರ್ನಿಯೋಗಭಾಗಿನಃ ಕಿಲ ।**
**ಲೋಕಸಂಗ್ರಹಂ ಪುನಶ್ಚಿಕೀರ್ಷವೋಽದ್ಯ ಯೋಗಿನಃ**
**ಕರ್ಮಣಿ ಸ್ವತಃ ಪ್ರವೃತ್ತಿಮಾಪ್ನುವಂತ್ಯಕಾಮನಾಃ ॥** ೩-೮

ಇಲ್ಲಿ ಬಳಸಿರುವ ಪಂಚಚಾಮರ ವೃತ್ತಗಳು ಶ್ರವಣಪೇಯವಾದವುಗಳು ಪಂಚಚಾಮರವೃತ್ತಕ್ಕೆ ಎರಡು ಲಕ್ಷಣಗಳುಂಟು

"ರಾಜ್ಜರೌ ಜರೌ ಯದಾ ತದಾ ಹಿ ಪಂಚಚಾಮರಮ್" ಎಂಬುದೊಂದು,

"ಜರೌ ಜಗೌ ಜಗೌ ಯದಾ ತದಾ ಹಿ ಪಂಚಚಾಮರಮ್" ಎಂಬುದಿನ್ನೊಂದು. ಈ ಬಗೆಯಾದ ಎರಡು ಲಕ್ಷಣಗಳ ಪಂಚಚಾಮರಗಳು ಈ ಕಾವ್ಯದಲ್ಲಿ ಬಂದಿವೆ ಮೂರನೆಯ ತರಂಗದ ಕಡೆಯ ಶ್ಲೋಕವು ಸ್ರಗ್ಧರಾ ವೃತ್ತದಲ್ಲಿದೆ ಇಲ್ಲಿ ಬಾದಿರುವ ಪಂಚಮ್ಯಂತಪದಮಾಲೆಗಳ ಸೌಂದರ್ಯವು ಕಾವ್ಯಜ್ಞಮಾತ್ರ ಗೋಚರ. "ಶಾಂತಾತ್ ದಾಂತಾತ್ ದಯಾದ್ರಾತ್ ಯತಿಕುಲ ಮಹಿತಾತ್ ರಾಮಚಂದ್ರಾತ್ ಬುಧೇಂದ್ರಾತ್"

ನಾಲ್ಕನೇ ತರಂಗವು ಬಹಳ ದೊಡ್ಡದು. ಶ್ರೀರಾಮಚಂದ್ರಭಾರತೀಗಳ ತಿರೋಧಾನ, ಕಾಶಿಯಲ್ಲಿ ವ್ಯಾಸಂಗಮಾಡುತ್ತಿದ್ದ ವರ್ತಮಾನಶ್ರೀಗಳವರ ಆಗಮನ, ಮಠದ ಆಡಳಿತದಲ್ಲಿದ್ದ ಅವ್ಯವಸ್ಥೆ, ಮತ್ತೆ ಶ್ರೀಗಳವರು ಕಾಶಿಗೆ ಹಿಂದಿರುಗಿ ನಾನಾ ಶಾಸ್ತ್ರಗಳನ್ನು ನಿಷ್ಠೆಯಿಂದ ಅಧ್ಯಯನ ಮಾಡಿ ಗಳಿಸಿದ ಪಾಂಡಿತ್ಯ- ಇತ್ಯಾದಿ ವಿಷಯಗಳು ಪ್ರಸ್ತುತವಾಗಿವೆ. ಲಲಿತಪದಪುಂಜಗಳಿಂದ ರಂಜಿತವಾದ ಮಾಲಿನೀ ವೃತ್ತಗಳು ಇಂಪಾಗಿವೆ. ಪ್ರೌಢಶಾಸ್ತ್ರಾಧ್ಯಯನಕ್ಕಾಗಿ ಕಾಶಿಗೆ ಹೋಗಬೇಕೆಂಬ ತವಕದಿಂದ ಆ ಸಮಯದಲ್ಲಿ ಗಂಗಾನದೀದರ್ಶನವಾಗುವುದೆಂಬ ಶ್ರೀ ಶ್ರೀಗಳವರ ಬಯಕೆಯನ್ನು ವರ್ಣಿಸುವ ಶ್ಲೋಕವಿದು-

**ಹರಿಪದನಖಕಾಂತಿಸ್ವಚ್ಛಪೂರಂ ವಹಂತೀ**
**ತುಹಿನಕಿರಣಮೌಲೇರ್ಮಸ್ತಕಾನ್ನಿಷ್ಪತಂತೀ ।**
**ಶಿಶಿರಶಿಖರಿಸಾನುಪ್ರಾಂಗಣಾಂತರ್ಲುಠಂತೀ**
**ಶಿಶಿರಯತು ದೃಶೌ ಮೇ ಸಾ ಸ್ರವಂತೀ ಕದಾ ವಾ ॥**

ಐದನೆಯ ತರಂಗದಲ್ಲಿ ಮಧುರವಾದ ಶಿಖರಿಣೀ ವೃತ್ತಗಳೂ ಆರನೆಯ ತರಂಗದಲ್ಲಿ ಗಂಭೀರ ಪದನ್ಯಾಸವುಳ್ಳ ಶಾರ್ದೂಲ ವಿಕ್ರೀಡಿತಗಳೂ ಹೃದಯಂಗಮವಾಗಿವೆ. ವಿಶೇಷವಾಗಿ ಶ್ರೀ ಶ್ರೀಗಳವರು ಉಡುಪಿ ಕ್ಷೇತ್ರಕ್ಕೆ ಭೇಟಿ ನೀಡಿದ ಸಂದರ್ಭವು ಉಲ್ಲೇಖನೀಯವಾದದ್ದು. ಮಹಾನದೀಪ್ರವಾಹಗಳಂತೆ ಅಡೆತಡೆಯಿಲ್ಲದೆ ಈ ಛಂದಸ್ಸುಗಳು ಪ್ರವಹಿಸುತ್ತವೆ ಇವನ್ನು ಓದುವಾಗ ನದಿಯಲ್ಲಿ ನಾವು ಉಲ್ಲಾಸದಿಂದ ಈಜಿಕೊಂಡು ಹೋದಂತೆ ಪ್ರತೀತಿಯಾಗುತ್ತದೆ. ಈ ಎರಡು ತರಂಗಗಳಲ್ಲಿ ಈಗಿನ ಶ್ರೀ ರಾಘವೇಂದ್ರಭಾರತೀಮಹಾಸ್ವಾಮಿಗಳ ತಪಃ ಸಿದ್ಧಿಯು ಸ್ಫುಟವಾಗಿ ಪ್ರತಿಬಿಂಬಿಸಿದೆ. ಶ್ರೀ ಶ್ರೀಗಳವರು ಕೈಗೊಂಡ ಮಠಗಳ ಜೀರ್ಣೋದ್ಧಾರ ಕಾರ್ಯಕ್ರಮ, ಧರ್ಮಪ್ರಚಾರಕ್ಕಾಗಿ ಕೈಗೊಂಡ ನಿರಂತರವಾದ ಪರ್ಯಟನ, ಶಿಷ್ಯರ ವಿಷಯದಲ್ಲಿ ವಾತ್ಸಲ್ಯ, ವಿದ್ವಾಂಸರಲ್ಲಿ ಆದರ, ವಿದ್ಯಾಪ್ರಚಾರದಲ್ಲಿ ಶ್ರದ್ಧೆ, ವೈದಿಕರಲ್ಲಿ ಗೌರವ, ವೇದೋಕ್ತ ಕರ್ಮಗಳ ನಿರ್ವರ್ತನ, ದೇವತಾ ಪ್ರತಿಷ್ಠೆಯಲ್ಲಿ ಆಸಕ್ತಿ- ಮೊದಲಾದ ದೈವೀಸಂಪತ್ತು ಪರಿಣಾಮಕಾರಿಯಾಗಿ ಅಭಿವ್ಯಕ್ತವಾಗಿದೆ. ಈ ಕಾವ್ಯದ ಪ್ರಧಾನ ಕಥಾನಾಯಕರು ವರ್ತಮಾನ ಶ್ರೀ ಶ್ರೀಗಳವರೇ ಎಂಬ ಕವಿಯ ಆಶಯವು ಸ್ಪಷ್ಟವಾಗಿ ತಿಳಿದು ಬರುತ್ತದೆ

ಈ ಕಾವ್ಯದ ಸೌಂದರ್ಯದ ಗುಣವನ್ನು ಎತ್ತಿ ತೋರಿಸಿದರೆ ಈಬರವಣಿಗೆ ಇನ್ನೂ ದೀರ್ಘವಾದೀತು. ಪ್ರಕೃತೋಚಿತವಾಗಿ ಮೆಚ್ಚಿಗೆಯ ನಾಲ್ಕು ಮಾತುಗಳನ್ನು ಹೇಳುವುದೇ ನನಗೆ ಉದ್ದಿಷ್ಟವಾದದ್ದು. ಶ್ರೀ ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರಿಗೆ ಅರ್ಪಿಸಿದ ಅನುರೂಪವಾದ ಪ್ರಶಂಸಾರ್ಹ ಕಾವ್ಯವಿದು.

ಗ್ರಂಥಕರ್ತರ ಪರಿಶ್ರಮವು ಸಾರ್ಥಕವಾಗಬೇಕಾದರೆ ಸಂಸ್ಕೃತವನ್ನು ಬಲ್ಲ ಕಾವ್ಯರಸಿಕರು ಇದನ್ನು ಓದಿ ಆನಂದಿಸಬೇಕು. ಸಂಸ್ಕೃತವನ್ನು ಅರ್ಥಮಾಡಿಕೊಳ್ಳಲಾಗದವರಿಗಾಗಿ ಗ್ರಂಥಕರ್ತರೇ ಕನ್ನಡದಲ್ಲಿ ಸರಳವಾಗಿ ಮೂಲವನ್ನು ಅನುವಾದಿಸಿಕೊಟ್ಟಿದ್ದಾರೆ ಸಮಸ್ತ ಶಿಷ್ಯವೃಂದದವರು ಶ್ರೀರಾಮಚಂದ್ರಾಪುರ ಮಠದ ವೈಭವವನ್ನು ವರ್ತಮಾನ ಶ್ರೀಶ್ರೀಗಳವರ ಸಾಧನಭೂಮಿಗಳನ್ನೂ ಅರಿತುಕೊಳ್ಳಲು ಈ ಕಾವ್ಯವು ಉಪಯುಕ್ತವಾಗಿದೆ ಸಂಸ್ಕೃತ ವಾಙ್ಮಯಕ್ಕೆ ಬೆಲೆ ಬಾಳುವ ಗ್ರಂಥವನ್ನರ್ಪಿಸಿದ ವಿದ್ವಾನ ಭಾಸ್ಕರಭಟ್ಟರ ಲೇಖನಿಗೆ ನಮಸ್ಕಾರ.

**ಮದ್ಗುರುಕೃಪಯೋದ್ಭೂತಂ ಚಿದ್ಘನಸದ್ವಸ್ತ್ವಲಂಕರಣಮ್ ।**
**ಭಾಸ್ಕರಕರಸಂಭಿನ್ನಂ ಭಾತಿ ಚಿರಂ ಭೂತಲೇ ವಚಃಪದ್ಮಮ್ ॥**

ಬೆಂಗಳೂರು
12-11-1989

**ಎನ್. ರಂಗನಾಥಶರ್ಮಾ**

# ವಿಜ್ಞಾಪನೆ

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥

ಮಾನ್ಯಸಹೃದಯರೇ!

'ಆಚಾರ್ಯವಾನ್ ಪುರುಷೋ ವೇದ' ಎಂದು ಶ್ರುತಿ. ಎಲ್ಲಾ ಪಾರಮಾರ್ಥಿಕ ಜ್ಞಾನಸಂಪತ್ತಿಗೂ ಆಚಾರ್ಯರ ಅನುಗ್ರಹ ಮತ್ತು ಉಪದೇಶಗಳೇ ಮೂಲ ಎಂದು ಇದರ ಸಾರಾಂಶ. ಎಲ್ಲಾ ಲೌಕಿಕ ಪಾರಲೌಕಿಕ ಶ್ರೇಯಸ್ಸು, ಗುರು ಕೃಪೆಯಿಂದ ಲಭ್ಯ" ಎನ್ನುವ ಮಾತು ಯಥಾರ್ಥ. ಹುಟ್ಟಿದ ಶಿಶುವಿಗೆ ತಾಯಿಯೇ ಮೊದಲ ಗುರು ತಾಯಿಯಿಂದ ಶಿಕ್ಷಣ ಪಡೆದ ಮಗು ನಿತ್ಯವೂ ತನ್ನ ಪರಿಸರದ ನಡೆನುಡಿಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಅರಿವು ಪಡೆದು ತೊದಲು ನುಡಿದು ತಪ್ಪು ಹೆಜ್ಜೆಹಾಕಿ ಕ್ರಮೇಣ ಸರಿಯಾದ ದಾರಿ ಹಿಡಿಯಲು ತೊಡಗುವುದು ವಟುವಿಗೆ ಉಪನಯನದಲ್ಲಿ ಗಾಯತ್ರೀ ಉಪದೇಶವಿತ್ತ ತಂದೆಯೇ ಆಚಾರ್ಯ, ಗುರುಕುಲದಲ್ಲಿ ಸೇರಿದ ವಿದ್ಯಾರ್ಥಿಗೆ ಆಚಾರ್ಯರು ವೇದವೇದಾಂಗಳ ಅಭ್ಯಾಸ ಅಥವಾ ಅಧ್ಯಯನ ಮಾಡಿಸುವರು. ಸ್ನಾತಕನಾದ ಮೇಲೆ ಬ್ರಹ್ಮಚಾರಿಯು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಆಚಾರ್ಯರ ಆದೇಶದಂತೆ ಧರ್ಮ, ದೇವ ಪಿತೃಕಾರ್ಯಾದಿಗಳ ಅನುಷ್ಠಾನದಲ್ಲಿ ಪ್ರಮಾದ ಹೊಂದದೇ ಜಾಗರೂಕನಾಗಿದ್ದು, ತನ್ನ ಆಶ್ರಮೋಚಿತವಾದ ನಡವಳಿಕೆಯಿಂದ ಜನರ ಮೆಚ್ಚುಗೆ ಪಡೆದು ಬಾಳುವನು. ತನ್ನ ಧರ್ಮಾಚರಣೆಯಿಂದ ಶ್ರೇಯಸ್ಸನ್ನು ಪಡೆಯುವನು. ಮಕ್ಕಳಾದ ಬಳಿಕ ಮಗನಿಗೆ ಕುಟುಂಬದ ಜವಾಬ್ದಾರಿಯನ್ನು ವಹಿಸಿಕೊಟ್ಟು ವಾನಪ್ರಸ್ಥಾಶ್ರಮಕ್ಕೆ ಹೆಜ್ಜೆ ಇಡುವನು ವಿರಕ್ತನಾಗಿ ಪಾರಮಾರ್ಥಿಕದಾರಿಹಿಡಿದ ಸಾಧಕನು ಶಮದಮಾದಿಸಾಧನಸಂಪತ್ತು ಪಡೆದು ಮನೆತ್ಯಜಿಸಿ ಮುಮುಕ್ಷುವಾಗಿ ಸದ್ಗುರುವಿನ ದಿವ್ಯಸನ್ನಿಧಿಗೆ ಹೋಗುವನು. ಗುರುವು ತನ್ನ ಬಳಿಗೆ ಬಂದ ಶಿಷ್ಯನನ್ನು ಪರೀಕ್ಷಿಸಿ, ಅವನು ಪಾತ್ರನೆಂದು ಗೊತ್ತುಪಡಿಸಿಕೊಂಡು, ಅವನಿಗೆ ಸಂನ್ಯಾಸದೀಕ್ಷೆಯಿತ್ತು, ಮಹಾವಾಕ್ಯೋಪದೇಶ ಮಾಡಿ, ಅವನಿಗೆ ಸ್ವಸ್ವರೂಪದ ಸಾಕ್ಷಾತ್ಕಾರವುಂಟಾಗಲು ಅನುಗ್ರಹಿಸುವನು ಸಾಂಸಾರಿಕ ದುಃಖದಿಂದ ಬಿಡುಗಡೆ ಮಾಡಿಸುವನು. ಅವಿದ್ಯಾ ನಿವೃತ್ತಿ ಹೊಂದಿದ ಸಾಧಕನು ಸ್ವಸ್ವರೂಪನಾದ ಸಚ್ಚಿದಾನಂದದಲ್ಲಿ ಎರಕ ವಾಗುವನು, ಬ್ರಹ್ಮಾದ್ವೈತದ ಅನುಭವವಾಗುವ ತನಕ ಗುರುವಿನ ಸಂಬಂಧ ಶಿಷ್ಯರಿಗೆ ಇರುವುದೆಂದು ಮೇಲಿನ ಶ್ರುತಿಗೆ ತಾತ್ಪರ್ಯ,

ಪ್ರಪಂಚದಲ್ಲಿ ಗುರುಕೃಪೆಯು ಹೊರತು ಮಾನವನಿಗೆ ತನ್ನ ಇಚ್ಛೆ ಸಿದ್ಧಿಸದು. ಅಜ್ಞಾನದ ಕಗ್ಗತ್ತಲೆಯಿಂದ ಕುರುಡಾದ ಕಣ್ಣಿಗೆ ಜ್ಞಾನದ ಕಾಡಿಗೆಯ ಕಡ್ಡಿಯ ಮೂಲಕ ಪರೆತೆಗೆದು ಜ್ಞಾನದ ಕಣ್ಣು ತೆರೆಯಿಸುವ ಮಹತ್ತರವಾದ ಕಾರ್ಯ ಗುರುವಿನಿಂದಲ್ಲದೇ ಬೇರೆಯವರಿಂದ ಆಗದು. ಆದುದರಿಂದ ಗುರುವಿನ ಸ್ಥಾನ ದೊಡ್ಡದು ಶ್ರೀಮಚ್ಛಂಕರ ಭಗವತ್ಪಾದರಿಗೂ ಗುರುಗೋವಿಂದಭಗವತ್ಪಾದರ ಅನುಗ್ರಹವಾದ ಬಳಿಕ ಅಧ್ಯಾತ್ಮ ಪ್ರಗತಿಯುಂಟಾದುದಷ್ಟೆ. ಶ್ರೀ ಶಂಕರಾಚಾರ್ಯರ ಶಿಷ್ಯ ಪರಂಪರೆಯ ಎಲ್ಲಾ ಪೀಠೀಯಾಚಾರ್ಯವರ್ಯರೂ ಹಿಂದೂಸಮಾಜದ ಧರ್ಮ ಗುರುಗಳಾಗಿರುತ್ತಾರೆ. ಗುರುಕೃಪೆಯೇ ಏಳಿಗೆಗೆ ಕಾರಣವೆಂಬುದು ನನ್ನ ಅನುಭವದ ಮಾತು. ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಪರಂಪರೆಯ ಶ್ರೀಮದ್ರಾಮಚಂದ್ರಾಪುರದ ಗುರುವರೇಣ್ಯರು ನನ್ನ ವಂಶದ ಹಿರಿಯರ ಕಾಲದಿಂದಲೂ ನಮಗೆಲ್ಲರಿಗೂ ಪೂಜ್ಯರೂ ಉಪದೇಶಕರೂ ಆಗಿರುತ್ತಾರೆ. ಅಷ್ಟೇಕೆ! ಇಡೀ ಗೋಕರ್ಣ ಮಂಡಲದಲ್ಲಿ ನೆಲೆಸಿದ ಎಲ್ಲಾ ಶಿಷ್ಯ ಸಮೂಹಕ್ಕೂ ಪೂಜ್ಯರಾಗಿರುವರು ಎಲ್ಲರ ಯೋಗ ಕ್ಷೇಮಕ್ಕೂ ಶ್ರೇಯಸ್ಸಿಗೂ ಶ್ರೀಮಠದ ಆಚಾರ್ಯರ ಕೃಪೆಯೇ ಮುಖ್ಯವೆಂಬುದು ಸ್ಪಷ್ಟ.

ಇಲ್ಲಿಗೆ ಸುಮಾರು ನಲವತ್ತೆಂಟು ವರ್ಷಗಳ ಹಿಂದಿನ ಒಂದು ಘಟನೆ ನನಗೆ ನೆನಪಾಗುತ್ತಿದೆ ನನ್ನ ವಿದ್ಯಾಭ್ಯಾಸದ ಸಮಯವದು. ಶ್ರೀಮದ್ರಾಮಚಂದ್ರಾಪುರದ ಮಠದ ಹಿರಿಯ ಗುರುಗಳಾದ ಬ್ರಹ್ಮೀಭೂತ ರಾಮಚಂದ್ರಭಾರತೀಸ್ವಾಮಿಗಳು ಸಾಗರ ತಾಲ್ಲೂಕಿನ ಎಲಗಳಲೆ ಸೀಮೆಗೆ ಸೇರಿದ ಭೀಮನ ಕೋಣೆ ಎಂಬ ನನ್ನ ಹುಟ್ಟೂರಿಗೆ ಪರಿವಾರ ಸಹಿತ ಬಿಜಯ ಮಾಡಿಸಿದ್ದರು. ಭೀಮನ ಕೋಣೆಯ ಊರ ಹೊರಗಿರುವ ಶ್ರೀತ್ರ್ಯಂಬಕೇಶ್ವರ ದೇವಾಲಯದ ಪೌಳಿಯ ಹಂಚಿನ ಚಾವಡಿಯಲ್ಲಿ ಮೊಕ್ಕಾಂ ಮಾಡಿದ್ದರು. ಆಗ ನಾನು ವಿದ್ಯಾರ್ಥಿಯಾಗಿದ್ದೆ. ಮೈಸೂರಿನಲ್ಲಿರುವ ಮಹಾರಾಜ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಚಂಪೂತರಗತಿಯಲ್ಲಿ ಓದುತ್ತಿದ್ದೆ. ಸುಮಾರು ಕ್ರಿ. ಶ. 1941 ನೆಯ ಇಸವಿ ವಿಷು ಸಂವತ್ಸರದ ವೈಶಾಖ ಮಾಸ ವಿರಬಹುದು. ನಾನು ಬೇಸಗೆಯ ವಿರಾಮದ ನಿಮಿತ್ತ ಸ್ವಗ್ರಾಮವಾದ ಭೀಮನ ಕೋಣೆಗೆ ಬಂದಿದ್ದೆ. ಅದು ನನ್ನ ಬಾಲ್ಯಪಾಠದ ಸಮಯ. ಆಗ ನನಗೆ ಸಂಸ್ಕೃತಪಾಣಿನೀಯ ವ್ಯಾಕರಣದಲ್ಲಿ ಸಿದ್ಧಾಂತ ಕೌಮುದಿಯ ಆರಂಭದ ಕೆಲವು ಪ್ರಕರಣಗಳು ಚಂಪೂರಾಮಾಯಣದಲ್ಲಿ ಬಾಲಕಾಂಡ, ಛಂದಸ್ಸಿನಲ್ಲಿ ವೃತ್ತರತ್ನಾಕರದ ಕೆಲವು ಅಧ್ಯಾಯಗಳು, ಇಷ್ಟು ಮಾತ್ರ ಪಾಠವಾಗಿದ್ದುವು. ನನ್ನ ಪೂಜ್ಯ ತಂದೆಯವರು ಗುರುಗಳ ದರ್ಶನಕ್ಕಾಗಿ ಭಟ್ಟರಕೆರೆ ತ್ರ್ಯಂಬಕೇಶ್ವರ ದೇವಸ್ಥಾನಕ್ಕೆ ಹೋಗಲು ಸಿದ್ಧರಾಗುತ್ತಿದ್ದರು. ಆಗ ನಾನೂ ಅವರ ಸಂಗಡ ಗುರುದರ್ಶನ ಕುತೂಹಲದಿಂದ ದೇವಸ್ಥಾನಕ್ಕೆ ಹೋದೆ. ಗುರುಗಳನ್ನು ಕಾಣಲು ಹೋಗು

ವಾಗ ಗುರುಗಳ ಮೇಲೆ ಏನಾದರೂ ಸಂಸ್ಕೃತದಲ್ಲಿ ಬರೆದುಕೊಂಡು ಹೋಗಬೇಕೆಂದು ಅನ್ನಿಸಿತು. ಸರಿ, ವಿದ್ಯಾರ್ಥಿತನದ ಹುಡುಗಾಟಿದ ಉತ್ಸಾಹದಿಂದ ಪದ್ಯ ರಚನೆಯಾಯಿತು. ಗುರುಗಳಾದ ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳ ಸನ್ನಿಧಿಯಲ್ಲಿ ಓದಿ ಒಪ್ಪಿಸಿದ್ದಾಯಿತು. "ಹೇಮ್ನಃ ಸಂಲಕ್ಷ್ಯತೇ ಹ್ಯಗ್ನೌ ವಿಶುದ್ಧಿಃ ಶ್ಯಾಮಿಕಾಪಿ ವಾ" ಎಂದು ಕಾಳಿದಾಸನ ಉಕ್ತಿಯಿಲ್ಲವೇ! ಸರಿ. ಗುಣಗ್ರಾಹಿಗಳಾದ ಶ್ರೀಗುರುಗಳು ನನ್ನ ವಿದ್ಯಾ ಪ್ರಗತಿಯನ್ನು ಸ್ಥಾಲೀಪುಲಾಕನ್ಯಾಯದಂತೆ ಪ್ರಶ್ನೆಹಾಕಿ ಪರೀಕ್ಷಿಸಿ ನನ್ನ ಕವಿತೆಯಲ್ಲಿರುವ ದೋಷಗಳ ಬಗ್ಗೆ ವಿಶೇಷವಾಗಿ ಹೇಳದೇ, ಹೊಗಳಿ ಸುವರ್ಣ ಮಂತ್ರಾಕ್ಷತೆಯಿತ್ತು, ಹರಸಿದರು. ಆ ಅಮೋಘಾಕ್ಷೆಯೇ ನನ್ನನ್ನು ಸಂಸ್ಕೃತ ಸಾಹಿತ್ಯ ವಿದ್ವತ್ ಪದವಿಗೆ ಏರಿಸಿ 'ದೇವೀ ವಿಲಾಸವೆಂಬ' ಏಳು ಉಲ್ಲಾಸವಿರುವ ಪದ್ಯ ಕಾವ್ಯದ ರಚನೆಗೆ ಪ್ರೇರಿಸಿ, ಬರೆಯಿಸಿ, ಶ್ರೀಮನ್ಮಹಾರಾಜ ಜಯಚಾಮರಾಜೇಂದ್ರ ಒಡೆಯರವರ ಆಸ್ಥಾನದಲ್ಲಿ ಕೀರ್ತಿಶೇಷ ಲಿಂಗರಾಜೇ ಅರಸಿನವರ ಸ್ಮಾರಕ ಕವಿತಾ ಪಾರಿತೋಷಕವನ್ನು ನನಗೆ ಕೊಡಿಸಿತು. ಮತ್ತು ಹಲವು ಮುಕ್ತಕ ಪದ್ಯಗಳ ರಚನೆಗೆ ನಾಂದಿಯಾಯಿತು.

ಅನಂತರವೂ ಗುರುಗಳ ಆಶೀರ್ವಾದ ನನ್ನ ಮೇಲೆ ಅವ್ಯಾಹತವಾಗಿ ಫಲಿಸಿತು. ಈಗ ಅದೇ ಗುರುಪೀಠದಲ್ಲಿ ವಿರಾಜಮಾನರಾಗಿರುವ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳ ಅನುಗ್ರಹವೂ ಅಪಾರ. ನಾನು ನನ್ನ ವಿದ್ಯಾಭ್ಯಾಸದ ಕಾಲದಿಂದಲೂ ಶ್ರೀರಾಘವೇಂದ್ರಭಾರತೀಸ್ವಾಮಿಗಳನ್ನು ಬಲ್ಲೆ. ಶ್ರೀ ಶ್ರೀಗಳ ನಿಷ್ಠೆಯನ್ನು ಕಂಡ ನನಗೆ ಇವರಲ್ಲಿ ಆಗಲೇ ಅವ್ಯಾಜ ಭಕ್ತಿಯುಂಟಾದುದರಿಂದ ಇವರ ಸಂನ್ಯಾಸ ದೀಕ್ಷಾಗ್ರಹಣದ ಯೋಗಪಟ್ಟಾಭಿಷೇಕದ ಮಹೋತ್ಸವದಂದು ರಚಿಸಿದ ಶುಭಾಶಂಸನ ಪದ್ಯ ಮಾಲೆಯು ಮುದ್ರಿಸಲ್ಪಟ್ಟು ಅಂದಿನ ಮಹೋತ್ಸವದಲ್ಲಿ ಶ್ರೀಗಳವರ ಸಮ್ಮುಖದಲ್ಲಿ ಪಠಿಸಿ ಒಪ್ಪಿಸಿಯೂಆಯಿತ್ತು. ಪ್ರಕೃತ, ಶ್ರೀಮದಾದ್ಯ ಶಂಕರ ಭಗವತ್ಪಾದರ ಶಿಷ್ಯಸುರೇಶ್ವರಾಚಾರ್ಯರ ಜ್ಯೇಷ್ಠ ಶಿಷ್ಯ ವಿದ್ಯಾನಂದಾಚಾರ್ಯರ ಪರಂಪರೆಯ ಎಲ್ಲಾ ಗುರುಗಳ ಸಂಕ್ಷಿಪ್ತ ಚರಿತ್ರೆಯ ವರ್ಣನಾ ಪೂರ್ವಕವಾದ ಶ್ರೀಮದ್ರಾಘವೇಂದ್ರಭಾರತೀ ಗುರುಗಳ ವಿವಿಧ ಅಭ್ಯುದಯ ಕಾರ್ಯಗಳ ಸಂಕ್ಷಿಪ್ತ ನಿರೂಪಣೆಯನ್ನು ಒಳಗೊಂಡ "ಶ್ರೀಗುರುಕೃಪಾತರಂಗಿಣೀ" ಎಂಬ ಪದ್ಯ ಕಾವ್ಯದ ನಿರ್ಮಾಣವಾದದ್ದು ಈಗಿನ ಶ್ರೀ ಗುರುಗಳ ಅನುಗ್ರಹದ ಒಂದು ನಿದರ್ಶನ ವೆಂದರೆ ಅತಿಶಯೋಕ್ತಿಯಾಗಲಾರದು. ಈ ಸಂಸ್ಕೃತದ ಮೂಲ ಕೃತಿಯ ರಚನೆಯಾದೊಡನೆಯೇ ಅದರ ಕನ್ನಡ ಗದ್ಯಾನುವಾದವೂ ಸಹ ಗುರು ಕೃಪೆಯಿಂದ ಆಯಿತು.

ಈ ಕಾರ್ಯದಲ್ಲಿ ನನ್ನ ಮಿತ್ರರಿಂದ ದೊರೆತ ಸಲಹೆ ಸಹಕಾರಗಳು ಅಸದೃಶ. ಈಗ ಬೆಂಗಳೂರಿನಲ್ಲಿರುವ ನನ್ನ ಮಾನ್ಯ ಮಿತ್ರರೂ, ಮಹಾವಿದ್ವಾಂಸರೂ

ಆಗಿರುವ ಶ್ರೀ ಎನ್. ರಂಗನಾಥ ಶರ್ಮರು ಮೊಟ್ಟ ಮೊದಲು ಈ ಕಾವ್ಯದ ರಚನೆಯು ಆರಂಭದ ಬಗ್ಗೆ ಸೂಕ್ತದಿಗ್ದರ್ಶನ ಮಾಡಿದ್ದಲ್ಲದೇ, ಈ ಕಾವ್ಯ ರಚನೆಯು ಪೂರ್ಣ ವಾದ ಬಳಿಕ ತಮ್ಮ ಈ ಇಳಿವಯಸ್ಸಿನಲ್ಲಿ ಶರೀರದ ಅನಾರೋಗ್ಯವನ್ನೂ ಗಮ ನಿಸದೆ ನನ್ನ ಮೇಲಣ ಅವ್ಯಾಜಸ್ನೇಹದಿಂದ ಈ ಗುರುಕೃಪಾತರಂಗಿಣಿಗೆ ಮುನ್ನುಡಿ ಯನ್ನು ಬರೆದದ್ದಲ್ಲದೆ ಹಸ್ತ ಪ್ರತಿಯನ್ನೂ ಪರಿಶೀಲಿಸಿ, ಪರಿಷ್ಕರಿಸಿ, ಇದಕ್ಕೆ ಜೀವಕಳೆ ತುಂಬಲು ತುಂಬಾ ಸಹಕರಿಸಿ ಉಪಕಾರಮಾಡಿರುತ್ತಾರೆ. ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ ನನ್ನ ಸಹಾಧ್ಯಾಯಿಗಳೂ ಸಹೋದ್ಯೋಗಿಗಳೂ ಮಿತ್ರರೂ ಆದ ಮಾನ್ಯ ವಿದ್ವಾನ್. ಶ್ರೀಕೃಷ್ಣ ವಾಸುದೇವ ಗೋವಂಡೆಯವರ ನನ್ನ ಈ ಕಾವ್ಯದ ಹಸ್ತ ಪ್ರತಿಯನ್ನು ಓದಿ ತಿದ್ದಲು ಸೂಕ್ತ ಸಲಹೆಯಿತ್ತು ಉಪಕರಿಸಿದ್ದಾರೆ. ಅವರಿಗೂ ನಾನು ಅತ್ಯಂತ ಕೃತಜ್ಞನಾಗಿರುತ್ತೇನೆ.

ಇದರ ಮುದ್ರಣ ಕಾಲದಲ್ಲಿ ನನ್ನ ಮೇಲಿನ ಅಭಿಮಾನದಿಂದ ಮಿತ್ರರಾದ ವಿದ್ವಾನ್ ಶ್ರೀ ಎಸ್. ಎ. ರಾಮಚಂದ್ರಭಟ್ಟರು ಕರಡಚ್ಚನ್ನು ಶೋಧಿಸಿ ಉಪ ಕರಿಸಿರುತ್ತಾರೆ. ಅವರಿಗೆ ನನ್ನ ಕೃತಜ್ಞತೆಗಳು.

ಇದರ ಮುದ್ರಣ ಕಾರ್ಯದಲ್ಲಿ ಸಹಕರಿಸಿ ಅತ್ಯಂತ ಶ್ರದ್ಧೆವಹಿಸಿ ಅಂದವಾಗಿ ಕಲಾತ್ಮಕವಾದ ಮುಖಪುಟವನ್ನಳವಡಿಸಿ ಸುಂದರವಾಗಿ ಮುದ್ರಿಸಿ ಕೊಟ್ಟ ಮೈತ್ರಿ ಪ್ರಿಂಟರ್ಸ್ ಅಂಡ್ ಬೈಂಡರ್ಸ್ ಮಾಲೀಕರಾದ ಶ್ರೀ ಸತ್ಯನಾರಾಯಣ ಶಾಸ್ತ್ರಿಗಳಿಗೆ ಧನ್ಯವಾದಗಳು.

ನನ್ನ ಅಭ್ಯುದಯಕ್ಕೆ ಕಾರಣರಾದ ಶ್ರೀಮದ್ರಾಮಚಂದ್ರಾಪುರದ ಶ್ರೀಮದ್ರಾ ಘವೇಂದ್ರಭಾರತೀ ಸ್ವಾಮಿಗಳ ಪಾದ ಪಂಕಜಗಳಿಗೆ ನನ್ನ ಈ ಗುರುಕೃಪಾತರಂಗಿಣೀ ಎಂಬ ಕಾವ್ಯ ಕುಸುಮವನ್ನು ಪರಮ ಭಕ್ತಿಯಿಂದ ಒಪ್ಪಿಸಿರುತ್ತೇನೆ,

ಇತಿ ಸಹೃದಯ ವಿಧೇಯಂ
ಭೀಮನಕೋಣೆ ದಿವಂಗತ ಕಲ್ಮನೆ
ಸುಬ್ಬಾಭಟ್ಟರ ಪುತ್ರ ಕೆ. ಎಸ್. ಭಾಸ್ಕರ ಭಟ್ಟ

ಶುಕ್ಲ ಸಂವತ್ಸರದ ಕಾರ್ತೀಕ ಶುಕ್ಲ
ತ್ರಯೋದಶೀ ಶನಿವಾರ
**11-11-1989**

## ಶ್ರೀಗುರು ಪಂಚ ರತ್ನ ಸ್ತೋತ್ರಮ್

ಶ್ರೀಮಚ್ಛಂಕರದೇಶಿಕೇನ ಕೃಪಯಾ ಸಂಸ್ಥಾಪಿತೇ ದಕ್ಷಿಣಾ-
ಮ್ನಾಯೇಷ್ವನ್ಯತಮೇ ಮಠೇ ಸ್ಥಿತಮಮುಂ ಶ್ರೀರಾಮಚಂದ್ರಾ
ಹ್ವಯೇ ।
ಆತ್ಮಾನಂದಸುಧಾನಿಧಿಂ ಯತಿವರಂ ಶ್ರೀ ರಾಮಚಂದ್ರಾಭಿಧಂ
ಪ್ರಾಚಾರ್ಯಂ ಪ್ರಣಮಾಮಿ ಭಕ್ತಿಭರಿತೋಽಸ್ಮಾಕಂ ಪರಂ
ದೈವತಮ್ ॥ ೧

ಕೌಸಲ್ಯಾನಂದನಸ್ಯ ಪ್ರಣತಭಯಹರಸ್ಯಾಂಘ್ರಿಪದ್ಮಾನುರಕ್ತಃ
ಶಾಂತೋ ದಾಂತೋ ದಯಾಲುರ್ಗುರುಕುಲಮಹಿತೋ
ದಕ್ಷಿಣಾಮೂರ್ತಿರೂಪಃ ।
ಯೋಗೇಂದ್ರೋ ರಾಮಚಂದ್ರಾಪುರಕೃತವಸತೀ ರಾಮ-
ಚಂದ್ರಾಭಿಧಾನಃ
ಸೋಽಯಂ ಭಾರತ್ಯುಪಾಹ್ವೋ ಜಯತಿ ಯತಿಪತಿಃ
ಶಂಕರಾಚಾರ್ಯಪೀಠೇ ॥ ೨

ಅದ್ವೈತಪ್ರತಿಪಾದಕೋ ವಿಜಯತಾಂ ಭಕ್ತೌಘಚಿಂತಾಮಣಿಃ
ಸತ್ಯೇ ಬ್ರಹ್ಮಣಿ ಸುಸ್ಥಿತೋಽಪಿ ನಿತರಾಂ ವಿದ್ಯಾರ್ಥಿಲೋಕಪ್ರಿಯಃ ।
ಧರ್ಮಸ್ಯಾಚರಣೇ ನಿಬದ್ಧಮತಿಮಾನಾಚಾರ್ಯವರ್ಯಃ ಸುಧೀಃ
ಭಾರತ್ಯುತ್ತರಶಬ್ದಭಾಗ್ಯತಿಪತಿಃ ಶ್ರೀರಾಮಚಂದ್ರಃ ಸದಾ ॥ ೩

ರಮ್ಯೇ ಶರಾವತೀತೀರೇ ರಾಮಚಂದ್ರಪುರೇ ಸ್ಥಿತಮ್ ।
ನೌಮಿ ನಿತ್ಯಂ ಯತಿಶ್ರೇಷ್ಠಂ ರಾಮಚಂದ್ರಾಹ್ವಭಾರತೀಮ್ ॥ ೪

ಜಯತು ಜಯತು ಸೀತಾವಲ್ಲಭೋ ಲೋಕವಂದ್ಯೋ
ಜಯತು ಜಯತು ಧರ್ಮಾಚಾರ್ಯ ಏಷ ಪ್ರಶಾಂತಃ ।
ಜಯತು ಜಯತು ಲೋಕೇ ಶಿಷ್ಯವರ್ಗೋಽಸ್ಯ ಸರ್ವೋ
ಜಯತು ಜಯತು ನಿತ್ಯಂ ಭಾಸ್ಕರಸ್ಯೋಕ್ತಿಭಂಗಿಃ ॥ ೫

ಭೀಮನಕೋಣೇ ಗ್ರಾಮೇ ತ್ರ್ಯಂಬಕೇಶ್ವರ ದೇವಸ್ಥಾನೇ ವಿಷು ಸಂವತ್ಸರ ವೈಶಾಖ
ಶುಕ್ಲ ಪಂಚಮ್ಯಾಂ ಗುರೋಸ್ಸನ್ನಿಧೌ ಪಠಿತ್ವಾ ಅರ್ಪಿತಮ್

ಇತಿ

ಸದ್ಗುರುಪಾದಾರಾಧಕಃ ವಿದ್ಯಾರ್ಥೀ ಭಾಸ್ಕರಭಟ್ಟಃ



ಶ್ರೀ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಜಗದ್ಗುರು ಶಂಕರಾಚಾರ್ಯ

**ಪರಮಪೂಜ್ಯ ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳವರು**

ಶ್ರೀರಾಮಚಂದ್ರಾಪುರ ಮಠ, ಹೊಸನಗರ - ಶಿವಮೊಗ್ಗ

ಪ್ರಸೀದತು ಶ್ರೀರಾಮಚಂದ್ರಃ

ಗತ ಸಂಖ್ಯೆ ೨೭೭೫

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ಷಡ್ದರ್ಶನ ಸ್ಥಾಪನಾಚಾರ್ಯ ತಪಶ್ಚಕ್ರವರ್ತ್ಯಾದ್ಯನೇಕ ವಿಶೇಷಣ ವಿಶಿಷ್ಟ

## ಶ್ರೀಮಜ್ಜಗದ್ಗುರುಶಂಕರಾಚಾರ್ಯ ಶಿಷ್ಯ

ಸುರೇಶ್ವರಾಚಾರ್ಯ ಜ್ಯೇಷ್ಠಶಿಷ್ಯ ವಿದ್ಯಾನಂದಾಚಾರ್ಯಾದ್ಯವಿಚ್ಛಿನ್ನ ಗುರುಪರಂಪರಾ ಪ್ರಾಪ್ತ ಸಕಲನಿಗಮಾಗಮ ಸಾರಹೃದಯ ಸಾಂಖ್ಯತ್ರಯಪ್ರತಿಪಾದಕ ವೈದಿಕ ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ಬಿರುದಾಂಕಿತ ವಿದ್ಯಾನಗರ ಮಹಾರಾಜಧಾನೀ ವೈಭವಸಿಂಹಾಸನಾಧೀಶ್ವರ ವಿಖ್ಯಾತ ವ್ಯಾಖ್ಯಾನಸಿಂಹಾಸನಾರೂಢರಾಜಾಧಿರಾಜಗುರು

## ಶ್ರೀ ಗೋಕರ್ಣ ಮಂಡಲಾಚಾರ್ಯ

ಶ್ರೀಮಚ್ಛತಶೃಂಗಪುರವರಾಧೀಶ್ವರ ಶ್ರೀಮಚ್ಛರಾವತೀತೀರವಾಸ ಶ್ರೀಮದ್ರಾಮಚಂದ್ರ ಚಂದ್ರಮೌಳೀಶ್ವರ ರಾಜರಾಜೇಶ್ವರೀ ಪಾದಪದ್ಮಾರಾಧಕ ಶ್ರೀಮದ್ರಾಮಚಂದ್ರಭಾರತೀ ಶ್ರೀಗುರುಕರಕಮಲ ಸಂಜಾತ

## ಶ್ರೀ ಮದ್ರಾಘವೇಂದ್ರ ಭಾರತೀ ಸ್ವಾಮಿಭಿಃ

ಅಸ್ಮದತ್ಯಂತ ಪ್ರಿಯ ಶಿಷ್ಯರಾದ ವಿದ್ವಾನ್ ಕಲ್ಮನೆ, ಸುಬ್ಬಾಭಟ್ಟರಮಕ್ಕಳು ಭಾಸ್ಕರಭಟ್ಟರು ಭೀಮನಕೋಣೆ, ಸಾಗರ ಇವರಿಗೆ ಶ್ರೀಮನ್ನಾರಾಯಣ ಸ್ಮರಣ ಪುರಸ್ಸರಂ ಸಂ ದಿಷ್ಟೋಽಯಂ ಸಂದೇಶಃ

ಅದಾಗಿ : ಶ್ರೀ ಸವಾರಿಯು ಆರಾಧ್ಯ ಶ್ರೀಸೀತಾರಾಮಚಂದ್ರಾದಿ ದೇವತಾ ದಿವ್ಯ ಸನ್ನಿಧಿಯಲ್ಲಿ ಸಮಸ್ತ ಜನತೆಯ ಯೋಗ ಕ್ಷೇಮಗಳನ್ನು ಸಂಪ್ರಾರ್ಥಿಸುತ್ತಾ ಸದ್ಯ ಈ ಮುಕ್ಕಾಮಿನಲ್ಲಿ ಕ್ಷೇಮದಿಂದ ವಸತಿ ಮಾಡಿದೆ.

ಪಾವನ ಚರಿತರಾದ ಶ್ರೀ ಮಜ್ಜಗದ್ಗುರು ಶಂಕರಾಚಾರ್ಯರಿಂದ ಸ್ಥಾಪಿತವಾದ ಅವರ ಶಿಷ್ಯ ಶ್ರೀ ಸುರೇಶ್ವರಾಚಾರ್ಯರ ಜ್ಯೇಷ್ಠ ಶಿಷ್ಯ ಶ್ರೀ ವಿದ್ಯಾನಂದಾಚಾರ್ಯರಿಂದ ಪ್ರಥಮ ಪ್ರಾರಂಭವಾದ ನಮ್ಮ ಶ್ರೀಮದ್ರಾಮಚಂದ್ರಾಪುರ ಮಠದ ಅವಿಚ್ಛಿನ್ನ ಗುರುಪರಂಪರೆಯ ಎಲ್ಲಾ ಗುರುಗಳ ವೃತ್ತಾಂತವನ್ನು ಸೇರಿಸಿ, ವಿಶೇಷವಾಗಿ ನಾವು ಪೀಠಕ್ಕೆ ಬಂದ ನಂತರ ಶ್ರೀಮಠೀಯವಾಗಿ ಕೂಡಿ ಬಂದ ವ್ಯಾವಹಾರಿಕ ಮತ್ತು ಧಾರ್ಮಿಕ

ಕಾರ್ಯಪ್ರವೃತ್ತ [illegible] ನೀವು ರಚಿಸಿರುವ "ಶ್ರೀಗುರುಕೃಪಾ ತರಂಗಿಣೀ" ಎಂಬ ಪ್ರೌಢಕೃತಿಯು ವಿವಿಧ ವೃತ್ತಗಳಿಂದ ಕೂಡಿರುವ ಸಂಸ್ಕೃತ ಕಾವ್ಯವನ್ನು ನಮಗೆ ನಿವೇದಿಸಿದ್ದು ಕನ್ನಡ ಅನುವಾದದೊಂದಿಗೆ ಮೂಡಿ ಬಂದಿರುವ ನಿಮ್ಮ ಈ ಕಾವ್ಯಕೃತಿಯು ಅವಲೋಕನೆಯ ಮೂಲಕ ಅತ್ಯಂತ ಹರ್ಷಕ್ಕೆ ಆಸ್ಪದವಾಯಿತು.

ಗ್ರಂಥ ರಚನಾ ಪ್ರಾರಂಭದಿಂದ ಮುಕ್ತಾಯದವರೆಗಿನ ಎಲ್ಲ ಹಂತಗಳಲ್ಲೂ ನೀವು ಆಗಿಂದಾಗ್ಗೆ ಕಾವ್ಯದ ವಿಚಾರವಾಗಿ ನಮ್ಮೊಡನೆ ಪರ್ಯಾಲೋಚಿಸಿ, ಕೃತಿಯು ಪೂರ್ಣವಾಗಿ ರೂಪುಗೊಂಡಂತೆ ನಮಗೆ ಅದನ್ನು ಅಂಕಿತಗೊಳಿಸಿ ಅರ್ಪಿಸಿರುವುದು ನಿಮ್ಮ ಗುರುಭಕ್ತಿಯ ದ್ಯೋತಕವಾಗಿದೆ.

ನಿಮ್ಮ ಬಾಲ್ಯದಿಂದಲೇ ನಿಮ್ಮೊಳಗೆ ಬೆಳೆಯುತ್ತಾ ಬಂದ ಸತ್ಕಾವ್ಯ ರಚನಾಸಾಮರ್ಥ್ಯ ಇದೀಗ "ಶ್ರೀಗುರುಕೃಪಾತರಂಗಿಣೀ" ಎಂಬ ನಿಮ್ಮ ಪ್ರೌಢಕಾವ್ಯ ಸೃಷ್ಟಿಯ ಮೂಲಕ ವಿಶೇಷವಾಗಿ ಅಭಿವ್ಯಕ್ತಗೊಂಡಿರುವುದು. ನಿಮ್ಮ ಪ್ರತಿಭಾಸಾರ್ಥಕತೆಗೆ ನಿದರ್ಶನವಾಗಿದೆ. ಪ್ರಸಿದ್ಧ ವೈದಿಕರಾಗಿದ್ದ ನಿಮ್ಮ ಹಿರಿಯರು ನಮ್ಮ ಶ್ರೀಮದ್ರಾಮಚಂದ್ರಾಪುರಮಠದ ಗುರುಪೀಠಕ್ಕೆ ವಿಶೇಷವಾಗಿ ಶ್ರದ್ಧಾ ಭಕ್ತಿಗಳಿಂದ ನಡೆದುಕೊಂಡು ಬಂದು ಮೂಡಿಸಿದ ಪರಂಪರೆಯನ್ನು ನೀವು ಗುರುಭಕ್ತರಾಗಿ, ಸತ್ಕಾರ್ಯಗಳ ಮೂಲಕ ಪೋಷಿಸಿ ಮುಂದುವರೆಸಿಕೊಂಡು ಬರುತ್ತಿರುವುದು ಶ್ಲಾಘನೀಯವಾಗಿದೆ.

ನಿಮ್ಮ ಸತ್ಕಾರ್ಯ ಸಮೃದ್ಧವಾಗಿ ಬೆಳಗಿ, ನಿಮ್ಮ ಕೀರ್ತಿ ವರ್ಧಿಸಲಿ ಈ ನಿಮ್ಮ "ಗುರುಕೃಪಾತರಂಗಿಣೀ" ಎಂಬ ಕಾವ್ಯಕೃತಿಯನ್ನು ಗುರುಭಕ್ತರು, ಸಜ್ಜನರು, ಪಂಡಿತರು, ಎಲ್ಲರೂ ಓದಿ ಸಂತೋಷಪಡುವಂತಾಗಲಿ. ನಿಮ್ಮ ಜೀವನದಲ್ಲಿ ಮುಂದಕ್ಕೂ ಇಂತಹ ಅನೇಕ ಸತ್ಕೃತಿಗಳು ಮೂಡಿ ಬರುವಂತಾಗಲಿ.

ಶ್ರೀ ಸೀತಾರಾಮಚಂದ್ರ ಚಂದ್ರಮೌಳೀಶ್ವರಾದಿ ಶ್ರೀ ಸಂಸ್ಥಾನದ ಆರಾಧ್ಯ ದೇವತೆಗಳು ನಿಮಗೂ, ನಿಮ್ಮ ಕುಟುಂಬದವರೆಲ್ಲರಿಗೂ ಉತ್ತರೋತ್ತರ ಶ್ರೇಯಸ್ಸನ್ನುಂಟುಮಾಡಲಿ ಎಂಬುದಾಗಿ ಹಾರೈಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮೃತಯಃ

ಮಿತಿ : ಶುಕ್ಲ ಸಂವತ್ಸರದ ಮಾರ್ಗಶಿರ ಶುಕ್ಲ
ಪಂಚಮಿ ರವಿವಾರ ತಾ|| 3-12-1989

ಮುಕ್ಕಾಂ : ಶ್ರೀ ವಿದ್ಯಾಮಂದಿರ, 3ಎ, ಜೆ. ಪಿ. ರಸ್ತೆ, ಮೊದಲನೇ ಹಂತ,
ವಿಶ್ವಭಾರತೀಹೌಸಿಂಗ್ ಕಾಂಪ್ಲೆಕ್ಸ್, ಗಿರಿನಗರ, ಬೆಂಗಳೂರು-5600೮೫

# ಶ್ರೀಗುರುವಂಶಕೃಪಾತರಂಗಿಣೀ
## ಅನುಕ್ರಮಣಿಕಾ



ಪರಮಹಂಸಪರಿವ್ರಾಜಕಾಚಾರ್ಯ ಜಗದ್ಗುರು ಶ್ರೀಶಂಕರಾಚಾರ್ಯ
ಪರಮಪೂಜ್ಯ ಶ್ರೀ ಶ್ರೀರಾಘವೇಂದ್ರಭಾರತೀ ಮಹಾಸ್ವಾಮಿಗಳವರು
ರಾಮಚಂದ್ರಾಪುರಮಠ, ಹೊಸನಗರ ತಾಲ್ಲೂಕ್, ಶಿವಮೊಗ್ಗ ಜಿಲ್ಲೆ.

|| ಶ್ರೀರಸ್ತು ||

# ಶ್ರೀಗುರುಕೃಪಾತರಂಗಿಣೀ

## ಪ್ರಥಮಸ್ತರಂಗಃ

**ಯನ್ನಾಮಕೀರ್ತನರಸಾಪ್ಲುತಚಿತ್ತವೃತ್ತಿ-**
**ರ್ನಿಷ್ಕಲ್ಮಷಃ ಕುಲಪತಿಃ ಪ್ರಥಮಃ ಕವೀನಾಮ್ |**
**ರಾಮಾಯಣಂ ನವರಸಾಂಬುನಿಧಿಂ ವ್ಯತಾನೀತ್**
**ತಂ ರಾಮಚಂದ್ರಮನಿಶಂ ಪ್ರಣಮಾಮಿ ಮೂರ್ಧ್ನಾ ||** ೧

ಯಾವ ಮಹಾಪುರುಷನ ನಾಮಸಂಕೀರ್ತನೆಯ ಆನಂದರಸದಿಂದ ಮಿಂದ ಮನಸ್ಸಿನವನೂ, ಪಾಪರಹಿತನೂ. ಕುಲಪತಿಯೂ ಆದ ಆದಿಕವಿ ವಾಲ್ಮೀಕಿಯು ನವರಸಗಳ ಸಮುದ್ರವಾದ ಶ್ರೀಮದ್ರಾಮಾಯಣವನ್ನು ರಚಿಸಿದನೋ. ಆ ಶ್ರೀ ರಾಮಚಂದ್ರ ಪ್ರಭುವಿಗೆ ನಾನು ಯಾವಾಗಲೂ ತಲೆಬಾಗುವೆನು.

**ಲೋಕಾಂಧಕಾರಮಿವ ದಾನವಮಂಧಕಾಖ್ಯಂ**
**ನಿರ್ವಾಸ್ಯ ಯಸ್ತ್ರಿಭುವನಂ ಕರುಣಾಂಬುರಾಶಿಃ |**
**ಆದೀಪ್ಯ ದಿವ್ಯಕಲಯಾ ಘನಚಿತ್ಪ್ರಕಾಶೋ**
**ಭಕ್ತಾನರಕ್ಷದಿಹ ಸೋಽವತು ಚಂದ್ರಮೌಲಿಃ ||** ೨

ಕನಿಕರದ ಕಡಲೂ, ದಟ್ಟವಾದ ತಿಳಿವಿನ ಬೆಳಕೂ ಆಗಿರುವ ಯಾವ ಮಹಾದೇವನು ಜಗತ್ತಿಗೆ ಕತ್ತಲೆಯಂತಿರುವ ಅಂಧಕನೆಂಬ ಅಸುರನನ್ನು ಹೋಗಲಾಡಿಸಿ ತನ್ನ ದಿವ್ಯ ಬೆಳಕಿನಿಂದ ಮೂಜಗವನ್ನು ಬೆಳಗಿ ಭಜಕರನ್ನು ಪೊರೆದನೋ ಆ ಘನಚಿತ್ಪ್ರಕಾಶನಾದ ಚಂದ್ರಮೌಳೀಶ್ವರ ಸ್ವಾಮಿಯು ಕಾಪಾಡಲಿ.

ಶಂಕರಾರ್ಯಸಂಪ್ರದಾಯಪೀಠಿಕಾಮುಷೇಯುಷೋ
ರಾಮಚಂದ್ರಭಾರತೀಕರಾರವಿಂದಜನ್ಮನಃ ।
ರಾಘವೇಂದ್ರಭಾರತೀಗುರೋಃ ಕೃಪಾಭ್ರವಾಹಿನೀ
ಪಾಪಪಂಕಿಲಂ ಪುನಾತು ಮಾಮಕೀನಮಾನಸಮ್ ॥ ೩

ಶ್ರೀಮಚ್ಛಂಕರಾಚಾರ್ಯರ ಅದ್ವೈತಸಂಪ್ರದಾಯದ ಗೋಕರ್ಣಮಂಡಲದ ರಘೂತ್ತಮಪೀಠಾಧಿಪತಿಗಳೂ, ಶ್ರೀರಾಮಚಂದ್ರಾಪುರಮಠಾಧೀಶರೂ ಆಗಿದ್ದ ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳಿಂದ ಸಂನ್ಯಾಸದೀಕ್ಷೆ ಪಡೆದು ಯೋಗ ಪಟ್ಟಾಭಿಷಿಕ್ತರಾಗಿರುವ ಶ್ರೀರಾಮಚಂದ್ರಾಪುರದ ಮಠಾಧೀಶರಾದ ಜಗದ್ಗುರು ಶಂಕರಾಚಾರ್ಯ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳ ಕರುಣೆಯೆಂಬ ದೇವ ಗಂಗೆಯು ಪಾಪದಿಂದ ಕೆಸರಾದ ನನ್ನ ಮನಸ್ಸನ್ನು ತಿಳಿಯಾಗಿಸಲಿ.

ಕ್ವಾಹಂ ಮಂದಮತಿಃ ಕ್ವಾಯಂ ಮಹಿಮಾ ಸದ್ಗುರೋರ್ಮಹಾನ್ ।
ಧರಾಂ ದಿಶಾಗಜೈರ್ಧಾರ್ಯಾಂ ಕಲಭೋ ವೋಢುಮಿಚ್ಛತಿ ॥ ೪

ಮಂದಮತಿಯಾದ ನಾನೆಲ್ಲಿ? ಮಹತ್ತರವಾದ ಶ್ರೀಗುರುಗಳ ಮಹಿಮೆಯೆಲ್ಲಿ? ದಿಗ್ಗಜಗಳು ಹೊರಬಲ್ಲ ಭೂಮಂಡಲವನ್ನು ಮರಿಯಾನೆಯು ಹೊರಲು ಬಯಸಿ ದಂತಾಯಿತು.

ವಾಚಸ್ಪತಿಸಹಸ್ರೇಣ ಯದ್ವರ್ಣಯಿತಮಕ್ಷಮಮ್ ।
ತತ್ಕಥಂ ಕಥಯೇದ್ವೃತ್ತಂ ಮಾದೃಶಃ ಪ್ರಾಕೃತೋ ಜನಃ ॥

ನೂರಾರು ಬೃಹಸ್ಪತಿಗಳಿಂದಲೂ ವರ್ಣಿಸಲು ಅಸದಳವಾದ ಈ ಚರಿತ್ರೆ ಯನ್ನು ನನ್ನಂತಹ ಸಾಮಾನ್ಯ ಜನ ಹೇಗೆ ಬಣ್ಣಿಸೀತು ?

ತಥಾಪ್ಯಾಚಾರ್ಯವರ್ಯಾಣಾಂ ಕೀರ್ತಿಭಾಗೀರಥೀಪ್ಲವೇ ।
ಕತಿಚಿತ್ ಸಂಜಿಘೃಕ್ಷಾಮಿ ಬಿಂದೂನಾತ್ಮವಿಶುದ್ಧಯೇ ॥ ೬

ಹಾಗಿದ್ದರೂ ಗುರುವರ್ಯರ ಯಶೋಗಂಗೆಯ ತೊರೆಯಲ್ಲಿ ಕೆಲವುಗಳನ್ನು ಅಂತರಂಗದ ಶುದ್ಧಿಗಾಗಿ ಸಂಗ್ರಹಿಸಬಯಸುತ್ತೇನೆ.

(ವಸಂತತಿಲಕಾವೃತ್ತಮ್)

ಭಸ್ಮತ್ರಿಪುಂಡ್ರ*ಪರಿಶೋಭಿತಫಾಲದೇಶಂ
ಪದ್ಮಾಸನಾಸಿತಮುಷರ್ಬುಧಕಾಂತಕಾಯಮ್ ।
ಚಿನ್ಮುದ್ರಿಕಾಂಚಿತಕರಂ ಸಹ ಶಿಷ್ಯವೃಂದೈ-
ರಾಚಾರ್ಯಮೌಳಿಮನಘಂ ಮನಸಾ ಸ್ಮರಾಮಿ ॥ ೧

ನಿರ್ಮಲರೂ ಆಚಾರ್ಯಶ್ರೇಷ್ಠರೂ ಆದ ಶ್ರೀಮದಾದ್ಯಶಂಕರಭಗವತ್ಪಾದರನ್ನು ಮನದಲ್ಲಿ ನೆನೆಯುತ್ತೇನೆ. ಅವರ ಹಣೆ ವಿಭೂತಿಯ ತ್ರಿಪುಂಡ್ರದಿಂದ ಕಂಗೊಳಿಸುತ್ತಿದೆ ಪದ್ಮಾಸನಹಾಕಿ ಕೂತಿರುವ ಆಚಾರ್ಯರ ಶರೀರ ಉದಯರವಿಯಂತೆ ಮನೋಹರವಾಗಿದೆ. ಅವರ ಹಸ್ತ ಚಿನ್ಮುದ್ರೆಯಿಂದ ಹೊಳೆಯುತ್ತಿದೆ. ಹಸ್ತಾಮಲಕ, ಪದ್ಮಪಾದ, ತೋಟಕಾಚಾರ್ಯ ಸುರೇಶ್ವರರೆಂಬ ನಾಲ್ವರು ಶಿಷ್ಯರು ಅವರ ಸುತ್ತಲೂ ಕುಳಿತಿದ್ದಾರೆ.

ಜೀವೇಶಭೇದ ತಿಮಿರಾಪಹತಿಗ್ಮರಶ್ಮಿ-
ಜ್ಞಾನಾಸಿಕೃತ್ತನಿಖಿಲಾವಿಲಕರ್ಮಬಂಧಃ।
ಸಂಸಾರವಾರಿಧಿ ಸಮುದ್ಧರಣೈಕಸೇತುಃ
ಶ್ರೀಶಂಕರಸ್ಸ ಭಗವಾನ್ ಹೃದಿ ಸನ್ನಿಧತ್ತಾಮ್ ॥ ೨

"ಜೀವಾತ್ಮ ಪರಮಾತ್ಮರು ಬೇರೆ ಬೇರೆ" ಎಂದು ಹೇಳುವ ಭೇದವಾದ ಅಥವಾ ದ್ವೈತವಾದವೆಂಬ ಕತ್ತಲೆಯನ್ನು ನಿವಾರಿಸುವ ಸೂರ್ಯನು, ಸ್ವರ್ಗವೇ ಮುಂತಾದ ಕ್ಷಣಿಕ ಸೌಖ್ಯಕ್ಕೆ ಕಾರಣವಾದರೂ ಹುಟ್ಟು ಸಾವುಗಳಿಗೆ ಎಡೆಗೊಡುವ ಕರ್ಮಪಾಶವನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿ, ಜ್ಞಾನದಿಂದಲೇ ಮೋಕ್ಷವೆನ್ನುವ ಮತವನ್ನು ಎತ್ತಿ ಹಿಡಿದವರೂ, ಅವಿದ್ಯಾ ರೂಪವಾದ ಭವಸಾಗರದಿಂದ ಮುಮುಕ್ಷುಗಳನ್ನು ದಾಟಿಸುವ ಸೇತುವೆಯೂ ಆಗಿರುವ, ಶ್ರೀಭಗವಚ್ಛಂಕರಾಚಾರ್ಯರು ನನ್ನ ಹೃದಯದಲ್ಲಿ ನೆಲೆಸಲಿ.

---

ತ್ರಿಪುಂಡ್ರಂ ವಿಭೂತಿಯಿಂದ ಹಣೆಯ ಮೇಲೆ ಅಡ್ಡಲಾಗಿ ಹಾಕಿದ ಮೂರೆಳೆ ತ್ರಯಾಣಾಂಪುಂಡ್ರಾಣಾಂ ಸಮಾಹಾರಃ। ವಿನಾ ಭಸ್ಮತ್ರಿಪುಂಡ್ರೇಣ ವಿನಾ ರುದ್ರಾಕ್ಷಮಾಲಯಾ । ಪೂಜಿತೋಽಪಿ ಮಹಾದೇವೋ ನ ಸ್ಯಾತ್ತಸ್ಯ ಫಲಪ್ರದಃ ।। ಶೈವಾಗಮೇ। ಊರ್ಧ್ವ ಪುಂಡ್ರಂ ಮೃದಾಕುರ್ಯಾತ್ ತ್ರಿಪುಂಡ್ರಂ ಭಸ್ಮನಾ ಸದಾ । ತಿಲಕಂ ವೈ ದ್ವಿಜಃ ಕುರ್ಯಾತ್ ಚಂದನೇನ ಯದೃಚ್ಛಯಾ।

ಗೋವಿಂದಪಾದಮುನಿಪುಂಗವಶಿಷ್ಯವರ್ಯಃ
ಸ್ವಾತ್ಮಾನುಭೂತಿಸಹಿತೈಕರಸಾವಬೋಧಃ ।
ವ್ಯಾಸಪ್ರಸಾದರಚಿತಾಮಲ ಸೂತ್ರಭಾಷ್ಯೋ
ಬುದ್ಧಿಂವಿಶೋಧಯತು ಮೇ ಗುರುಸಾರ್ವಭೌಮಃ ॥ ೩

ಗೋವಿಂದ ಭಗವತ್ಪಾದರ ಶಿಷ್ಯರೂ, ಅಖಂಡಬ್ರಹ್ಮಾನಂದಾನುಭವಿಗಳೂ ವ್ಯಾಸಮಹರ್ಷಿಗಳ ಕೃಪೆಯಿಂದ ವ್ಯಾಸರು ಬರೆದ ವೇದಾಂತಬ್ರಹ್ಮಸೂತ್ರಗಳಿಗೆ ತಾತ್ಪರ್ಯವನ್ನು ಬೋಧಿಸುವ (ಟೀಕೆಯನ್ನು) ಭಾಷ್ಯವನ್ನು ರಚಿಸಿದವರೂ ಗುರುಸಾರ್ವಭೌಮರೂ ಆದ ಶ್ರೀ ಶಂಕರರು ನನ್ನ ಬುದ್ಧಿಯನ್ನು ಶೋಧಿಸಲಿ.

ದ್ರಾಕ್ಷೇಕ್ಷುದುಗ್ಧಮಧುಸನ್ನಿಭವಾಕ್ಯವಾಹ್ಯೈ-
ರಧ್ಯಾತ್ಮಸುಂದರಸುಧಾರ್ಣವಸೃಷ್ಟಿಕರ್ತಾ ।
ಸಂಸಾರದುರ್ಭರದುರಾಶಯದಗ್ಧಚಿತ್ತಾನ್
ಸಂಜೀವಯತ್ಯನುಕಲಂ ದಹರೇಶಯಃ*ಸಃ ॥ ೪

ಶ್ರೀಮದಾಚಾರ್ಯರು ದ್ರಾಕ್ಷಿ, ಕಬ್ಬು, ಹಾಲು, ಜೇನು ಮೊದಲಾದುವಕ್ಕೆ ಸರಿಯಾದ ಸವಿಮಾತುಗಳಿಂದ ಅಧ್ಯಾತ್ಮವಿದ್ಯೆಯ ಸುಂದರಸಾಹಿತ್ಯದ ಕಡಲನ್ನೇ ನಿರ್ಮಿಸಿದ್ದಾರೆ. ಲೋಕದಲ್ಲಿ ಪರಿಹರಿಸಲಾಗದ ಪ್ರಾರಬ್ಧಕರ್ಮವಾಸನೆಯ ವಿವಿಧ ತಾಪಗಳಿಂದ ಬೆಂದು ಬರಡಾಗಿ ನಿರಾಶೆಗೊಂಡಿರುವ ಜೀವಿಗಳಿಗೆ ಅನುದಿನವೂ ತತ್ತ್ವೋಪದೇಶಮಾಡಿ ಜೀವನದಲ್ಲಿ ಅಮೃತಸಂಚಾರ ಮಾಡಿಸಿ ಬದುಕಿನ ಸಾರ್ಥಕತೆಯನ್ನು ಬೋಧಿಸಿದ್ದಾರೆ. ಆ ಮಹಾತ್ಮರು ದಹರಾಕಾಶದಲ್ಲಿ ನಲೆಸಿದ ಸ್ವಯಂಪ್ರಕಾಶ ಚೈತನ್ಯದಿಂದ ಬೇರೆ ಅಲ್ಲ

ಕಾಪಾಲಿಕಪ್ರಭೃತಿವಾಮಪಥಪ್ರವೃತ್ತಾನ್
ಜಿತ್ವಾ ಸ್ಥಿರೀಕೃತಸನಾತನಧರ್ಮಮಾರ್ಗಃ ।
ಶಾಸ್ತ್ರಾರ್ಥಚಿಂತನಪರಿಷ್ಕೃತಸಂಪ್ರದಾಯಾ-
ನಸ್ಥಾಪಯದ್ಯತಿಪತಿಃ ಸ ಮಹಾನುಭಾವಃ ॥ ೫

ಅವರು ವಾಮಮಾರ್ಗಿಗಳಾದ (ವೇದವಿರೋಧಿಗಳಾದ) ಕಾಪಾಲಿಕರೇ ಮುಂತಾದ ನಾಸ್ತಿಕರನ್ನು ವಾದದಲ್ಲಿ ಸೋಲಿಸಿ ನಶಿಸಲಿರುವ ಸನಾತನ ಧರ್ಮಮಾರ್ಗ

---

*ದಯರೇಶಯಃ – ಸೂಕ್ಷ್ಮವಾದ ಹೃದಯಾಕಾಶದಲ್ಲಿರುವ, ಅಥಯದಿ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್॥ ಛಾಂದೋಗ್ಯೋಪನಿಷತ್॥

ವನ್ನು ಉಳಿಸಿ ನೆಲೆಗೊಳಿಸಿದರು ಅಲ್ಲದೆ ಶಾಸ್ತ್ರದಲ್ಲಿ ಹೇಳಿರುವ ಉದಾತ್ತ ತತ್ತ್ವಗಳನ್ನು ಪರಿಶೀಲಿಸಿ 'ದೇವನೊಬ್ಬ ನಾಮ ಹಲವು" ಎಂಬುದನ್ನು ಮನಗಂಡು ಹಿಂದೂ ಸಂಪ್ರದಾಯದಲ್ಲಿನ ವಿಗ್ರಹಾರಾಧನೆ, ಮತ್ತು ಸೂರ್ಯ, ಗಣಪತಿ, ಅಂಬಿಕೆ ಶಿವ, ವಿಷ್ಣು ಎಂಬ ಈ ಐದು ಪಂಚಾಯತನ ಪೂಜಾ ಪದ್ಧತಿಯ ಮೌಲ್ಯವನ್ನು ಪ್ರಸಿದ್ಧಪಡಿಸಿ ಅವನ್ನು ಆಚಾರದಲ್ಲಿ ನೆಲೆಗೊಳಿಸಿದರು.

ಚಾರ್ವಾಕವೃಕ್ಷಚಯಧೂನನತೀವ್ರವಾತಂ
ವಾತಾಶನಾಭರಣದಿವ್ಯ ಕಲಾವತಾರಮ್ ।
ಶ್ರುತ್ಯುಕ್ತಿಯುಕ್ತಿಮಥಿತಾಗಮಸಾರಬೋಧಂ
ಬೋಧಾಂಬುರಾಶಿಶಶಿನಂ ಗುರುಮಾನತೋಽಸ್ಮಿ ॥ ೬

ಶ್ರೀಶಂಕರರು ಚಾರ್ವಾಕರೆಂಬ ಹೆಮ್ಮರಗಳನ್ನು ಉರುಳಿಸುವ ಬಿರುಗಾಳಿ, ನಾಗಾಭರಣನಾದ ಶಿವನ ಅವತಾರ, ಅವರು ಉಪನಿಷದ್ವಾಕ್ಯಗಳನ್ನು ಲೌಕಿಕಯುಕ್ತಿ ಸ್ವಾನುಭವಗಳೊಂದಿಗೆ ವಿಮರ್ಶಿಸಿ ವೇದಾಂತಗಳಿಗೆ ಅದ್ವೈತದಲ್ಲಿಯೇ ತಾತ್ಪರ್ಯವೆಂದು ಸಿದ್ಧಾಂತಿಸಿ, ಅದ್ವೈತವೇದಾಂತ ತತ್ತ್ವವನ್ನು "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಎಂಬುದನ್ನು ಬೋಧಿಸಿದವರು, ಜ್ಞಾನವೆಂಬ ಸಮುದ್ರವನ್ನು ಉಕ್ಕಿಸುವ ಹುಣ್ಣಿಮೆಯ ಚಂದ್ರಮನಾಗಿರುವರು, ಅಂತಹ ಗುರುಗಳಿಗೆ ನಮಸ್ಕಾರ

ಲೋಕಸ್ಯ ಸಂಸರಣರೋಗನಿವಾರಣಾರ್ಥಂ
ಶಂಭುಶ್ಚರಾಚರಗುರುರ್ಯತಿವೇಷಧಾರೀ ।
ಧೃತ್ವಾಸ ಏಷ ಹಿ ಚಿರಂತನಸೂಕ್ತಿಲೇಹ್ಯಂ
ಪ್ರಾಪ್ತೋಽಗದಂಕರ ಇವಾವತು ಶಂಕರಾರ್ಯಃ ॥ ೭

ಕಾವಿಯ ಬಟ್ಟೆ ಕಮಂಡಲಗಳನ್ನು ಧರಿಸಿರುವ ಇವರು ತ್ರಿಲೋಕ ಗುರುಪರಮೇಶ್ವರನೇ ಹೌದು. ಕರುಣಾಶಾಲಿಯಾದ ವೈದ್ಯನಾಥನು ಜೀವಿಗಳ ಹುಟ್ಟು ಸಾವಿನ ಬೇನೆಯನ್ನು ಹೋಗಲಾಡಿಸಬಯಸಿ "ತತ್ತ್ವಮಸಿ" ಮುಂತಾದ ಮಹಾವಾಕ್ಯಾರ್ಥ ಬೋಧನೆಯೆಂಬ ಲೇಹ್ಯದ ಡಬ್ಬಿಹಿಡಿದು ಎದುರಾಗುತ್ತಿರಬಹುದೋಏನೋ! ಎಂಬಂತಿರುವ ಶ್ರೀಶಂಕರರು ನಮ್ಮನ್ನು ಪೊರೆಯಲಿ.

ಯತ್ಪಾದಪಂಕಜಪರಾಗಲವಸ್ಪೃಶೋ ದ್ರಾಕ್
ಪರ್ಯಸ್ತಜನ್ಮಮರಣಾನುಶಯಾಃ ಪುರಾರೇಃ ।
ಭಾವಂ ಭಜಂತಿ ಭಗವಂತಮನಂತಮಾದ್ಯಂ
ತಂ ಶಂಕರಾರ್ಯಮವದಾತಮಹಂ ಭಜಾಮಿ ॥ ೮

ಯಾವ ಮಹಾಪುರುಷನ ಅಡಿದಾವರೆಯು ಹುಡಿ ತುಸು ಸೋಂಕಿದ ಜೀವಿಗಳು ತಮ್ಮ ಮರುಹುಟ್ಟಿಗೆ ಕಾರಣವಾದ ಅನುಶಯು*ವನ್ನು ನೀಗಿ ಹುಟ್ಟು–ಸಾವುಗಳಿಲ್ಲದ ತನ್ನ ಸ್ವರೂಪವೇ ಆಗಿರುವ ಪರಮೇಶ್ವರನಲ್ಲಿ ಬೆರೆತು ಮುಕ್ತರಾಗುವರೋ ಅಂತಹ ಮಹಿಮೆಯುಳ್ಳ ಆದ್ಯಂತರಹಿತವಾದ ಶುದ್ಧಚೈತನ್ಯವೇ ಆಗಿರುವ ಶ್ರೀ ಶಂಕರಭಗವತ್ಪಾದರನ್ನು ನಾನು ಭಜಿಸುವೆನು.

**ತಾಥಾಗತಾರ್ಹತರಸೇಶ್ವರಶಾಕ್ತತಂತ್ರ–**
**ಶ್ರದ್ಧಾಕಷಾಯಿತಮತೀನವಜಿತ್ಯ ತರ್ಕೈಃ ।**
**ಸಿದ್ಧಾಂತಮೌಪನಿಷದಂ ದಯಯೋದ್ಧಧಾನಂ**
**ಪ್ರಾಜ್ಞಂ ಜಗದ್ಗುರುಮುಪಾಸ್ಮಹ ಈಡ್ಯಮೇಕಮ್ ॥ ೯**

ಬೌದ್ಧ, ಜೈನ, ಪಾಶುಪತ, ಶಾಕ್ತ ಮೊದಲಾದ ಅವೈದಿಕ ದರ್ಶನ ಶಾಸ್ತ್ರಗಳಲ್ಲಿನ ಶ್ರದ್ಧೆಯಿಂದ ವೈದಿಕ ದರ್ಶನಗಳ ಮೇಲೆ ರಾಗದ್ವೇಷಾದಿಗಳನ್ನು ಹೊಂದಿರುವ ನಾಸ್ತಿಕರ ವಾದಗಳನ್ನು ತರ್ಕದಿಂದ ಖಂಡಿಸಿ, ಉಪನಿಷತ್ತಿನ ಸಿದ್ಧಾಂತವನ್ನು ಎತ್ತಿಹಿಡಿದವರೂ, ಸನಾತನಿಗಳ ಮೆಚ್ಚುಗೆಗೆ ಪಾತ್ರರೂ, ಪ್ರಾಜ್ಞರೂ, ಆಗಿರುವ ಅದ್ವಿತೀಯಜಗದ್ಗುರುಶಂಕರಾಚಾರ್ಯರನ್ನು ನಾವು ಒಂದೇ ಮನಸ್ಸಿನಿಂದ ನೆನೆಯುತ್ತೇವೆ.

**ವಾಕ್ಯಜ್ಞ ಕುಂಜರಮನೀಶ್ವರದುರ್ವಿದಗ್ಧಂ**
**ಸಂನ್ಯಾಸದೂಷಕಮಜಯ್ಯಮುಪೇತ್ಯ ವಾದೇ ।**
**ಜಿತ್ವಾ ಸ ಮಂಡನಮುಖಾಂಶಹರಂ ವಿಧಾತುಃ**
**ಸಂನ್ಯಾಸ್ಯ ತಂ ಕಿಲ ವಿನೀತಮತಿಂ ತ್ವಕಾರ್ಷೀತ್ ॥ ೧೦**

ಶ್ರೀಶಂಕರರೊಂದಿಗೆ ಎದುರುವಾದಿಸಿವರೊಳಗೆ ಮಂಡನಮಿಶ್ರರೆಂಬುವವರು ಅಗ್ರಗಣ್ಯರು ಕರ್ಮಾತಿರಿಕ್ತವಾದ ಈಶ್ವರನ ಅಸ್ತಿತ್ವವನ್ನು ಒಪ್ಪದ ಮೀಮಾಂಸಕ ಪಂಡಿತರು ಜ್ಞಾನಮಾರ್ಗದ ಸಾಧನೆಗೆ ಸೋಪಾನವಾದ ಸಂನ್ಯಾಸಾಶ್ರಮವನ್ನು ಇವರು ವಿರೋಧಿಸುವವರು ಅಂದಿನವರೆಗೂ ಇವರನ್ನು ಬೇರೆ ಯಾರೂ ಗೆದ್ದಿರಲಿಲ್ಲ. ಶ್ರೀಶಂಕರಾಚಾರ್ಯರು ಇವರ ಹತ್ತಿರ ಹೋದರು. ಬ್ರಹ್ಮನ ಅವತಾರವೆಂದು ಪ್ರಸಿದ್ಧವಿರುವ ಮಂಡನಮಿಶ್ರರೊಂದಿಗೆ ವಾದಮಾಡಿ ಅವರನ್ನು ಸೋಲಿಸಿದರು. ಅವರಿಗೆ ಸಂನ್ಯಾಸಾಶ್ರಮದೀಕ್ಷೆಯನ್ನು ಕೊಡಿಸಿದರು ಮತ್ತು ಶಿಷ್ಯರನ್ನಾಗಿ ಪರಿಗ್ರಹಿಸಿದರು.

---

*ಅನುಶಯ – ಅನುಭವಿಸಿ ಉಳಿದುಳಿದ ಕರ್ಮಪುಣ್ಯವಿಶೇಷ "ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಯಥೇತಮನೇವಂಚ '' ಬ್ರಹ್ಮಸೂತ್ರ ।। "ನಮಸ್ತತ್ಕರ್ಮಭ್ಯೋ ವಿಧಿರಪಿ ನ ಯೇನ ಪ್ರಭವತಿ" ।। ಭರ್ತೃಹರಿನೀತಿಶತಕ.

**ಯಸ್ಯಾಸ್ಸುರಾಸುರನರೋರಗವಂದನೀಯ–**
**ಪಾದಾಂಬುಜಸ್ಯ ಮಕರಂದಲವಂ ನಿಷೇವ್ಯ ।**
**ಮೂಕಃ ಕ್ಷಣಾದ್ಭವತಿ ಗೀಷ್ಪತಿಮುಖ್ಯ ಸೇವ್ಯಃ**
**ಸಾ ಶಾರದಾ ತಮನುಯಾತವತೀ ಯತೀಂದುಮ್ ॥**

ಸುರರು ಅಸುರರು ಮನುಷ್ಯರು ನಾಗಗಳು ಇವುಗಳ ಅಂದರೆ ಸ್ವರ್ಗಮರ್ತ್ಯ ಪಾತಾಳಲೋಕವಾಸಿಗಳ ಪ್ರಣಾಮಕ್ಕೆ ಅರ್ಹವಾದ ಯಾವ ವಾಗ್ದೇವಿಯ ಅಡಿದಾವರೆಯ ಮಕರಂದದ ತುಸು ಹನಿ ಸೇವಿಸಿದ ಹುಟ್ಟುಮೂಗನೂ ಸಹ ಚಣಕಾಲದಲ್ಲಿ ಬೃಹಸ್ಪತಿಯಂತಹ ವಾಗ್ಮಿಗಳ ಮನ್ನಣೆಗೆ ಪಾತ್ರನಾಗುವನೋ ಅಂತಹ ಪ್ರಭಾವವುಳ್ಳ ಸರ್ವಜ್ಞೆಯಾದ ಶಾರದೆಯೂ ಶ್ರೀಶಂಕರಭಗವತ್ಪಾದರ ಹೇಳಿಕೆಗೆ ವಶಳಾಗಿ ಅವರನ್ನು ಹಿಂಬಾಲಿಸಿದಳು.

**ಯಸ್ಮಾ ಅಕಿಂಚನತಯಾಮಲಕಂ ಗೃಹಿಣ್ಯಾ**
**ಪ್ರೇಮ್ಣಾ ಪ್ರದತ್ತಮಥ ಸಾ ಕಮಲಾ ಕಟಾಕ್ಷೈಃ ।**
**ವೃಷ್ಟ್ವಾನ್ಯನಂತಕನಕಾಮಲಕಾನ್ಯವಾಪ–**
**ತ್ತಸ್ಮೈ ಕೃಪಾಜಲಧಯೇ ಗುರವೇ ನಮೋಽಸ್ತು ॥** ೧೨

ಬಡ ಮುತ್ತೈದೆಯಾದ ಮನೆಯಾಕೆಯೊಬ್ಬಳು ನೆಲ್ಲಿಯಕಾಯಿಯೊಂದನ್ನು ಯಾವ ಮಹಾತ್ಮನಿಗೆ ಭಕ್ತಿಯಿಂದ ನೀಡಿದಳೋ ಕೂಡಲೇ ಆಕೆಗೆ ಯಾರಿಂದ ನೂರಾರು ಚಿನ್ನದ ನೆಲ್ಲಿಯ ಕಾಯಿಗಳು ದೊರಕಿದವೋ ಆ ಕರುಣಾಸಮುದ್ರನಾದ ಗುರುವಿಗೆ ನಮಸ್ಕಾರ.

**ಜ್ಞಾತ್ವಾಥ ಮಾತರಮುಪಾಶ್ರಿತ ಮೃತ್ಯುಶಯ್ಯಾಂ**
**ಯಶ್ಶಾಜಗಾಮ ತದುಪಾಂತಿಕಮಾತ್ಮಶಕ್ತ್ಯಾ ।**
**ತಾಂ ಪ್ರೀಣಯನ್ ಹರಿಕಥಾಸುಧಯಾಪವರ್ಗಂ**
**ತಸ್ಯೈ ದದೌ ಸ ಭಗವಾನ್ ಶರಣಂ ಮಮಾಸ್ತು ॥**

ತನ್ನ ತಾಯಿಯು ಮರಣಶಯನದಲ್ಲಿ ಇರುವುದನ್ನು ತಿಳಿದು ಯಾರು ಯೋಗ ಶಕ್ತಿಯಿಂದ ದೂರದಲ್ಲಿರುವ ಅವಳ ಹತ್ತಿರಕ್ಕೆ ಬಂದು ಮಾತ್ರವನ್ನು ಕಂಡದ್ದಲ್ಲದೇ ಅ ಕಡೆಯ ಗಳಿಗೆಯಲ್ಲಿ ಹರಿನಾಮಕೀರ್ತನೆಯ ಅಮೃತಪಾನ ಮಾಡಿಸಿ ಮೋಕ್ಷವನ್ನು ಅವಳಿಗೆ ಕೊಟ್ಟರೋ ಆ ಶ್ರೀಶಂಕರಾಚಾರ್ಯರು ನನಗೆ ರಕ್ಷಕರಾಗಿರಲಿ.

**ಆಸೇತುಶೀತಗಿರಿ ಯಃ ಕಿಲ ಪಾದಚಾರೀ**
**ದುರ್ವಾದಿದರ್ಪದಲನೋಽದ್ವಯಮಾತ್ಮತತ್ತ್ವಮ್ ।**
**ಪ್ರಾಚಾರಯದ್ವಿಗತಭೀರ್ನತಶಿಷ್ಯವೃಂದ–**
**ಮನ್ವಗ್ರಹೀದ್ಗುರುಮನುತ್ತಮಮಾಶ್ರಯೇ ತಮ್ ॥** ೧೪

ಶ್ರೀಶಂಕರಾಚಾರ್ಯರು ಹಿಮಾಲಯದಿಂದ ಸೇತುವಿನ ತನಕ ಇಡೀ ಭರತ ಭೂಮಿಯನ್ನು ಕಾಲುನಡಿಗೆಯಿಂದಲೇ ಸುತ್ತಿದರು. ಅವರು ಕೊಂಚವೂ ಹೆದರದೆ ನಾಸ್ತಿಕರ ಸೊಲ್ಲು ಅಡಗಿಸಿ, ಅದ್ವೈತ ಸಂಪ್ರದಾಯವನ್ನು ಪ್ರಚಾರಮಾಡಿದರು. ಶಿಷ್ಯರಿಗೆ ಉಪದೇಶಮಾಡಿ ಅನುಗ್ರಹಿಸಿದರು ಇವರಿಗಿಂತ ಉತ್ತಮರೆನಿಸಿಕೊಂಡವರು ಬೇರೆ ಯಾರೂ ಇಲ್ಲ. ಅಂತಹ ಗುರುವರ್ಯರನ್ನು ಆಶ್ರಯಿಸುತ್ತೇನೆ.

**ಚಂದ್ರಾಯಿತೇನ ಕಿಲ ಶಿಷ್ಯಮಹೋತ್ಪಲಾನಾಂ**
**ಭದ್ರಾತ್ಮನಾ ಭಗವತಾ ಗುರುಣಾ ವಿಜೇತ್ರಾ ।**
**ಕಾಶ್ಮೀರಮಂಡಲವಿರಾಜಿತಮುತ್ಯುದಾರಂ**
**ಸರ್ವಜ್ಞಪೀಠಮಧಿರೂಢಮನನ್ಯಲಭ್ಯಮ್ ॥** ೧೫

ಪೂಜ್ಯ ಗುರುವರ್ಯರಾದ ಶ್ರೀಶಂಕರ ಭಗವತ್ಪಾದರು ಶಿಷ್ಯರೆಂಬ ಕನ್ನೈದಿಲೆಗಳಿಗೆ ತಂಪೆರೆದು ಇಂಪನ್ನುಂಟುಮಾಡುವ ಚಂದ್ರನೇ ಆಗಿರುವರು. ಮಂಗಳ ಮೂರ್ತಿಗಳಾದ ಅವರು ಕಾಶ್ಮೀರಕ್ಕೆ ತೆರಳಿ ಅಲ್ಲಿರುವ ಸರಸ್ವತೀದೇವಾಲಯದ ದಕ್ಷಿಣದ ಬಾಗಿಲಿನ ಕಾವಲುಗಾರರಾದ ಪಂಡಿತ ಪ್ರಕಾಂಡರನ್ನು ವಾದದಲ್ಲಿ ಸೋಲಿಸಿ, ದೇವಾಲಯದ ತೆಂಕಣದ ಬಾಗಿಲು ತೆಗೆಯಿಸಿದರು ವಿಜಯಶಾಲಿಗಳಾದ ಆಚಾರ್ಯರು ತಮ್ಮ ಅಸದೃಶವಾದ ಪ್ರತಿಭಾಸಂಪತ್ತಿನಿಂದ ಸರಸ್ವತೀಮಂದಿರವನ್ನು ಪ್ರವೇಶಿಸಿ, ಅಲ್ಲಿರುವ ಮಹತ್ತರವೂ ಅನ್ಯರಿಗೆ ಅಲಭ್ಯವೂ ಆದ ಸರ್ವಜ್ಞಪೀಠವನ್ನು ಆರೋಹಣ ಮಾಡಿದರು.

**ಮಂದಾಕಿನೀಂ ಗುರುನಿದೇಶವಶಂವದೋ ಯಃ**
**ಪಾದೌ ನಿಧಾಯ ಕಮಲೇಷ್ವತರತ್ತಮೋನಮ್ ।**
**ಪೌರಸ್ತ್ಯವಾರಿಧಿತಟೇ ಸ ಹಿ ಪದ್ಮಪಾದಂ**
**ಗೋವರ್ಧನಾಹ್ವಯಮಠೇ ಕೃಪಯಾಽಭ್ಯಷಿಂಚತ್ ॥** ೧೬

ಒಂದು ಬಾರಿ ಗುರುಗಳು ಗಂಗಾನದಿಯ ಆಚೆ ದಡದಲ್ಲಿ ನಿಂತು, ತನ್ನನ್ನು ಕರೆಯಲು ಶಿಷ್ಯನು ತಡಮಾಡದೆ ಭಕ್ತಿಯ ಭರದಿಂದ ಗಂಗೆಯ ಪ್ರವಾಹದ ಮೇಲೆ ಹೋದನು ಹೋಗಲು ತೊಡಗಿದೊಡನೆಯೇ ಗುರುಕೃಪೆಯಿಂದ ಹೆಜ್ಜೆಹೆಜ್ಜೆಗೂ ಒಂದೊಂದು ಅರಳಿದ ಕಮಲವೂ ನೀರದಾರಿಯಲ್ಲಿ ಮೂಡಿ ಬಂದಿತು. ಆ ಶಿಷ್ಯನು ಮೂಡಿದ ತಾವರೆಯ ಮೇಲೆ ಹೆಜ್ಜೆಯಿಡುತ್ತಾ ಗಂಗೆಯನ್ನು ದಾಟಿ ಗುರುಗಳ ಹತ್ತಿರಕ್ಕೆ ಬಂದನು. ಪದ್ಮಗಳ ಮೇಲೆ ಪಾದವನ್ನಿಟ್ಟು ದಾಟಿದ ಅವರಿಗೆ 'ಪದ್ಮಪಾದ' ನೆಂದು ಹೆಸರಾಯಿತು. ಶ್ರೀ ಶಂಕರರು ಆ ಪದ್ಮಪಾದನೆಂಬ ಶಿಷ್ಯನನ್ನು ಪೂರ್ವ ಸಮುದ್ರ ತೀರದಲ್ಲಿರುವ ಪುರಿಯ (ಜಗನ್ನಾಥ) ಗೋವರ್ಧನಮಠದ ಅಧಿಪತಿಯನ್ನಾಗಿ ನೇಮಿಸಿ, ಭಾರತದಲ್ಲಿ ಪೂರ್ವಾಮ್ನಾಯ ಪೀಠವನ್ನು ಸ್ಥಾಪಿಸಿದರು.

ಆನಂದ ಮದ್ವಯಮನಾದಿನಿಜಸ್ವರೂಪಂ
ಹಸ್ತಸ್ಥಿತಾಮಲಕವನ್ನಿರವಭೋಧ್ಯಃ ।
ಪಾಶ್ಚಾತ್ಯವಾರಿಧಿತಟೇ ತಮಿಹಾದ್ಯ ಶಂಭು–
ದ್ವಾರ್ವರಾಧಿನಾಥಮಠಪೀಠಪತಿಂ ಚಕಾರ ॥ ೧೭

ಯಾವನು ಈ ಜನ್ಮದಲ್ಲಿ ಸಾಮಾನ್ಯ ಜನರಿಗೆ ಜಡನಂತೆ ತೋರುತ್ತಿದ್ದರೂ ಪೂರ್ವಜನ್ಮದ ಸಂಸ್ಕಾರ ವಿಶೇಷದಿಂದ ಗುರುಗಳ ಸನ್ನಿಧಿಯಲ್ಲಿ ಅವ್ಯಂತಃಹಿತವೂ ಆನಂದಮಯವೂ ಸ್ವಸ್ವರೂಪವೂ ಆದ ಬ್ರಹ್ಮಾದ್ವೈತ ತತ್ವವನ್ನು ಅಂಗೈಯಲ್ಲಿರುವ ನೆಲ್ಲಿಯ ಕಾಯಿಯಂತೆ ಸ್ಫುಟವಾಗಿ ಸ್ವಾನುಭವ ಪ್ರಮಾಣವಾಗಿ ಕಂಡುಕೊಂಡದ್ದರಿಂದ "ಹಸ್ತಾಮಲಕ" ನೆಂದು ಹೆಸರು ಪಡೆದನೋ ಆ ಶಿಷ್ಯನನ್ನು ಶಿವನ ಅವತಾರವಾದ ಶ್ರೀ ಶಂಕರಾಚಾರ್ಯರು ಪಶ್ಚಿಮಸಮುದ್ರತೀರದಲ್ಲಿ ಶೋಭಿಸುವ–ದ್ವಾರಕೆಯಲ್ಲಿ ಪಶ್ಚಿಮಾಮ್ನಾಯ ಪೀಠದ ಅಧಿಪತಿಯನ್ನಾಗಿ ನೇಮಿಸಿದರು

ಯಶ್ಚಾಥ ತೋಟಕಸುವೃತ್ತನಿಬದ್ಧಪದ್ಯೈ–
ಸ್ತುಷ್ಟಾವ ದೇಶಿಕಮುಪಾಸ್ಯ ಮಪೇತಮಾಯಃ ।
ಕೇದಾರನಾಥಚರಣಾಂಕಿತಹೈಮಕೂಟೇ
ಜ್ಯೋತಿರ್ಮಠಾಧಿಪಪದೇಽಕೃತ ತಂ ಯತೀಂದ್ರಃ ॥ ೧೮

ಅಪರೋಕ್ಷ ಜ್ಞಾನಿಯಾದ ಯಾವನು ಆಚಾರ್ಯರನ್ನು ಸಮೀಪಿಸಿ ತೋಟಕ ವೃತ್ತದಲ್ಲಿ ರಚಿತವಾದ ಪದ್ಯಗಳಿಂದ ಗುರುಗಳನ್ನು ಸ್ತುತಿಸಿದನೋ ಅವನಿಗೆ "ತೋಟಕ" ಎಂದು ಹೆಸರಾಯಿತು. ಶ್ರೀಶಂಕರ ಭಗವತ್ಪಾದರು ಈ ತೋಟಕಾಚಾರ್ಯನೆಂಬ ಶಿಷ್ಯನನ್ನು ಕೇದಾರನಾಥಸ್ವಾಮಿಯ ಹೆಜ್ಜೆಯ ಗುರುತಿನಿಂದ ಪವಿತ್ರವಾದ ಹಿಮಾಲಯದ ಶಿಖರದಲ್ಲಿನ ಬದರೀಕ್ಷೇತ್ರದ ಜ್ಯೋತಿರ್ಮಠದ ಅಧಿಪತಿಯನ್ನಾಗಿ ಮಾಡಿ ಉತ್ತರಾಮ್ನಾಯ ಪೀಠವನ್ನು ಸ್ಥಾಪಿಸಿದರು,

---

ಅಪೇತಮಾಯ =ಅಪರೋಕ್ಷಜ್ಞಾನಿ "ಸದೇವ ಸೌಮ್ಯ ಇದಮಗ್ರ ಆಸೀತ್," "ಏಕಮೇವಾದ್ವಿತೀಯಂ" ಎಂದು ಮುಂತಾದ ಉಪನಿಷದ್ವಾಕ್ಯದಿಂದ ಬಹ್ಮವಸ್ತುವಿನ ಸದ್ಭಾವವನ್ನು ನಿಶ್ಚಯಿಸಿ ಬಳಿಕ ಜೀವರೂಪದಿಂದ ಅದರ ಪ್ರವೇಶವನ್ನು ಪರ್ಯಾಲೋಚಿಸಿ ಪ್ರತ್ಯಗ್ರೂಪತ್ವವನ್ನು ನಿಶ್ಚಯಿಸಿ 'ತತ್ತ್ವಮಸಿ" ಮುಂತಾದ ಮಹಾವಾಕ್ಯ ಪರಿಶೀಲನೆಯಿಂದ ಅದ್ವಿತೀಯ ಬ್ರಹ್ಮರೂಪವಾದ ಆತ್ಮವನ್ನು "ಅಹಂ ಬ್ರಹ್ಮಾಸ್ಮಿ" ಎಂದು ಆತ್ಮದಲ್ಲಿ ಬ್ರಹ್ಮತ್ವಬುದ್ಧಿಯನ್ನು ಪ್ರಾಣಾದಿ ಪಂಚಕೋಶಗಳಲ್ಲಿ ಆದಿ. ಮಧ್ಯ ಅವಸಾನಗಳಲ್ಲಿಯೂ, ಆತ್ಮದವ್ಯವಹಾರವಲ್ಲಿಯೂ, ಏಕಪ್ರಕಾರವಾಗಿ ಹೊಂದಿರುವ ಬ್ರಹ್ಮಾತ್ಮಬುದ್ಧಿಗೆ ಅಪರೋಕ್ಷಜ್ಞಾನವೆಂದು ವೇದಾಂತದ ಪರಿಭಾಷೆ

ಆದಿ ಮಧ್ಯಾವಸಾನೇಷು ಸ್ವಸ್ಯ ಬ್ರಹ್ಮಾತ್ಮಧೀರಿಯಮ್ ।
ನೈವ ವ್ಯಭಿಚರೇತ್ತಸ್ಮಾದಾಪರೋಕ್ಷ್ಯಂ ಪ್ರತಿಷ್ಠಿತಮ್ ॥
ವೇದಾಂತ ಪಂಚದಶೀ. ತೃಪ್ತಿ ದೀಪಪ್ರಕರಣ 62 ನೆಯ ಕಾರಿಕೆ

ಪೀಠೇ ಸುರೇಶ್ವರಮಥೋ ವಿನಿವೇಶ್ಯ ಶೃಂಗ-
ಪುರ್ಯಾಮಧೀಶ್ವರ ಪದೇ ನನು ದಕ್ಷಿಣಸ್ಯಾಮ್ ।
ಸಾಕ್ಷೀವ ಯಃ ಸಕಲಸಜ್ಜನಚಿತ್ತ ಸದ್ಮಾ
ವಿದ್ಯೋತತೇ ಸ ಗುರುರಾಡಶುಭಂ ಧುನೋತು ॥ ೧೯

ಬಳಿಕ, ವಾರ್ತಿಕಕಾರರಾದ ಸುರೇಶ್ವರ ಅಥವಾ ವಿಶ್ವರೂಪ ಎಂಬ ಹೆಸರಿನ ಶಿಷ್ಯರನ್ನು ಭಾರತದ ದಕ್ಷಿಣ ದಿಕ್ಕಿನಲ್ಲಿರುವ ಶೃಂಗೇರಿಯ ಶಾರದಾ ಪೀಠದ ಅಧಿಪತಿಯನ್ನಾಗಿ ನೇಮಿಸಿ ದಕ್ಷಿಣಾಮ್ನಾಯ ಪೀಠವನ್ನು ಸ್ಥಾಪಿಸಿದರು. ಯಾರು ಎಲ್ಲ ಸಜ್ಜನರ ಅಂತರಂಗದಲ್ಲಿರುವ ಚೈತನ್ಯವಾಗಿ ಪ್ರಕಾಶಿಸುತ್ತಾ ಸಾಕ್ಷೀಭೂತರಾಗಿರುವರೋ ಆ ಶ್ರೀಮಚ್ಛಂಕರಭಗವತ್ಪಾದರು ಅಪಮಂಗಳವನ್ನು ಹೋಗಲಾಡಿಸಲಿ.

ಸಂತಃ ಕಿಯಂತ ಇಹ ಭಾರತವರ್ಷಧಾತ್ರ್ಯಾ
ಪುತ್ರೀಕೃತಾಃ ಸುಕೃತಿನೋ ಯಶಸಾ ಜಯಂತಿ ।
ಕಿಂತು ಪ್ರಸಾದಸದನಂ ನನು ಶಂಕರಾರ್ಯೋ
ರತ್ನಾಯತೇ ವಿಮಲಮೌಕ್ತಿಕಗುಚ್ಛಮಧ್ಯೇ ॥ ೨೦

ಭಾರತಾಂಬೆಯ ಪುತ್ರರೆನಿಸಿರುವ ಎಷ್ಟೋ ಮಂದಿ ಪುಣ್ಯಾತ್ಮರಾದ ಸಜ್ಜನರು ಯಶಸ್ಸಿನಿಂದ ಎಲ್ಲರಿಗೂ ಮಿಗಿಲಾಗಿ ಶೋಭಿಸುತ್ತಿರುವರಷ್ಟೆ. ಆದರೆ ಪ್ರಸನ್ನತೆಯ ಸದನವೇ ಆಗಿರುವ ಶ್ರೀಶಂಕರಾಚಾರ್ಯರು ಅಚ್ಚಮುತ್ತಿನಕುಚ್ಚನಡುವೆಯಿರುವ ರತ್ನದಂತೆ ಕಂಗೊಳಿಸುತ್ತಿದ್ದಾರೆ.

ಶ್ರೀಶಂಕರಃ ಶ್ರುತಿಮತೋದ್ಧರಣೈಕದೀಕ್ಷಃ
ಶಿಷ್ಯಪ್ರವೇಕಪರಿದರ್ಶಿತಸೈಕತಾಧ್ವಾ ।
ಕಲ್ಲೋಲಮಾಲವರುಣಾಲಯತೀರಚಾರೀ
ಗೋಕರ್ಣಮಾಪ ಭಗವಾನ್ ಸ ಚ ಕಾಶಿಕಾಭಮ್ ॥ ೨೧

ಸನಾತನ ಧರ್ಮೋದ್ಧಾರವೇ ಮುಖ್ಯವ್ರತಸಂಕಲ್ಪವಾಗಿ ಉಳ್ಳ ಶ್ರೀಮಚ್ಛಂಕರಾಚಾರ್ಯರು ತೆಂಕಣ ಕಡಲ ತೀರದಲ್ಲಿ ಪ್ರಯಾಣ ಮಾಡಬಯಸಿದರು. ಕೂಡಲೇ ಗುರುಗಳ ಇಂಗಿತವನ್ನರಿತ ಶಿಷ್ಯರು ಕರಾವಳಿಯ ಮರಳ ದಾರಿ ಹಿಡಿದು ಮುಂದಾದರು. ಹೆದ್ದೆರೆಗಳ ಮಾಲೆಯುಳ್ಳ ಸಮುದ್ರದ ದಂಡೆಯ ಮೇಲೆ ನಡೆಯುತ್ತಾ ಶ್ರೀಮದಾಚಾರ್ಯರು ದಕ್ಷಿಣಕಾಶಿಯೆನಿಸಿದ ಗೋಕರ್ಣಕ್ಷೇತ್ರಕ್ಕೆ ಬಂದರು.

*ಗೋಭಿಃಸ್ತುತೋಽವ್ಯಕೃತಕಾಭಿರಗೋಚರೋ ಯೋ
ಗೋಕರ್ಣಗೋಚರ ಇಹ ಪ್ರಥತೇ ಸ್ವಯಂಭೂಃ ।
ಗೋಚಾರಕೈರಪಿ ಚ ಗೋರಸಸಿಕ್ತಶೀರ್ಷೋ
ಗೋಸ್ವಾಮಿತಾಂ ದಿಶತಿ ಯತ್ರ ಸ ಗೋರಧೀಶಃ ॥ ೨೨

ಅಪೌರುಷೇಯಗಳಾದ ವೇದಗಳ ವಾಕ್ಯಗಳಿಂದ ಸ್ತುತ್ಯನಾದರೂ ಅತೀಂದ್ರಿಯನಾಗಿ ಸ್ವಯಂಭೂವೆನಿಸಿದ ಯಾವನು ಗೋಕರ್ಣದಲ್ಲಿ ಗೋಚರನಾಗಿರುವನೋ, ಯಾವನು ಗೋಚಾರಕರಾದ ಗೊಲ್ಲರಿಂದಲೂ ಗೋರಸಾಭಿಷಿಕ್ತನಾಗಿ ಭಕ್ತರಿಗೆ ಗೋಸ್ವಾಮಿತ್ವವನ್ನು ಅನುಗ್ರಹಿಸುವನೋ ಆ ಮಹಾಬಲೇಶ್ವರ ಸ್ವಾಮಿಯು ಯಾವ ಕ್ಷೇತ್ರದಲ್ಲಿ ನಿತ್ಯವೂ ಸನ್ನಿಹಿತನಾಗಿರುವನೋ ಆ ಕ್ಷೇತ್ರಕ್ಕೆ ಶ್ರೀಮದಾಚಾರ್ಯರು ಬಂದರು.

ಪೌಲಸ್ತ್ಯಬಾಹುಪರಿಘಪ್ರಹತೋಽಪ್ಯಶೀರ್ಣಃ ೨೩
ಶ್ರದ್ಧಾಂಕುರೋಲ್ಲಸಿತಪಲ್ಲವಪುಷ್ಪಶೋಭೀ ।
ಸೇವಾಪ್ರಚೇಯಪುರುಷಾರ್ಥಫಲಃ ಪುರಾಣಃ
ಸ್ಥಾಣುಃ ಸ್ಥಿತಃ ಖಲು ಮಹಾಬಲನಾಮಧೇಯಃ ॥

ಗೋಕರ್ಣ ಕ್ಷೇತ್ರದಲ್ಲಿ ಹಳೆಯ ಸ್ಥಾಣುವೊಂದಿದೆ (ಸ್ಥಾಣು-ಗೂಟ, ಈಶ್ವರ) ಈ ಸ್ಥಾಣುವು ಲಂಕೇಶ್ವರನಾದ ರಾವಣನ ತೋಳಪರಿಘದ ಏಟಿಗೂ ಜಗ್ಗಲಿಲ್ಲ. ಶ್ರದ್ಧೆಯ ಜಲ ಸೇಕದಿಂದ ಮೊಳಕೆಯೊಡೆದು ಚಿಗುರಿ ಹೂ ಹಣ್ಣು ಬಿಟ್ಟು ಕಂಗೊಳಿಸುವ ಸ್ಥಾಣುವಿದು. ಇದರ ಸೇವೆಯಿಂದ ಪುರುಷಾರ್ಥಗಳೆಂಬ ಹಣ್ಣು ಕೊಯ್ಲಿಗೆ ಸಿಗುವುದು. ಹಳೆಯ ಈ ಸ್ಥಾಣುವಿನ ಹೆಸರು "ಮಹಾಬಲ" ಎಂದು. ಲೋಕದಲ್ಲಿ

---

ಗೋಕರ್ಣ ಕ್ಷೇತ್ರದಲ್ಲಿ ಶಿವನಿಗೆ ಹಿಂದುಗಳಲ್ಲಿ ಎಲ್ಲ ವರ್ಣದವರೂ ತಮ್ಮ ಕೈಯಾರೆ ಅಭಿಷೇಕ ಮಾಡಿ ಪೂಜೆ ಮಾಡುವ ಪದ್ಧತಿ ಹಿಂದಿನಿಂದಲೂ ಇದೆ, ಈಶ್ವರನು ಭಕ್ತರ ಬಗೆಬಗೆಯ ಇಷ್ಟಾರ್ಥಗಳನ್ನು ಕೊಡುವನಲ್ಲವೇ! ಈ ಪದ್ಯದಲ್ಲಿ ಗೋಶಬ್ದದ ನಾನಾರ್ಥಗಳಲ್ಲಿ ಕೆಲವನ್ನು ಬಳಸಿದುದರಿಂದ ಅಭಿಪ್ರಾಯ ಹೀಗೂ ಆಗಬಹುದಾಗಿದೆ. ಗೋಚಾರಕ-ಭೂಪಾಲ, ಪಂಡಿತ ಗೊಲ್ಲ ಗೋರಸ-ಹಾಲು ಮೊಸರು ತುಪ್ಪ ಮೊದಲಾದ ಪಂಚಾಮೃತ. ಗೋಸ್ವಾಮಿತ್ವ ರಾಜತ್ವ. ವಾಚಸ್ಪತಿತ್ವ. ಕ್ಷೇತ್ರಾದಿಗಳು, ಪಶುಸಂಪತ್ತು ಇತ್ಯಾದಿ, ಶಿವನಿಗೆ ಪಂಚಾಮೃತಾಭಿಷೇಕ ಮಾಡಿಸಿದ ಭೂಪತಿಗೆ ರಾಜ್ಯ ಪಂಡಿತರಿಗೆ ವಾಚಸ್ಪತಿತ್ವ ರೈತರಿಗೆ ಕ್ಷೇತ್ರ ಸಂಪತ್ತು. ಗೊಲ್ಲರಿಗೆ ಗೋಸಂಪತ್ತು ಈ ಎಲ್ಲವನ್ನು ಆಯಾಭಕ್ತರ ಅಪೇಕ್ಷೆಯಂತೆ ಪ್ರಸನ್ನನಾದ ಈಶ್ವರನು ಅನುಗ್ರಹಿಸುವನು.

ಒಣಗೂಟ ಚಿಗುರಿ ಹೂ ಹಣ್ಣು ಬಿಡುವುದು ಅಸಂಭವ ಈ ಸ್ಥಾಣುವು (ಶಿವನ) ಲೋಕಾತೀತವಾದ ಸತ್ವವುಳ್ಳದ್ದು ಅಂದರೆ ಪರಮೇಶ್ವರನನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ಆರಾಧಿಸಿದವರಿಗೆ ಇಷ್ಟಾರ್ಥಗಳು ತಪ್ಪದೇ ಸಿದ್ಧಿಸುತ್ತವೆ. 'ನೀನೊಲಿದರೆ ಕೊರಡು ಕೊನರುವುದಯ್ಯ' ಎಂದು ಶಿವಶರಣರೂ ಹೇಳಿಲ್ಲವೇ ! ಆತನು ಅನಾದಿ ಅನಂತ ಲೋಕಸಾಮಾನ್ಯರನಡಾವಳಿಗೆ ಮೀರಿದ ಅಸಾಧಾರಣ ಹಾಗೂ ಅಚಿಂತ್ಯ ಮಹಿಮೆಯುಳ್ಳವನು ಈಶ್ವರ ಅಂತಹ ಮಹಾಬಲೇಶ್ವರನ ಸನ್ನಿಧಿ ಗೋಕರ್ಣದಲ್ಲಿ ಇದೆ; ಎಂದು ತಾತ್ಪರ್ಯ

**ಉಲ್ಲೋಲಲೋಲಶಫರೌಘಸಹಸ್ರನೇತ್ರಃ**
**ಸ್ವಾಂತರ್ನಿಲೀನವಿಮಲಾಂಬರಶುಭ್ರಗಾತ್ರಃ ।**
**ಸ್ವಾಧೀನಜೀವನನದೀಶತಸತ್ಕಲತ್ರೋ**
**ಯತ್ರೋದಧಿರ್ಲಸತಿ ಕೋಽಪಿ ಪುಮಾನ್ ವಿಚಿತ್ರಃ ॥** ೨೪

ಇಲ್ಲಿರುವ ಸಮುದ್ರವನ್ನು ವಿಚಿತ್ರ ಮನುಷ್ಯನೆಂದು ಹೇಳಬಹುದು. ದೊಡ್ಡ ದೊಡ್ಡ ಅಲೆಗಳ ನಡುವೆ ಹೊರಳಾಡುತ್ತಿರುವ ಮೀನುಗಳ ರಾಶಿಯೇ ಆವನ ನೂರಾರು ಕಣ್ಣುಗಳು ತನ್ನ ಅಂತರಂಗದಲ್ಲಿ ಮೂಡಿರುವ ಶುಭ್ರಾಕಾಶದಂತಿದೆ ಅವನ ನಿರ್ಮಲವಾದ ಶರೀರ, ತನಗೆ ಅಧೀನವಾದ ಜೀವನವುಳ್ಳ ನೂರಾರು ತೊರೆಗಳೇ ಅವನ ಹೆಂಡಿರು, ಅನೇಕ ಕುಟುಂಬಗಳ ಹೊಟ್ಟೆಹೊರೆಯುವ ಸಾಮರ್ಥ್ಯ ಇವನಿಗೆ ಇದೆ. [ಜೀವನ–ಬದುಕು, ನೀರು, ಸಹಸ್ರನೇತ್ರ, ಸಾವಿರಕಣ್ಣು ಇಂದ್ರ, ಶುಭ್ರಗಾತ್ರ–ಬಿಳಿಯಮೈ, ಸತ್ಕಲತ್ರ,–ಒಳ್ಳೆಯ ಹೆಂಡತಿ]

**ಆತ್ಮಂಭರಿರ್ನದನದೀವಿಮಲಾಂಬುಪೂರೈಃ**
**ಪ್ರಾಣಂಧಮೋ ಧವಲಫೇನತರಂಗಸಂಘೈಃ ।**
**ಕುಕ್ಷಿಂಭರಿರ್ವಿಪುಲರತ್ನಸಶುಕ್ತಿಶಂಖೈ–**
**ರಂಭೋನಿಧಿರ್ಜಯತಿ ಜೀವನಮೂಲಧಾರೀ ॥** ೨೫

ಈ ಪುರುಷನ ಹೊಟ್ಟೆ ಹಳ್ಳ ಕೊಳ್ಳ ಹೊಳೆ ತೊರೆಗಳ ನೀರ ಪೂರದಿಂದ ತುಂಬಿದೆ. ಇಲ್ಲಿ ಬಿಳಿ ನೊರೆಯ ಹಲವು ಅಲೆಗಳು ಭೋರ್ಗರೆಯುತ್ತಿರುವುದರಿಂದ ಅಂಜಿಕೆಯ ಅಪಾಯದ ಶಂಕೆಯಿಂದ ಚಪ್ಪಾಳೆ ತಟ್ಟಿ ಮುಂದೆ ಹೆಜ್ಜೆಯಿಟ್ಟು ಸಾಗಬೇಕಾದ ದುರ್ಗಮಮಾರ್ಗದಂತಿದೆ ಇವನ ಸ್ಥಿತಿ. ಕಪ್ಪೆಚಿಪ್ಪು ಶಂಖ ಮುತ್ತು ರತ್ನ ಮೊದಲಾದವುಗಳು ರಾಶಿರಾಶಿಯಾಗಿ ಇವನ ಹೊಟ್ಟೆಯಲ್ಲಿ ಇಡಕಿರಿದಿವೆ. ಆದುದರಿಂದ ಇವನು ಆತ್ಮಂಭರಿ ಹೊಟ್ಟೆಬಾಕ ಅಥವಾ ಸ್ವಾರ್ಥಿಯಾಗಿರಬೇಕು ಜನಜೀವನವನ್ನು ಭರಿಸಬಲ್ಲ ಈ ಸಮುದ್ರದ ಯೋಗ್ಯತೆ ಇತರ ವಸ್ತುಗಳಿಗಿಂತಲೂ ಹಿರಿದು.

ಉತ್ತಾಲತಾಲಕೃತ ಮಾಲರಸಾಲಸಾಲ–
ಚ್ಛಾಯಾ ಸುಶೀತಲಸುಹೀತಲಶೀತಲಾಂಗಮ್ ।
ಲೀಲಾ ವಿಲಾಸಿಪರಮೇಶ್ವರಲಾಸ್ಯರಂಗಂ ।
ಗೋಕರ್ಣಮಾಗಮದಸೌ ಧುತಸರ್ವಸಂಗಃ ॥ ೨೬

ವಿರಕ್ತರಾದ ಶ್ರೀ ಶಂಕರರು ಲೀಲಾವಿನೋದಿಯಾದ ಪರಮೇಶ್ವರನ ನಾಟ್ಯ ರಂಗದಂತಿರುವ ಗೋಕರ್ಣಕ್ಕೆ ಬಂದರು. ಎತ್ತರವಾದ ತಾಳೆ, ಕಕ್ಕೆ, ಮಾವು, ಮತ್ತಿ ಮುಂತಾದ ಮರಗಳ ದಟ್ಟವಾದ ನೆರಳಿನಿಂದ ಅಲ್ಲಿಯ ನೆಲ ತಂಪಾಗಿತ್ತು.

ಶ್ರೇಣಿಸ್ತ್ವನೀಶ್ವರಕೃತಾಹಿತದಕ್ಷಯಜ್ಞ–
ಭಾಗಾಶನಾ ಕ್ರತುಭುಜಾಂ ವಿಹಿತಾಪರಾಧಾ ।
ಗೋಕರ್ಣಮೇತ್ಯ ಕರುಣಾದ್ರ್ರಮುಮಾಸಹಾಯಂ
ಭಕ್ತ್ಯಾ ಪ್ರಸಾದಯತಿ ಕಿಂ ಪ್ರಣಿಪಾತಪೂರ್ವಮ್ ॥ ೨೭

ಇಲ್ಲಿ ಇಂದ್ರಾದಿ ಸಮಸ್ತ ದೇವತೆಗಳೂ ನೆಲೆಸಿದ್ದಾರೆ. ಇವರು ಹಿಂದೆ ದಕ್ಷನು ಶಿವನನ್ನು ಬಹಿಷ್ಕರಿಸಿ ಮಾಡಿದ ಅಹಿತವಾದ ಯಜ್ಞದಲ್ಲಿ ಉಪಸ್ಥಿತರಿದ್ದು, ಹವಿ ರ್ಭಾಗ ಪಡೆದು, ಶಿವನಿಗೆ ಅಪಮಾನವೆಸಗಿ ತಪ್ಪಿತಸ್ಥರಾಗಿ ಅವನ ಕೋಪಕ್ಕೆ ಒಳ ಗಾಗಿದ್ದರು. ಅವರು ಇಲ್ಲಿ ಕರುಣಾಸಾಗರನೂ ಉಮಾಸಹಿತನೂ ಆದ ಮಹಾ ಬಲೇಶ್ವರನನ್ನು ಈಗ ಕಂಡು ಕಾಲಿಗೆ ಬಿದ್ದು ಕ್ಷಮೆ ಕೇಳಿ ಒಲಿಸಿಕೊಳ್ಳಲು ಬಹುಶಃ ಯತ್ನಿಸುತ್ತಿರಬಹುದು.

ಯಸ್ಮಿನ್‌ಪ್ರಸಾದಲಹರೀ ಪರಮೇಶ್ವರಸ್ಯ
ಜಾಗರ್ತಿ ಭಕ್ತಿವಶಗಾ ಭಜಕಾರ್ತಿಹಂತ್ರೀ ।
ಭಾಗೀರಥೀಂ ನಿಜಕುಲೋದ್ಧರಣಾಯ ನೇತುಂ
ತೀವ್ರಂ ತಪೋಽಕೃತ ಚಿರಾಯ ಭಗೀರಥೋಽತ್ರ ॥ ೨೮

ಭಕ್ತಿಗೆ ಅಧೀನವಾಗಿರುವ ಮಹಾಬಲೇಶ್ವರನ ಅನುಗ್ರಹವೆಂಬ ತರಂಗವು ಭಕ್ತರ ಒಳಿತಿಗಾಗಿ ಇಲ್ಲಿ ಎಚ್ಚರವಾಗಿದೆ. ಹಿಂದೆ ಸಗರ ವಂಶದ ಭಗೀರಥನೆಂಬ ರಾಜನು ತನ್ನ ಹಿರಿಯರ ಉದ್ಧಾರಕ್ಕಾಗಿ ಗಂಗೆಯನ್ನು ಒಯ್ಯಲು ಶಂಕರನನ್ನು ಕುರಿತು ದೀರ್ಘಕಾಲ ತಪಸ್ಸು ಮಾಡಿದುದು ಇಲ್ಲಿಯೇ.

ತಸ್ಮಿನ್ಮಹಾಬಲ ಕೃಪಾರಸಪೂರ್ಣತೀರ್ಥೇ
ವೇದ ತ್ರಯೀಪಠನಪಾಠನಸಕ್ತವಿಪ್ರೇ ।
ಸಾಕ್ಷಾದ್ಯತೀಶ್ವರವಪುರ್ಧರಮಾಗತಂ ತಂ
ಕೈಲಾಸನಾಥ ಇತಿ ಸರ್ವಜನೋಽಪ್ಯಮಂಸ್ತ ॥ ೨೯

ಆ ಗೋಕರ್ಣದಲ್ಲಿ ಕೋಟಿತೀರ್ಥವೇ ಮುಂತಾದ ಸರೋವರಗಳು ಶ್ರೀಮಹಾಬಲೇಶ್ವರ ಸ್ವಾಮಿಯ ಕೃಪಾರಸದಿಂದ ತುಂಬಿರುವುವೋ ಎಂಬಂತೆ ಜಲಭರಿತವಾಗಿವೆ. ಇಲ್ಲಿರುವ ಬ್ರಾಹ್ಮಣರು ವೇದವೇದಾಂಗ ಪಾರಂಗತರು. ಇವರು ಯಾವಾಗಲೂ, ಅಧ್ಯಯನ. ಅಧ್ಯಾಪನ, ಯಜನ, ಯಾಜನ ಮುಂತಾದ ಸ್ವಧರ್ಮದಲ್ಲಿ ನಿರತರಾಗಿರುತ್ತಾರೆ. ಹೀಗಿರುವ ಆ ಕ್ಷೇತ್ರದ ಬ್ರಾಹ್ಮಣರ ಕೇರಿಯಲ್ಲಿ ಯತಿಗಳೊಬ್ಬರು ಬರುತ್ತಿದ್ದಾರೆ. ಅವರ ಗಾಂಭೀರ್ಯ, ತೇಜಸ್ಸುಗಳನ್ನು ಪರಿಶೀಲಿಸಿದ ಮಹಾಜನರು ಯತಿವೇಷಧಾರಿಯಾದ ಕೈಲಾಸ ಪತಿಯೆಂದು ಭಾವಿಸಿದರು. ಅವರೇ ಶ್ರೀ ಶಂಕರಾಚಾರ್ಯರು,

ದೃಷ್ಟ್ವಾ ಸ ತತ್ರ ಹಿ ಮಹಾಬಲಮಿಂದುಮೌಲಿಂ
ಸ್ವಾತ್ಮಾನಮೇವ ತದಭಿನ್ನತಯಾ ವಿವೇದ ।
ಆಚಾರ್ಯಮೌಲಿರನವದ್ಯರಸೋದ್ಯಪದ್ಯೈ-
ಸ್ತುಷ್ಟಾವ ಶಿಷ್ಟಜನವಂದಿತಮಷ್ಟಮೂರ್ತಿಮ್ ॥ ೩೦

ಅಲ್ಲಿ ಶ್ರೀಶಂಕರಾಚಾರ್ಯರು ಮಹಾಬಲನೆಂದು ಪ್ರಸಿದ್ಧನಾದ ಚಂದ್ರಮೌಳಿಯಾದ ಸ್ವಯಂಭೂಲಿಂಗವನ್ನು ಸಮೀಕ್ಷಿಸಿ ತಮ್ಮ ಸ್ವರೂಪವೇ ಆಗಿ ಹೃದಯಾಕಾಶದಲ್ಲಿ ಬೆಳಗುತ್ತಿರುವ ಸ್ವಯಂಪ್ರಕಾಶ ಚೈತನ್ಯಕ್ಕಿಂತಲೂ ಬೇರೆಯಾಗಿ ತೋರದ ಅದ್ವೈತ ಪರಮಾರ್ಥತತ್ತ್ವವನ್ನು ಸಾಕ್ಷಾತ್ಕರಿಸಿ ಆನಂದಿಸಿದರು, ಬಳಿಕ ಆಚಾರ್ಯರು ದೋಷರಹಿತವಾದ ರಸಾಭಿವ್ಯಂಜಕ ಪದ್ಯಗಳಿಂದ ಶಿಷ್ಟವಂದಿತನೂ ಅಷ್ಟಮೂರ್ತಿಯೂ ಆದ ಮಹಾಬಲೇಶ್ವರನನ್ನು ಸ್ತುತಿಸಿದರು

ಅಭ್ಯಾಗತಂ ಯತಿಮತರ್ಕಿತದೀಪ್ತಿರಾಶಿಂ
ದೃಷ್ಟ್ವಾ ತ್ವಿಷಾಸ್ಯ ನಿತರಾಂ ವಿವಶಾ ಗೃಹಸ್ಥಾಃ ।
ನೀತ್ವಾ ಗೃಹಾನ್ವಿಧಿವದಾದರತೋಽರ್ಘ್ಯಹಸ್ತಾಃ
ಆತಿಥ್ಯಮಾತ್ಮವಿಭವಾನುಗುಣಂ ವಿತೇನುಃ ॥ ೩೧

ಇಂತಹುದೆಂದು ನಿಶ್ಚಯಕ್ಕೆ ನಿಲುಕದ ಬೆಳಕಿನ ರಾಶಿಯಾಗಿರುವ ಆ ಸಂನ್ಯಾಸಿ ಅತಿಥಿಯನ್ನು ನೋಡಿ ಅಲ್ಲಿನ ಗೃಹಸ್ಥರು ಅವರ ತೇಜಸ್ಸಿನಿಂದ ಅತ್ಯಂತ ಬೆರಗಾದರು ಆ ತೇಜಸ್ವಿ ಅತಿಥಿಯನ್ನು ಎಲ್ಲರೂ ತಮ್ಮ ತಮ್ಮ ಮನೆಗೆ ಬರಮಾಡಿಕೊಂಡು ತಮ್ಮ ತಮ್ಮ ಸಂಪತ್ತಿಗೆ ಅನುಗುಣವಾಗಿ ಅರ್ಘ್ಯಹಸ್ತರಾಗಿ ವಿಧಿವತ್ತಾಗಿ ಪೂಜಿಸಿ ಹೂ, ಹಣ್ಣು, ಹಾಲು ಮುಂತಾದವನ್ನು ಕೊಟ್ಟು ಗೌರವಿಸಿದರು.

ಕಲ್ಲೋಲ ಫೇನಿಲಜಲೋತ್ಕಿರಸಿಂಧುಕೂಲೇ
ಸ್ಥಾನೇಽತ್ರ ಭವ್ಯಶತಶೃಂಗಮಹೀಧ್ರಸಾದೇ ।
ಕುಂಭೋದ್ಭವೋಕ್ತಸರಹಸ್ಯತಪಃಪ್ರಕಾಶ-
ಕ್ಷೇತ್ರಸ್ಯ ಧಾಮ ವರದಸ್ಯ ಮುನೇಶ್ಚಕಾಸ್ತಿ ॥ ೩೨

ಗೋಕರ್ಣದ ಶತಶೃಂಗ ಪರ್ವತದ ತಪ್ಪಲು ಪ್ರದೇಶ ಸಮುದ್ರದ ದಂಡೆಗೆ ಹೊಂದಿಕೊಂಡಿವೆ. ಕಡಲಿನ ಹೆದ್ದೆರೆಗಳು ಉಗುಳಿದ ನೊರೆನೊರೆಯ ನೀರು ತಾಕುತ್ತಿರುವುದರಿಂದ ಇಲ್ಲಿಯ ತೀರಪ್ರದೇಶ ಯಾವಾಗಲೂ ತಂಪಾಗಿದೆ. ವರದ ಮಹರ್ಷಿಗಳ ಆಶ್ರಮವಿರುವುದು ಇಲ್ಲಿಯೇ; ವರದಮುನಿಗಳು ಸಾಮಾನ್ಯರಲ್ಲ. ಅಗಸ್ತ್ಯಋಷಿಗಳ ಹತ್ತಿರ ಶಿಷ್ಯವೃತ್ತಿ ಮಾಡಿ ಅವರಿಂದ ತಪಸ್ಸಿನ ರಹಸ್ಯವನ್ನು ಅರಿತು ಲೋಕಾನುಗ್ರಹಕ್ಕಾಗಿ ಅವನ್ನು ಪ್ರಕಾಶಪಡಿಸಿದ ಮಹಾನುಭಾವರು.

ಬುದ್ಧ್ವಾ ಮುನಿಃ ಶಿವಮಿಹಾಗತಮಂತರಂಗೇ
ತಸ್ಯಾಂತಿಕಂ ಸ್ವಯಮುಪೇತ್ಯ ನನಾಮ ಭಕ್ತ್ಯಾ ।
ತಸ್ಮೈ ತತಃ ಸ್ವವಿಧಿನಾ ಕಲಶೋದ್ಭವೇನಾ-
ಪ್ಯಾರಾಧಿತಂ ರಘುಪತಿಪ್ರತಿಮಾದ್ಯಯಚ್ಛತ್ ॥ ೩೩

ಶಿವನ ಅವತಾರಿಗಳಾದ ಶಂಕರಾಚಾರ್ಯರು ಈಗ ಗೋಕರ್ಣಕ್ಕೆ ಬಂದಿರುವುದನ್ನು ಅವರು ತಮ್ಮ ಧ್ಯಾನಯೋಗದಿಂದ ತಿಳಿದರು. ಕೂಡಲೇ ವರದಮಹರ್ಷಿಗಳು ತಾವಾಗಿಯೇ ಆಚಾರ್ಯರ ಹತ್ತಿರಕ್ಕೆ ಬಂದು ಭಕ್ತಿಯಿಂದ ವಂದಿಸಿದರು, ಬಳಿಕ ಅವರು ಅಗಸ್ತ್ಯ ಮಹರ್ಷಿಗಳು ಆರಾಧಿಸಿದ್ದ ರಾಮ, ಸೀತೆ, ಲಕ್ಷ್ಮಣ ಇವರ ಮೂರ್ತಿಗಳನ್ನು ವಿಧಿವತ್ತಾಗಿ ಶಂಕರಾಚಾರ್ಯರಿಗೆ ಅರ್ಪಿಸಿದರು,

ಕಿಂ ಚ ನ್ಯವೇದಯದಸೌ ಯಮಿನಾಂ ವರೇಣ್ಯಂ
ರಾಮಸ್ಯ ಮೂರ್ತಿರಿಯಮಾನತಕಲ್ಪವಲ್ಲೀ ।
ಸಚ್ಚಿನ್ಮಯೀ ಕಿಲ ತಪೋಧನಪೂಜಿತಾಂಘ್ರಿಃ
ಸಂಜೀವಿನೀ ಭವವಿಷಾನಿಲಮೂರ್ಛಿತಾನಾಮ್ ॥ ೩೪

ಮತ್ತು ಅವರು ಆಚಾರ್ಯರನ್ನು ಕುರಿತು ಇದು "ಶ್ರೀರಾಮನ ಮೂರ್ತಿ ಭಕ್ತರಿಗೆ ಇಷ್ಟಾರ್ಥವನ್ನು ನೀಡುವ ಕಲ್ಪವಲ್ಲಿ. ಸಚ್ಚಿದಾನಂದ ರೂಪನಾದ ಶ್ರೀರಾಮನ ಈ ಮೂರ್ತಿಯನ್ನು ಹಿಂದೆ ಅಗಸ್ತ್ಯಮಹರ್ಷಿಗಳು ಅರ್ಚಿಸಿದ್ದರು, ಸಂಸಾರದ ರಾಗ ಮೋಹಗಳೆಂಬ ನಂಜಿನಗಾಳಿ ಸೋಂಕಿ, ಎಚ್ಚರ ತಪ್ಪಿದ ಮನುಷ್ಯರಿಗೆ ಮತ್ತೆ ಎಚ್ಚರ ತರುವ ಸಂಜೀವನ ಮೂಲಿಕೆಯೇ ಇದು" ಎಂದು ಬಿನ್ನೈಸಿದರು, ಹಾಗೂ ಮುಂದುವರಿದು,

ಸ್ವಾಮಿನ್ನಿಯಂ ರಘುಪತೇಃ ಪ್ರತಿಮಾ ಸವಿತ್ರೀ
ಸೂಪಾಸಿತಾ ತನುಭೃತೋಽಖಿಲಕಾಮಿತಾನಾಮ್ ।
ಪ್ರಾಪ್ತಾ ಮಯಾ ಚಿರಮಧಿಷ್ಠಿತದಕ್ಷಿಣಾಶಾ-
ತೃಪ್ತಷ್ಠಾನ್ಮನೇರ್ಗುರುಕೃಪಾಭ್ರ ತರಂಗಿಣೀವ ॥ ೩೫

"ಪೂಜ್ಯರೇ ! ಭಕ್ತರು ಶ್ರದ್ಧೆಯಿಂದ ಚೆನ್ನಾಗಿ ಉಪಾಸನೆ ಮಾಡಿದರೆ ಈ ಶ್ರೀರಾಮನ ಪ್ರತಿಮೆ ಎಲ್ಲ ಇಷ್ಟಾರ್ಥಗಳನ್ನೂ ಕರೆಯಬಲ್ಲ ಕಾಮಧೇನು. ಬಹು ಕಾಲ ತೆಂಕಣ ದಿಕ್ಕಿನಲ್ಲಿ ಉಳಿದು ತಪಸ್ಸು ಮಾಡಿದ ಮಹಾನುಭಾವರೂ ಸಂತುಷ್ಟರೂ ಆದ ಅಗಸ್ತ್ಯಮಹರ್ಷಿಗಳಿಂದ ಗುರುವಿನ ಒಲುಮೆಯ ಬಾಂದೊರೆಯೋ ಎಂಬಂತೆ ಇದು ನನಗೆ ದೊರಕಿತ್ತು.

ಸೀತಾಂ ಸತೀಮಿಹಭವಾನ್ನಿಜಸವ್ಯಭಾಗೇ
ಸೋದರ್ಯಮಾಪ್ತಮಿಹ ಲಕ್ಷ್ಮಣಮತ್ರ ದಕ್ಷೇ ।
ಚೀರಾಂಬರಂ ವರದಮಾಪ್ತಜಟಾಕಿರೀಟಂ
ಕೋದಂಡಪಾಣಿಮಥ ಪಶ್ಯತು ರಾಮಭದ್ರಮ್ ॥ ೩೬

ಇಲ್ಲಿ ನೋಡಿ, ಶ್ರೀರಾಮನ ಎಡಕ್ಕೆ ಇರುವುದು ಸತೀ ಸೀತಾದೇವಿಯ ಮೂರ್ತಿ. ಇಲ್ಲಿ ಸ್ವಾಮಿಯ ಬಲಕ್ಕೆ ಇರುವುದು ಆಪ್ತ ಸಹೋದರನಾದ ಲಕ್ಷ್ಮಣನ ವಿಗ್ರಹ. ಜಟಾಕಿರೀಟಿಯೂ, ಕೋದಂಡಪಾಣಿಯೂ ವರದನೂ ಆಗಿರುವ ಪ್ರಭು ಶ್ರೀರಾಮಭದ್ರನನ್ನು ತಾವು ಇಲ್ಲಿ ನೋಡಿರಿ.

ಏತಾ ಗೃಹಾಣ ಭಗವನ್! ಭಜಕಾರ್ಥಸಿದ್ಧ್ಯೈ ।
ಸಾಧ್ವರ್ಚಿತಾ ನನು ಭವಂತಿ ಸುರಾಃ ಪ್ರಸನ್ನಾಃ ।
ತ್ವಾಂ ವೇದ್ಮಿ ಸತ್ಪಥನಿರೋಧಕಕಾಲರಾತ್ರ್ಯೈಃ
ರಾಕಾಶಶಾಂಕಮಿವ ಭೂಚರಮಿಂದುಮೌಲಿಮ್ ॥ ೩೭

ಮಾನ್ಯರೇ ! ಭಜಕರ ಮನೋರಥದ ಸಿದ್ಧಿಗಾಗಿ ಈ ಮೂರ್ತಿಗಳನ್ನು ಸ್ವೀಕರಿಸಬೇಕು. ಚೆನ್ನಾಗಿ ಪೂಜಿಸಲ್ಪಟ್ಟ ದೇವತೆಗಳು ಪ್ರಸನ್ನರಾಗುವರಷ್ಟೇ! ಸನಾತನಧರ್ಮಪ್ರಸಾರದ ದಾರಿಗೆ ಅಡೆತಡೆಯಾಗಿರುವ ನಾಸ್ತಿಕರೆಂಬ ಕಗ್ಗತ್ತಲೆಯ ಇರುಳಿಗೆ ತಾವು ಹುಣ್ಣಿಮೆಯ ಚಂದ್ರಮನೋ ಎಂಬಂತೆ ಇರುವಿರಿ. ತಾವು ಸತ್ಯವಾಗಿಯೂ, ಭೂಮಿಯಲ್ಲಿ ಸಂಚರಿಸುತ್ತಿರುವ ಚಂದ್ರಮೌಳಿಯಾದ ಶಂಕರನೇ ಆಗಿರುವಿರಿ.

**ಇತ್ಥಂ ನಿವೇದ್ಯ ನಿರಗಾತ್ಸ ಮುನಿಸ್ತತೋಽಯಂ**
**ಧ್ಯಾತ್ವಾ ಗುರುಶ್ಚ ತದನಂತರಕೃತ್ಯಶೇಷಮ್ ।**
**ಸಂಕಲ್ಪಿತಂ ಪ್ರಥಮಮೇವ ನಿಜಾಂತರಂಗೇ**
**ಗೋಕರ್ಣಸೀಮನಿ ಮಠಂ ನಿರಮಾಪಯತ್ ಸಃ ॥** ೩೮

ಹೀಗೆ ಬಿನ್ನೈಸಿ ಆ ವರದ ಮಹರ್ಷಿಗಳು ರಾಮಾದಿ ಮೂರ್ತಿಗಳನ್ನು ಆಚಾರ್ಯರಿಗೆ ಕೊಟ್ಟು ತೆರಳಿದರು. ಬಳಿಕ ಶ್ರೀಶಂಕರರು ಅನಂತರ ಮಾಡಬೇಕೆಂದಿದ್ದ ಉಳಿದಿದ್ದ ಕೆಲಸವನ್ನು ಕುರಿತು ಕೊಂಚ ಯೋಚಿಸಿ ತಾವು ಮೊದಲೇ ಸಂಕಲ್ಪಿಸಿದಂತೆ ಗೋಕರ್ಣ ಕ್ಷೇತ್ರದಲ್ಲಿ ಮಠವೊಂದನ್ನು ಕಟ್ಟಿಸಿದರು.

**ಪಾರೇಪಯೋಧಿ ಶತಶೃಂಗಶಿಲೋಚ್ಚಯೋಽಂತಃ**
**ಶೋಕಾಪನೋದಿ ಶಿಶಿರಾಯಿತಶಿಂಶುಪಾಢ್ಯೇ ।**
**ಕ್ಷೇತ್ರೇಽಪ್ಯಶೋಕ ಇತಿ ಸಾರ್ಥಕನಾಮ್ನಿ ಪುಣ್ಯ-**
**ಶ್ಲೋಕೇನ ತೇನ ಗುರುಣಾ ನಿರಮಾಯಿ ಸದ್ಮ ॥** ೩೯

ಶತಶೃಂಗಪರ್ವತವು ಗೋಕರ್ಣದ ಕಡಲ ದಂಡೆಯ ಮೇಲಿರುವ ಪ್ರಶಾಂತವಾದ ಸ್ಥಲ. ಅಲ್ಲಿ ತಂಪನ್ನೆರೆಯುವ ದಟ್ಟವಾದ ನೆರಳಿನ ಛಾಪದ ಮರಗಳು ಹೇರಳವಾಗಿವೆ. ಅಲ್ಲಿನ ಸನ್ನಿವೇಶಗಳು ಯಾರಿಗಾದರೂ ಅಂತರಂಗದ ಶೋಕವನ್ನು ಹೋಗಲಾಡಿಸಬಲ್ಲವು. ಆ ಸ್ಥಲಕ್ಕೆ ಅಶೋಕವನವೆನ್ನುವರು. ಅದು ಹೆಸರಿಗೆ ತಕ್ಕಹಾಗೆಯೇ ಇದೆ. ಕೀರ್ತಿಶಾಲಿಗಳಾದ ಶ್ರೀಶಂಕರಭಗವತ್ಪಾದರು ಇಲ್ಲಿ ಮಠಾಯತನವನ್ನು ಕಟ್ಟಿಸಿದರು.

**ನಿರ್ಮಾಪ್ಯ ನೂತನಮಠಂ ಯತಿಸಾರ್ವಭೌಮ-**
**ಶ್ಚಕ್ರೇ ಸ ತಸ್ಯ ಚ ರಘೂತ್ತಮ ಇತ್ಯಭಿಖ್ಯಾಮ್ ।**
**ರಾಮೋ ರಘೂತ್ತಮ ಇತಿ ಪ್ರಥಿತೋ ರಘೂಣಾ-**
**ಮಾರಾಧ್ಯತೇಽತ್ರ ಖಲು ಮುಖ್ಯತಯಾ ಸ ದೇವಃ ॥** ೪೦

ಯತಿಸಾರ್ವಭೌಮರಾದ ಶ್ರೀಶಂಕರಾಚಾರ್ಯರು ಕಟ್ಟಿಸಿದ ಈ ಹೊಸ ಮಠಕ್ಕೆ "ರಘೂತ್ತಮ" ಎಂದು ಹೆಸರಿಟ್ಟರು. ರಘುಕುಲದಲ್ಲಿ ರಘೂತ್ತಮನೆಂದು ಪ್ರಸಿದ್ಧನಾದ ಶ್ರೀರಾಮನೇ ಈ ಮಠದ ಮುಖ್ಯವಾದ ಆರಾಧ್ಯ ದೇವತೆಯಲ್ಲವೇ. ಅಂದ ಬಳಿಕ ಈ ಮಠವೂ ರಘೂತ್ತಮಮಠವೆಂದು ಗೋಕರ್ಣದಲ್ಲಿ ಪ್ರಸಿದ್ಧವಾಯಿತು.

**ಆಚಾರ್ಯಪೀಠಮಧಿರೋಢುಮದೋಮಠಸ್ಯ**
**ಶಿಷ್ಯೇಷು ಸಂಯಮಧನೇಷ್ವಿಹ ಕಃ ಸಮರ್ಥಃ ।**
**ಚಿಂತಾಮುಪೇಯುಷಿ ಗುರಾವಿತಿ ತತ್ರ ವಿದ್ಯಾ-**
**ನಂದೋ ವಿನೀತಮತಿರಸ್ಯ ಪದಾನತೋಽಭೂತ್ ॥** ೪೧

ಸಂಯಮಧನರಾದ ನಮ್ಮ ಶಿಷ್ಯರೊಳಗೆ ಈ ಮಠದ ಆಚಾರ್ಯತ್ವದ ಗದ್ದುಗೆಗೆ ತಕ್ಕವರು ಯಾರು ಇರಬಹುದು ?—ಎಂದು ಶ್ರೀಶಂಕರರು ತಮ್ಮೊಳಗೆ ಆಲೋಚಿಸುತ್ತಿರುವಷ್ಟರಲ್ಲಿ ತಮ್ಮ ಶಿಷ್ಯರಾದ ವಿದ್ಯಾನಂದಯತಿಗಳು ಬಂದು ಗುರುಗಳ ಪಾದಗಳಿಗೆ ಎರಗಿದರು

**ತಂ ವೀಕ್ಷ್ಯ ಚಾತ್ಮನಿ ಸುರೇಶ್ವರದತ್ತದೀಕ್ಷಂ**
**ಸ್ವಸ್ಮಾದಧೀತನಿಗಮಾಂತಸಪುಸ್ತಭಾಷ್ಯಮ್ ।**
**ಆಚಾರ್ಯಕಂ ಪದಮಯಂ ಪ್ರತಿಪತ್ತುಮರ್ಹೋ**
**ಬ್ರಹ್ಮಪ್ರಕಾಶವಿರಜಾ ಇತಿ ನಿಶ್ಚಿಕಾಯ ॥** ೪೨

ತಮ್ಮ ಕಾಲಿಗೆ ಅಡ್ಡಬಿದ್ದ ಆ ವಿದ್ಯಾನಂದರನ್ನು ನೋಡಿದ ಆಚಾರ್ಯರು ತಮ್ಮ ಮನಸ್ಸಿನಲ್ಲಿ ಓಹೋ ! ಇವನು ನಮ್ಮ ಹತ್ತಿರ ವೇದಾಂತದ ಪ್ರಕರಣ ಗ್ರಂಥಗಳನ್ನೆಲ್ಲ ಭಾಷ್ಯಸಹಿತ ಓದಿದ ವಿದ್ಯಾನಂದ. ಈತನಿಗೆ ನಮ್ಮ ಶಿಷ್ಯರಾದ ಸುರೇಶ್ವರಾಚಾರ್ಯರು ಸಂನ್ಯಾಸ ದೀಕ್ಷೆಯನ್ನು ಕೊಟ್ಟಿರುವರು. ಸ್ವಯಂ ಪ್ರಕಾಶ ರೂಪವಾದ ಬ್ರಹ್ಮಾನುಭವವುಳ್ಳ ಇವನು ನಿಷ್ಕಲ್ಮಷನು. ಈತನೇ ಈ ರಘೂತ್ತಮ ಮಠದ ಆಚಾರ್ಯ ಸ್ಥಾನಕ್ಕೆ ತಕ್ಕವನು" ಎಂದು ನಿಶ್ಚಯಿಸಿದರು

**ಭೃಂಗಾಯಮಾನಮಮುಮಂಘ್ರಿಸರೋರುಹಾಂತೇ**
**ಪ್ರೋದ್ಧೃತ್ಯ ತಂ ಕರುಣಯಾ ಪರಿವೀಕ್ಷಮಾಣಃ ।**
**ಉದ್ಭ್ರಾಂತದಂತಕಿರಣೈರಿವ ನಿರ್ಮಲಾಭಿ-**
**ರ್ವಾಗ್ಭಿಃ ಪ್ರಶಿಷ್ಯಮಿದಮಾಹ ಜಗದ್ಗುರುರ್ನಃ ॥** ೪೩

ಬಳಿಕ ತಮ್ಮ ಅಡಿದಾವರೆಗಳ ಮೇಲೆ ದುಂಬಿಯಂತೆ ಎರಗಿದ್ದ ಈ ವಿದ್ಯಾನಂದ ನ್ನು ಮೇಲಕ್ಕೆ ಎತ್ತಿದರು. ಕರುಣೆಯಿಂದ ನೋಡುತ್ತಾ ಜಗದ್ಗುರುಗಳಾದ ಕರರು ತಮ್ಮ ಬಾಯಿಂದ ಹೊರಹೊಮ್ಮುತ್ತಿರುವ ಹಲ್ಲುಗಳ ನಿರ್ಮಲ ಕಾಂತಿ ೋ ಎಂಬಂತಿರುವ ಮಾತುಗಳಿಂದ ತಮ್ಮ ಶಿಷ್ಯನಿಗೆ ಈ ಮುಂದೆ ಹೇಳಿರುವಂತೆ ಿದರು.

ವೇದಷ್ಷಡಂಗಸಹಿತಃ ಕಿಲ ಧರ್ಮಮೂಲಂ
ಧರ್ಮೋ ಗುರೋರಧಿಗತಃ ಶ್ರುತಿಸಂಪ್ರಣೀತಃ ।
ಧರ್ಮಪ್ರಶಾಸನಕುಶಾಗ್ರಮತಿಃ ಪ್ರಶಾಂತೋ
ಆಚಾರ್ಯ ಏವ ಜಗತೀಂ ವಿನಯಂತುಮೀಷ್ಟೇ ॥ ೪೪

ವೇದವು ಸಂಹಿತಾ ಬ್ರಾಹ್ಮಣರೂಪವಾಗಿದೆ. ಋಕ್ ಯಜಸ್ಸು ಸಾಮ ಅಥರ್ವ ಎಂದು ನಾಲ್ಕು ಬಗೆಯಾದ ವೇದಕ್ಕೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಇವು ಆರು ಅಂಗಗಳು, ಧರ್ಮಾಚರಣೆಗೆ ಷಡಂಗವಾದ ವೇದವೇ ಮೂಲ. ಧರ್ಮವು ವೇದೋಕ್ತವೂ, ಅಪಿಗೀತ ಶಿಷ್ಟಾಚಾರ ವಿಷಯವೂ ಗುರೂಪದಿಷ್ಟವೂ ಆಗಿರಬೇಕು. ತಾನು ಶಾಸ್ತ್ರಜ್ಞನಾಗಿ, ಶಾಸ್ತ್ರದ ರಹಸ್ಯವನ್ನು ವಿವರಿಸಿ ತಾನೂ ಶಾಸ್ತ್ರಸಮ್ಮತವಾಗಿ ನಡೆದುಕೊಂಡು ಶಿಷ್ಯರಿಗೂ ಮಾರ್ಗದರ್ಶಿಯಾಗಿ ಇರುವವನು ಆಚಾರ್ಯನೆನಿಸಿಕೊಳ್ಳುವನು, ಜಿತೇಂದ್ರಿಯನೂ ಪ್ರಶಾಂತನೂ ಧರ್ಮದ ಆದೇಶದಲ್ಲಿ ಸೂಕ್ಷ್ಮಬುದ್ಧಿಯುಳ್ಳವನೂ ಆದ ಆಚಾರ್ಯನು, ಸ್ವೇಚ್ಛೆಯಿಂದ ಧರ್ಮವನ್ನು ಉಲ್ಲಂಘಿಸಿ ಅಧರ್ಮದಲ್ಲಿ ತೊಡಗಿರುವ ಲೋಕವನ್ನು ಹತೋಟಿಗೆ ತರಬಲ್ಲನು. ಅಂದರೆ ಜನತೆಯನ್ನು ಅಧರ್ಮದಿಂದ ಹಿಮ್ಮೆಟ್ಟಿಸಿ ಧರ್ಮದ ಹಾದಿಯಲ್ಲಿ ನಡೆಸಬಲ್ಲನು.

ತಸ್ಮಾನ್ಮಠೇ ನ ನಿವಸೇನ್ನಿಯತಂ ಪರಿವ್ರಾಟ್
ಧರ್ಮದ್ವಿಷಃ ಸದುಪದೇಶದಿಶಾ ವಿನೇಯಾನ್ ।
ಕೃತ್ವಾ ಸ್ವಧರ್ಮಚರಣೇಷು ಜನಾನ್ನಿಯುಂಜನ್
ದೇಶಾನಟನ್ ಸತತಮಾತ್ಮಹಿತೇ ಯತೇತ ॥ ೪೫

ಧರ್ಮಪ್ರಚಾರಕ್ಕಾಗಿ ಯತಿಯು ಯಾವಾಗಲೂ ಮಠದಲ್ಲಿ ಉಳಿಯದೇ ಸಂಚಾರಶೀಲನಾಗಬೇಕು. ಧರ್ಮವಿರೋಧಿಗಳಾದವರಿಗೆ ಸದುಪದೇಶ ಮಾಡಿ ಅವರ ಮನವೊಲಿಸಬೇಕು. ಮೆಲ್ಲಗೆ ಅವರನ್ನು ಧಾರ್ಮಿಕರನ್ನಾಗಿಸಬೇಕು. ಅಲ್ಲದೇ ಎಲ್ಲ ಶಿಷ್ಯರೂ ತಮ್ಮ ತಮ್ಮ ವರ್ಣಾಶ್ರಮೋಚಿತವಾದ ಧರ್ಮದಲ್ಲಿ ನಿರತರಾಗುವಂತೆ ನಿಯೋಜಿಸುತ್ತಾ ದೇಶಸಂಚಾರಿಯಾಗಬೇಕು. ಅಷ್ಟೇ ಅಲ್ಲ; ತನ್ನ ಆಧ್ಯಾತ್ಮ ಶ್ರೇಯಸ್ಸನ್ನು ಕಡೆಗಣಿಸಬಾರದು.

ತಸ್ಮಾದ್ಭವಾಂಸ್ತದನುರೂಪಗುಣೋ ಮುನೀಷೀ
ಚಾಸ್ಮನ್ಮನೋರಥಪರಿಪ್ಲವಪೂರಣಾರ್ಥಮ್ ।
ಪೀಠಂ ರಘೂತ್ತಮುಪಗಾಹ ಯಮತ್ರ ವಿದ್ಯಾ-
ನಂದಾಧಿತಿಷ್ಠ ಸುಚಿರಂ ನಿಗಮಂ ಪ್ರಶಾಧಿ ॥ ೪೬

ಆದುದರಿಂದ ಧೀಮಂತನಾದ ನೀನು ಆಚಾರ್ಯನಾಗಲು ತಕ್ಕವನಿರುವೆ. ಎಲೈ! ವಿದ್ಯಾನಂದಯತಿಯೇ! ಪ್ರವಾಹದಂತಿರುವ ನನ್ನ ಮನೋರಥದ ಸಿದ್ಧಿಗಾಗಿ ನೀನು ಈ ರಘೂತ್ತಮ ಪೀಠದ ಆಚಾರ್ಯನಾಗು, ಬಹುಕಾಲ ವೇದೋಕ್ತ ಧರ್ಮವನ್ನು ರಕ್ಷಿಸು.

**ಗೋಕರ್ಣಮಂಡಲಗತಾಖಿಲಹವ್ಯಕವ್ಯಾ-**
**ದ್ಯಾಚಾರದೇಶನವಿಧೌ ಭವ ದೇಶಿಕಸ್ತ್ವಮ್ ।**
**ರಾಜಾಧಿರಾಜ ಇವ ಸರ್ವಜನೈಕಮಾನ್ಯ-**
**ಸ್ತೋಯಸ್ಥಿತಾಂಬುಜಪಲಾಶಸಮಾನಶೀಲಃ ॥** ೪೭

ಗೋಕರ್ಣ ಮಂಡಲದಲ್ಲಿ ವಾಸವಾಗಿರುವ ಶಿಷ್ಯರೆಲ್ಲರಿಗೂ ನೀನು ಹವ್ಯಕವ್ಯ ಮುಂತಾದ ಧರ್ಮಾನುಷ್ಠಾನದ ಬಗ್ಗೆ ಉಪದೇಶಕನಾಗು. ರಾಜಾಧಿರಾಜನಂತೆ ಸರ್ವರಿಗೂ ಮಾನ್ಯನಾಗಿರು. ಆದರೆ ಲೌಕಿಕ ವ್ಯವಹಾರದಲ್ಲಿ ತಲ್ಲೀನನಾಗದೇ ನೀರಿನಲ್ಲಿರುವ ಕಮಲದ ಪತ್ರದಂತೆ ನಿರ್ಲಿಪ್ತನಾಗಿರು.

**ಲಿಂಗಂ ತ್ವಿದಂ ಭಗವತಶ್ಶಶಿಖಂಡಮೌಲೇ-**
**ರ್ಜ್ಯೋತಿರ್ಮಯಂ ಸಕಲಸಂಪದವಾಪ್ತಿಹೇತುಃ ।**
**ಶ್ರೀಪಾದುಕೇಯಮಿಹ ದರ್ಶನಮಾತ್ರತುಷ್ಟಾ**
**ಮಾತೇವ ಶುದ್ಧರಸ*ಭೋಜನಸೌಖ್ಯದಾತ್ರೀ ॥** ೪೮

ಇಗೋ! ಇದು ಜ್ಯೋತಿರ್ಮಯವಾದ ಚಂದ್ರಮೌಳೀಶ್ವರಲಿಂಗ. ಇದರ ಆರಾಧನೆ ಸರ್ವಸಂಪತ್ತಿಗೂ ಕಾರಣ. ಇದು ಶ್ರೀಪಾದುಕೆ. ಮೃಷ್ಟಾನ್ನ ಬಡಿಸುವ ತಾಯಿಯಂತೆ ಇದು ದರ್ಶನಮಾತ್ರತುಷ್ಟವೂ ಶುದ್ಧ ಸಚ್ಚಿದಾನಂದಾನುಭವದ ಸೌಖ್ಯವನ್ನು ಕೊಡಬಲ್ಲದೂ ಆಗಿದೆ.

**ಸೀತಾಪತೇರಿಯಮಶೇಷಗುಣಾಭಿರಾಮಾ**
**ಮೂರ್ತಿಃ ಸಲಕ್ಷ್ಮಣಸುಲಕ್ಷಣದಿವ್ಯಗಾತ್ರಾ ।**
**ಶಾಲೀನಶೀಲಮುಖಪಂಕಜಶೋಭಮಾನಾ**
**ಸೇಯಂ ಸತೀಪ್ರತಿನಿಧೀಕ್ಷ್ಯ ವಿದೇಹಪುತ್ರ್ಯಾಃ ॥** ೪೯

---

* ಶುದ್ಧರ ಭೋಜನಸೌಖ್ಯದಾತ್ರೀ = ಚೆನ್ನಾಗಿರುವ ಸಿಹಿಯೂಟದ ಸುಖವನ್ನು ಉಂಟು ಮಾಡುವವಳು, ಶುದ್ಧಸಚ್ಚಿದಾನಂದರೂಪವಾದ ಬ್ರಹ್ಮಾನುಭವದ ಸೌಖ್ಯವನ್ನು ಕೊಡುವವಳು. ಶ್ಲಿಷ್ಟಸಾಭಿಪ್ರಾಯ ವಿಶೇಷಣ.

ಕಲ್ಯಾಣಗುಣಾಭಿರಾಮನಾದ ಶ್ರೀರಾಮನ ಮೂರ್ತಿಯಿದು. ದಿವ್ಯ ಸುಂದರವಾದ ಇದು ಲಕ್ಷ್ಮಣಸಹಿತವಾಗಿದೆ. ನಾಚಿಕೆಯ ಭಾವವನ್ನು ಅಭಿವ್ಯಕ್ತಗೊಳಿಸುವ ಮೊಗದಾವರೆಯಿಂದ ಶೋಭಿಸುವ ಈ ಪ್ರತಿಮೆ ಪತಿವ್ರತೆಯರ ಪ್ರತಿನಿಧಿಯಾದ ಸೀತಾದೇವಿಯದು.

**ರಾಮಸ್ಯ ಮೂರ್ತಿಮನುಚಿಂತಯ ಚಾರುಕೀರ್ತಿಂ**
**ಸ್ವಾರಾಧಕಾರ್ತಿಹರಮಿಂದುಧರಂ ಸ್ತುವೀಹಿ ।**
**ಶ್ರೀಪಾದುಕಾಂ ವಿಧಿವದರ್ಚಯ ಭಾವಶುದ್ಧ್ಯಾ**
**ಸೋಽಹಂಧಿಯಾ ಪುನರಿಮಾಃ ಪ್ರತಿಮಾ ಉಪಾಸ್ವ ॥ ೫೦**

ಕೀರ್ತಿಶಾಲಿಯಾದ ಶ್ರೀರಾಮನ ಮೂರ್ತಿಯನ್ನು ಮನಸ್ಸಿನಲ್ಲಿ ಧ್ಯಾನಿಸು. ತನ್ನ ಭಜಕರ ಸಂಕಷ್ಟಗಳನ್ನು ಹೋಗಲಾಡಿಸುವ ಶ್ರೀಚಂದ್ರಮೌಳೀಶ್ವರನನ್ನು ಸ್ತುತಿಸು. ಭಾವ ಶುದ್ಧಿಯಿಂದ ಶ್ರೀಪಾದುಕೆಯನ್ನು ವಿಧಿವತ್ತಾಗಿ ಅರ್ಚಿಸು. ಈ ಎಲ್ಲಾ ಪ್ರತಿಮೆಗಳಲ್ಲಿ "ಸೋಽಹಂ" ಎಂಬ ಜೀವಬ್ರಹ್ಮಾಭೇದ ಭಾವದ ಅದ್ವೈತ ಬುದ್ಧಿಯನ್ನು ಹೊಂದಿ ಉಪಾಸನೆ ಮಾಡು.

**(ಮಂದಾಕ್ರಾಂತಾವೃತ್ತಮ್)**

**ಇತ್ಯಾದಿಶ್ಯ ಪ್ರಕೃತಿಮಧುರಂ ವಾರ್ತಿಕಾಚಾರ್ಯಶಿಷ್ಯಂ**
**ಸ್ವಸ್ಮಾತ್ಪಾದಗ್ರಹಣವಿಧಿನಾಽಧೀತವೇದಾಂತಭಾಷ್ಯಮ್ ।**
**ಸೋಽಹಂಭಾವಪ್ರವಣರಸಿಕಂ ಶಂಕರಾಚಾರ್ಯವರ್ಯೋ**
**ವಿದ್ಯಾನಂದಂ ರಘುಪತಿಮಠಾಧ್ಯಕ್ಷಪೀಠೇಽಭ್ಯಷಿಂಚತ್ ॥ ೫೧**

ಹೀಗೆ ಆದೇಶಮಾಡಿ ಶ್ರೀಶಂಕರಭಗವತ್ಪಾದರು ಸಹಜ ಪ್ರಶಾಂತನೂ ಸುರೇಶ್ವರಾಚಾರ್ಯರಿಂದ ಸಂನ್ಯಾಸ ದೀಕ್ಷೆಯನ್ನು ಹೊಂದಿದವನೂ ತಮ್ಮಿಂದ ವೇದಾಂತ ಭಾಷ್ಯಗಳನ್ನು ಸಾಂಪ್ರದಾಯಿಕವಾಗಿ ಅಧ್ಯಯನ ಮಾಡಿದವನೂ "ತತ್ತ್ವಮಸಿ" ಮುಂತಾದ ಮಹಾವಾಕ್ಯಗಳ ಅದ್ವೈತಾನುಭವಿಯೂ ಆಗಿರುವ ವಿದ್ಯಾನಂದಯತಿಯನ್ನು ಗೋಕರ್ಣದ ರಘೂತ್ತಮ ಮಠದ ಆಚಾರ್ಯ ಪೀಠದಲ್ಲಿ ಅಭಿಷೇಕ ಮಾಡಿದರು.

**ವಿದ್ಯಾನಂದಂ ತಮಥ ಭಗವಾನ್ ಸ್ಥಾಪಯಿತ್ವಾತ್ರ ಪೀಠೇ**
**ಜಿತ್ವಾ ಶೈವಂ ಕುಮತಿಮಹಿತಂ ನೀಲಕಂಠಾಭಿಧಾನಮ್ ।**
**ಬ್ರಹ್ಮಾದ್ವೈತಂ ಶ್ರುತಿಪಥಹಿತಂ ಸ್ಥಾಪಯಿಷ್ಯನ್ ಯತೀಂದ್ರಃ**
**ಸ್ಥಾನಾದಸ್ಮಾತ್ಸದನಮಥ ಮೂಕಾಂಬಿಕಾಯಾಃ ಪ್ರತಸ್ಥೇ ॥ ೫೨**

ಪೂಜ್ಯರಾದ ಶ್ರೀಶಂಕರಾಚಾರ್ಯರು ರಘೂತ್ತಮ ಪೀಠದಲ್ಲಿ ವಿದ್ಯಾನಂದಾಚಾರ್ಯರನ್ನು ಆಚಾರ್ಯ ಸ್ಥಾನದಲ್ಲಿ ನೇಮಿಸಿದ ಬಳಿಕ ಕುಮತಿಯಾದ ನೀಲಕಂಠನೆಂಬ ಪಾಶುಪತಶೈವನನ್ನು ಗೆದ್ದು ಭರತಖಂಡದಲ್ಲಿ ಶ್ರುತಿಸಂಮತವಾದ ಬ್ರಹ್ಮಾದ್ವೈತವನ್ನು ಪ್ರಚಾರಮಾಡುವವರಾಗಿ ಗೋಕರ್ಣದಿಂದ ಮೂಕಾಂಬಿಕಾ ಕ್ಷೇತ್ರವಾದ ಕೊಲ್ಲೂರಿಗೆ ಹೋದರು.

(ಶಾರ್ದೂಲವಿಕ್ರೀಡಿತವೃತ್ತಮ್)

**ಪ್ರತ್ಯಗ್‌ಬ್ರಹ್ಮಭಿದಾಪಹೈಃ ಶ್ರುತಿಗಿರಾಮದ್ವೈತತಾತ್ಪರ್ಯಕೈ-**
**ರ್ವ್ಯಾಖ್ಯಾನೈರ್ನಿಜಬೋಧಸೌಖ್ಯಲಹರೀಂ**
**ನಿಶ್ಶಂಕಮುದ್ವೇಲಯನ್ ।**
**ಶಂಕಾಪಂಕಿಲಚೇತಸಾಂ ಸುಮನಸಾಂ ಚಿತ್ತಂ ಸದಾ ಶೋಧಯನ್**
**ಪ್ರಾಚಾರ್ಯಃ ಪರಮಾರ್ಥವಿದ್ವಿಜಯತೇ**
**ಕ್ಷೇಮಂಕರಃ ಶಂಕರಃ ॥ ೫೩**

'ಜೀವ ಬೇರೆ ಬ್ರಹ್ಮ ಬೇರೆ' ಎನ್ನುವ ದ್ವೈತವಾದವನ್ನು ನಿರ್ಭಯವಾಗಿ ತಿರಸ್ಕರಿಸುವ, ಉಪನಿಷದ್ವಾಕ್ಯಗಳಿಗೆ ಅದ್ವೈತದಲ್ಲಿಯೇ ತಾತ್ಪರ್ಯವಿದೆಯೆಂದು ಬೋಧಿಸುವ, ವ್ಯಾಖ್ಯಾನಗಳಿಂದ ಸ್ವಸ್ವರೂಪಾನಂದಾನುಭವದ ಹೆದ್ದೆರೆಯನ್ನು ಉಕ್ಕಿಸುತ್ತಾ, ಸಂಶಯದ ಕೆಸರಿನಿಂದ ಬಗ್ಗಡವಾದ ಬಲ್ಲಿದರ ಮನಸ್ಸನ್ನು ತಿಳಿಯಾಗಿಸುತ್ತಾ, ಪರಮಾರ್ಥ ಜ್ಞಾನಿಗಳೂ ಲೋಕಕ್ಕೆ ಕ್ಷೇಮವನ್ನುಂಟು ಮಾಡುವವರೂ ಆದ ಶ್ರೀ ಶಂಕರಾಚಾರ್ಯರು ಸರ್ವೋತ್ಕರ್ಷದಿಂದ ಶೋಭಿಸುತ್ತಿದ್ದಾರೆ.

**ನಿಷ್ಣಾತಾ ನಿಗಮೇಷು ಯಸ್ಯ ಕೃಪಯಾ ನಿಷ್ಕಲ್ಮಷಾ ನಿಸ್ಪೃಹಾಃ**
**ಲೋಕಕ್ಷೇಮವಿಧಾಯಿನಃ ಕೃತಧಿಯಃ ಶಿಷ್ಯಾಃ ಸದೈಕಾಂತಿನಃ ।**
**ಕಿಂ ಬ್ರೂಮೋ ವಯಮಾದ್ಯಶಂಕರಗುರೋ-**
**ರ್ಮಾಹಾತ್ಮ್ಯಮನ್ಯಾದೃಶಂ**
**ಶೋಕಂ ಶ್ಲೋಕಮುದಾರಧೀಃ ಸ ಗುರುರಾಟ್**
**ಮುಷ್ಣಾತು ಪುಷ್ಣಾತು ನಃ ॥ ೫೪**

ಯಾವ ಮಹಾತ್ಮರ ಕೃಪೆಯಿಂದ ಶಿಷ್ಯರೆಲ್ಲರೂ ವೇದ ಶಾಸ್ತ್ರ ನಿಪುಣರೂ ನಿರ್ಮಲರೂ ನಿಸ್ಪೃಹರೂ ಲೋಕಕಲ್ಯಾಣಕಾರಿಗಳೂ ಏಕಾಂತಪ್ರಿಯರೂ ಬ್ರಹ್ಮನಿಷ್ಠರೂ ಆಗಿರುತ್ತಾರೆಯೋ ಆ ಆದಿಶಂಕರಭಗವತ್ಪಾದಾಚಾರ್ಯರ ಅಸಾಮಾನ್ಯವಾದ ಮಹಿಮೆಯನ್ನು ಕುರಿತು ಏನು ಹೇಳೋಣ ! ಅವರ ಮಹಿಮೆ ನಮ್ಮ ಮಾತಿಗೆ ನಿಲುಕದು. ಉದಾರಿಯಾದ ಆ ಗುರುಸಾರ್ವಭೌಮರು ನಮ್ಮ

ದುಃಖಗಳನ್ನು ಹೋಗಲಾಡಿಸಲಿ. ಹಾಗೂ ಕೀರ್ತಿಯನ್ನು ಲೋಕದಲ್ಲಿ ತುಂಬಲಿ. (ಶೋಕ= ದುಃಖ, ಶ್ಲೋಕ= ಕೀರ್ತಿ, ಪದ್ಯ= ಕವಿತೆ) ಕವಿಯು ಕೊರತೆಯನ್ನು ನೀಗಲಿ. ಕವಿತೆಯನ್ನು ಪುಷ್ಟೀಕರಿಸಲಿ ಎಂದೂ ಅಭಿಪ್ರಾಯ.

**ಇತಿ ಭೀಮನಕೋಣಾಭಿಜನೇನ ಕಲ್ಲುಮನೆಸುಬ್ಬಾಭಟ್ಟತನುಜನುಷಾ<br>ಭಾಸ್ಕರಭಟ್ಟೇನ ಕವಿನಾ ವಿರಚಿತಾಯಾಂ<br>ಗುರುಕೃಪಾತರಂಗಿಣ್ಯಾಂ<br>ಆಚಾರ್ಯಾನುಗ್ರಹೋ<br>ನಾಮ**

## ಪ್ರಥಮಸ್ತರಂಗಃ

ಇಂತು, ಭೀಮನ ಕೋಣೆ ವಾಸಿ ಕಲ್ಲುಮನೆ ಸುಬ್ಬಾಭಟ್ಟರ ಮಗ ಭಾಸ್ಕರ ಭಟ್ಟನೆಂಬ ಕವಿಯಿಂದ ರಚಿತವಾದ ಗುರುಕೃಪಾತರಂಗಿಣಿಯಲ್ಲಿ ಶಂಕರಾಚಾರ್ಯರ ಅನುಗ್ರಹವೆಂಬ ಮೊದಲನೆಯ ತರಂಗವು ಮುಗಿಯಿತು.

## ಅಥ ದ್ವಿತೀಯಸ್ತರಂಗಃ

### (ಮಂದಾಕ್ರಾಂತಾವೃತ್ತಮ್)

ಆದಿಶ್ಯೈವಂ ಪ್ರಕೃತಿಮಧುರೇ ಪ್ರಸ್ಥಿತೇ ಶಂಕರಾರ್ಯೇ
ವಿದ್ಯಾನಂದಸ್ತದನುವಿನಯೀ* ಸ್ವಾಧಿಕಾರಂ ಪ್ರಪೇದೇ ।
ಲೋಕಾಲೋಕಂ ಗತವತಿ ವಿಭೌ ಭಾಸ್ಕರೇ ಲೋಕನೇತ್ರೇ
ಧತ್ತೇ ಚಂದ್ರೋ ನೃಪ ಇವ ನಭೋಮಧ್ಯ ಆಸ್ಥಾನಕೃತ್ಯಮ್॥೧

ಪ್ರಸನ್ನ ಪ್ರಕೃತಿಯ ಶ್ರೀ ಶಂಕರಭಗವತ್ಪಾದರು ವಿದ್ಯಾನಂದಯತಿಗಳಿಗೆ ಹೀಗೆ ಆಜ್ಞಾಪಿಸಿ ತೆರಳಿದ ಬಳಿಕ ಜಿತೇಂದ್ರಿಯರಾದ ವಿದ್ಯಾನಂದರು ಗೋಕರ್ಣದಲ್ಲಿ ರಘೂತ್ತಮ ಮಠದ ಅಧಿಕಾರವನ್ನು ಪಡೆದರು. ಇದು ಸರಿ. ಹಗಲಿನ ಒಡೆಯನೂ, ಲೋಕದ ಕಣ್ಣೂ ಆದ ಸೂರ್ಯನು ಮರೆಯಾದ ಬಳಿಕ ಬಾಂದಳದಲ್ಲಿ ಮೆರೆಯುತ್ತಿರುವ ನಿಶಾನಾಥನಾದ ಚಂದ್ರನು ಅರಸನಂತೆ ಪ್ರಭುತ್ವವನ್ನು ಹೊಂದುತ್ತಾನೆಯಲ್ಲವೇ !

ವಿದ್ಯಾನಂದಸ್ಸ್ಥಿತಮತಿರಸೌ ಭೋಗವಾಲಾನುಸಾರಂ
ಯತ್ಯಾಚಾರಂ ನಿಯತಸಮಯೇ ಹ್ಯನ್ವತಿಷ್ಠದ್ಯತೀಂದ್ರಃ ।
ಧ್ಯಾಯನ್ ಬ್ರಹ್ಮ ತ್ವವಹಿತಮನಾ ಸ್ವಾನುಭೂತ್ಯೈಕಮಾನಂ
ಗೋಕರ್ಣಸ್ಥೇ ರಘುಪತಿಮಠೇ ದೇಶಿಕಶ್ಚಾದಿಮೋಽಭೂತ್॥ ೨

ಸ್ಥಿತಪ್ರಜ್ಞರಾದ ವಿದ್ಯಾನಂದರು ಭೋಗವಾಲವೆಂದು ಪ್ರಸಿದ್ಧವಾದ ಮಠೀಯ ಸಂಪ್ರದಾಯದ ಅನುಸರಣೆಯುಳ್ಳ ಸಂನ್ಯಾಸ ಧರ್ಮದ ಆಚಾರವನ್ನು ಕಾಲಕಾಲಕ್ಕೆ ಸರಿಯಾಗಿ ಆಚರಿಸುತ್ತಾ ಬಂದರು. ಪ್ರಮಾದಕ್ಕೆ ಎಡೆಗೊಡದ ಮನೋವೃತ್ತಿಯುಳ್ಳ ಅವರು ಸ್ವಾನುಭವ ಪ್ರಮಾಣವಾದ ಪರಬ್ರಹ್ಮವನ್ನು ಚಿಂತಿಸುತ್ತಾ ಗೋಕರ್ಣದಲ್ಲಿರುವ ರಘೂತ್ತಮ ಪೀಠದ ಮೊದಲನೆಯ ಆಚಾರ್ಯರಾಗಿದ್ದರು.

---

* ವಿನಯಃ ಇಂದ್ರಿಯ ಜಯಃ, ವಿನಯಃ ಅಸ್ಯ ಅಸ್ತೀತಿ ವಿನಯೀ, ಇಂದ್ರಿಯ ಜಯ ವ್ರಶ್ಯವನು. ಸಮ್ಯಗಾರಾಧಿತಾ ವಿದ್ಯಾ ಪ್ರಬೋಧವಿನಯಾವಿವ (ರಘುವಂಶ ೧೦-೭೧) ಅನುಯಾಸ್ಯನ್ ಮುನಿತನಯಾಂ ಸಹಸಾ ವಿನಯೇನವಾರಿತಪ್ರಸರಃ (ಶಾಕುಂತಲ ೧-೨೮)

ವಿದ್ಯಾನಂದಾದಧಿಗತತುರೀಯಾಶ್ರಮೋ ಬ್ರಹ್ಮವೇದೀ
ಚಿದ್ಬೋಧಾಖ್ಯಸ್ತದನುಗುರುರಾಡ್ ಭಾರತೀತಿ ದ್ವಿತೀಯಃ ।
ಆಸೀತ್ತಚ್ಛಿಷ್ಯಃ ಶಮದಮನಿಧಿಸ್ತಸ್ಯ ಶಿಷ್ಯೋ ಯತೀಂದು-
ರ್ನಿತ್ಯಾನಂದೋ ಮಠಪದಮಗಾದೇಕಧಾರಾಕ್ರಮೇಣ ॥ ೩

ವಿದ್ಯಾನಂದರ ತರುವಾಯ ವಿದ್ಯಾನಂದಾಚಾರ್ಯರಿಂದ ಸಂನ್ಯಾಸಾಶ್ರಮದ ದೀಕ್ಷೆ ಪಡೆದ ಬ್ರಹ್ಮಜ್ಞಾನಿಗಳಾದ ಚಿದ್ಬೋಧಭಾರತೀಸ್ವಾಮಿಗಳು ಗದ್ದುಗೆಗೆ ಬಂದರು. ಇವರು ಎರಡನೆಯ ಆಚಾರ್ಯರಾಗಿದ್ದರು. ಬಳಿಕ ಚಿದ್ಬೋಧಭಾರತೀಗಳ ಶಿಷ್ಯರಾದ ನಿತ್ಯಾನಂದರು ಪೀಠಕ್ಕೆ ಬಂದರು. ಇವರು ಶಮದಮಾದಿ ಸದ್ಗುಣಗಳ ನಿಧಿಯಾಗಿದ್ದರು. ಹೀಗೆ ಒಬ್ಬರಾದ ಮೇಲೆ ಒಬ್ಬರಂತೆ ಅವಿಚ್ಛಿನ್ನ ಶಿಷ್ಯಪರಂಪರೆ ಈ ಮಠದಲ್ಲಿ ಧಾರಾಕಾರವಾಗಿ ಹರಿಯುತ್ತಾ ಬಂದಿತು.

ಪ್ರಾಯಃ ಸರ್ವೇ ಯತಿಪರಿವೃಢಾ ಭೋಗವಾಲಾನುಸಾರಂ
ಹ್ಯೇತತ್ಪೀಠಾಧಿಪಕೃತಿಪದೇ ಭಾರತೀನಾಮಧೇಯಮ್ ।
ಲಬ್ಧ್ವಾಽದ್ವೈತಾಮೃತಜಲನಿಧೇಸ್ಸೇತವೋ ದೇಶಿಕೇಂದ್ರಾಃ
ಆಚಾರ್ಯಶ್ರೀಕ್ರಮಿಕಸರಣಿಂ ಪ್ರಾಪುರಚ್ಛಿನ್ನಧಾರಾಮ್ ॥ ೪

ಪ್ರಾಯಶಃ ಈ ಪೀಠದ ಅಧಿಪತಿಸ್ಥಾನದಲ್ಲಿ ಇದ್ದ ಎಲ್ಲ ಯತಿವರ್ಯರೂ ಭೋಗವಾಲ ಸಂಪ್ರದಾಯದಂತೆ ತಮ್ಮ ಹೆಸರಿನ ತುದಿಗೆ ಭಾರತೀ ಎಂಬ ಪದವನ್ನು ಹೆಸರಿಸಿ ವ್ಯವಹರಿಸಿದವರಾಗಿದ್ದಾರೆ ಇವರು ಬ್ರಹ್ಮಾದ್ವೈತದ ಅಕ್ಷಯಾನಂದ ಸಮುದ್ರಕ್ಕೆ ಅಣೆಕಟ್ಟಿನಂತೆ ರಕ್ಷಕರಾಗಿದ್ದರು. ಈ ಪೀಠದಲ್ಲಿ ಮುಂದೆ ಮುಂದೆ ಬಂದ ಶಿಷ್ಯರು ತಮ್ಮ ತಮ್ಮ ಗುರುಗಳ ತೇಜಸ್ಸಿನ ಅನುಕ್ರಮವನ್ನು ಇಂದಿನವರೆಗೂ ಅವಿಚ್ಛಿನ್ನವಾಗಿ ಪಾಲಿಸಿಕೊಂಡು ಬಂದಿರುವುದು ಇಲ್ಲಿಯ ವೈಶಿಷ್ಟ್ಯ.

ನಿತ್ಯಾನಂದಾದಥಯತಿಪತಿರ್ನಿತ್ಯಬೋಧೋಘನೇಂದ್ರ-
ಶ್ಚಾಸೀದ್ಭಾರತ್ಯುಪಪದಯುತೋ ಬ್ರಹವಿತ್ಸಂಪ್ರದಾಯಃ ।
ತಸ್ಮಾಚ್ಛಿಷ್ಯಪ್ರಣಯಮಧುರಾಲ್ಲಬ್ಧಸಂನ್ಯಾಸದೀಕ್ಷ-
ಸ್ಸಚ್ಚಿತ್ ಪೂರ್ವೋ ಗುರುರಭವದಾನಂದಭಾರತ್ಯುಪಾಹ್ವಃ ॥ ೫

ನಿತ್ಯಾನಂದರ ಅನಂತರ ಬ್ರಹ್ಮಜ್ಞಾನಿಗಳ ಪರಂಪರಾಗತವಾದ ಉಪದೇಶವನ್ನು ಹೊಂದಿರುವ ನಿತ್ಯಬೋಧಘನೇಂದ್ರಭಾರತೀಗಳು ಸ್ವಾಮಿಗಳಾದರು. ಬಳಿಕ ಸಚ್ಚಿದಾನಂದಭಾರತೀ ಎಂಬುವವರು ಶಿಷ್ಯವಾತ್ಸಲ್ಯವುಳ್ಳ ನಿತ್ಯಾನಂದ ಗುರುಗಳಿಂದ ಸಂನ್ಯಾಸದೀಕ್ಷೆ ಪಡೆದು ಮಠದ ಅಧಿಪತಿಗಳಾದರು.

ತಸ್ಮಾದ್ದೀಕ್ಷಾಗ್ರಹಣಮಕರೋಚ್ಚಿದ್ಘನೇಂದ್ರಃ ಪರಿವ್ರಾಟ್
ಭಾರತ್ಯಾಖ್ಯೋ ವ್ಯಲಭತ ಚ ಗೋಕರ್ಣಪೀಠಾಧಿಪತ್ಯಮ್ ।
ಸೀತಾರಾಮೋಽಸ್ಯಾಪದಮಮುಚಾ ಚಂದ್ರನಾಮ್ನಾ ಪ್ರತೀತಃ
ಪ್ರಾಚಾರ್ಯೋಽಭೂನ್ನಿಜಗುರುಕುಲಪ್ರಾಪ್ತಧರ್ಮಾಧಿಕಾರಃ ॥

ಸಚ್ಚಿದಾನಂದಭಾರತೀಗಳ ತರುವಾಯ ಅವರಿಂದ ಸಂನ್ಯಾಸ ಪಡೆದ ಚಿದ್ಘನೇಂದ್ರ ಭಾರತೀಯೆಂದು ಪ್ರಸಿದ್ಧರಾದ ಯತಿಗಳು ಗೋಕರ್ಣಪೀಠದ ಒಡೆಯರಾದರು. ಇವರ ಬಳಿಕ ಸೀತಾರಾಮಚಂದ್ರಭಾರತೀ ಎಂಬುವವರು ಗುರುಕುಲ ಪ್ರಾಪ್ತವಾದ ಧರ್ಮಾಧಿಕಾರವನ್ನು ಪಡೆದರು.

ಲಬ್ಧ್ವಾ ಸೀತಾರಮಣಗುರುಣಾ ತೇನ ಸಂನ್ಯಾಸದೀಕ್ಷಾ-
ಮಾಚಾರ್ಯೋಽಭೂತ್ತದನುಸುಯಶಾ ಸ್ತತ್ರಚಿದ್ಬೋಧನಾಮಾ।
ಪ್ರಾಜ್ಞಃ ಸೋಽಯಂ ವಿಷಯವಿಮತಿರ್ಧ್ಯಾನಯೋಗಾಧಿರೂಢಃ
ಪೂರ್ವಾಚಾರ್ಯಾನ್ನಿಯತಕೃತಿಮಾನ್ಗೌರವೇಣಾತ್ಯಶೇತ ॥ ೭

ಸೀತಾರಾಮಚಂದ್ರಭಾರತೀಗಳಾದ ಮೇಲೆ ಅವರ ಶಿಷ್ಯರಾದ ಚಿದ್ಬೋಧ ಭಾರತೀಗಳೆಂಬುವವರು ಪೀಠದ ಕುಲಪತಿಗಳಾದರು ಇವರು ಮಹಾ ಕೀರ್ತಿ ಸಂಪನ್ನರು. ಬ್ರಹ್ಮವಿದ್ಯಾಪ್ರಾಜ್ಞರಾದ ಚಿದ್ಬೋಧಭಾರತೀಗಳು ವಿರಕ್ತರು. ಇವರು ಧ್ಯಾನಯೋಗದಲ್ಲಿ ಇರುತ್ತಾ ಸಂನ್ಯಾಸ ಧರ್ಮದ ತಮ್ಮ ನಿಷ್ಠೆಯಿಂದ ಮತ್ತು ಗೌರವದಿಂದ ಈ ಪೀಠದ ಹಿಂದಿನ ಆಚಾರ್ಯರಿಗೂ ಮಿಗಿಲಾಗಿದ್ದರು.

ವಿದ್ಯಾರಣ್ಯಾತ್ಪ್ರಥಿತಯಶಸಃ ಶೃಂಗಗಿರ್ಯಾಶ್ರಮೇಶಾತ್
ಧರ್ಮಾಚಾರೇಷ್ವಭಯಮತಯೋರಂತರಾ ತಾರತಮ್ಯಮ್ ।
ಲಬ್ಧ್ವಾ ಸಿಂಹಾಸನಮಧಕಿರೀಟಾದಿಸಂಮಾನಪೂರ್ವಂ
ಗೋಕರ್ಣೇಯೋ ಜಯತಿ ಹಿ ಪುರಾಽಽಚಾರ್ಯ
ಚಿದ್ಬೋಧಯೋಗೀ ॥ ೮

ಈ ಚಿದ್ಬೋಧಭಾರತೀಸ್ವಾಮಿಗಳು ಹಿಂದೆ ಶೃಂಗೇರಿಯ ಶಾರದಾಪೀಠಾಧಿಪತಿಗಳಾಗಿದ್ದ ವಿದ್ಯಾರಣ್ಯ ಯತಿಗಳ ಸಮಕಾಲದವರು. ಇವರು ಕರ್ಣಾಟಕ ಸಾಮ್ರಾಜ್ಯದ ಸ್ಥಾಪನೆಗೆ ಕಾರಣರಾದ ಕರ್ಣಾಟ ರಾಜ್ಯದ (ವಿಜಯನಗರ ಸಾಮ್ರಾಜ್ಯ) ಸಚಿವರೆಂದು ಪ್ರಸಿದ್ಧಿ ಪಡೆದ ವಿದ್ಯಾರಣ್ಯ ಯತೀಶ್ವರರ ಹತ್ತಿರ ವಿಚಾರವಿನಿಮಯ ಮಾಡಿ, ಶೃಂಗೇರಿಯ ನಿತ್ಯ ಬೋಧಘನಾಚಾರ್ಯರ ಪರಂಪರೆಯ

ಸಂಪ್ರದಾಯಕ್ಕೂ ಸುರೇಶ್ವರಾಚಾರ್ಯರ ಜ್ಯೇಷ್ಠ ಶಿಷ್ಯರಾದ ವಿದ್ಯಾನಂದಾಚಾರ್ಯರ ಪರಂಪರೆಯು ರಘೂತ್ತಮ ಮಠದ ಸಂಪ್ರದಾಯಕ್ಕೂ ಯಾವ ವಿಧವಾದ ತಾರತಮ್ಯವೂ ಇಲ್ಲವೆಂದೂ ಉಭಯ ಮಠಗಳ ಸ್ಥಾನ ಮರ್ಯಾದೆಗಳಲ್ಲಿ ಸಮಾನ-ಗೌರವವಿರತಕ್ಕದೆಂಬ ಅರ್ಥವಿರುವ ಒಕ್ಕಣೆಯ ನಿರ್ಣಯದ ತಾಮ್ರಶಾಸನದ ಪತ್ರವನ್ನು ಪಡೆದರು. ಮತ್ತು ಈ ಮಠದ ಪೀಠಾಧಿಪತಿಗಳನ್ನು ಗೋಕರ್ಣ ಮಂಡಲಾಚಾರ್ಯರೆಂದು ಹೊಗಳಿ, ಗೋಕರ್ಣದ ಮಹಾಬಲೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಸಿಂಹಾಸನ, ಕಿರೀಟ, ಆಂದೋಲಿಕಾ, ಛತ್ರ ಚಾಮರ ಮುಂತಾದ ಸಕಲ ಮರ್ಯಾದೆಗಳೂ ಕೊಡಲ್ಪಟ್ಟು, ವಿದ್ಯಾರಣ್ಯ ಯತೀಶ್ವರರಿಂದ ಸಂಮಾನಿತರಾದ ಶ್ರೀ ಚಿದ್ಬೋಧಭಾರತೀಸ್ವಾಮಿಗಳು ಗೋಕರ್ಣ ಮಠದಲ್ಲಿ ಸರ್ವೋತ್ಕರ್ಷದಿಂದ ಶೋಭಿಸಿದ್ದರು.

**ಚಿದ್ಬೋಧಾಖ್ಯಾನ್ನಿಜಕುಲಗುರೋಃ ಪ್ರಾಪ್ತತುರ್ಯಾಶ್ರಮಶ್ರೀಃ**
**ಗೋಕರ್ಣೇಽಸ್ಮಿನ್ಮಠಪತಿರಭೂದ್ರಾಘವೇಶಾಭಿಧಾನಃ ।**
**ತೇನೋನ್ನೀತಃ ಕಿಲ ಸುಮನಸಾಽದ್ವೈತಸಿದ್ಧಾಂತಸಾರಃ**
**ಸ್ತಂಭೀಭೂತೋ ಯದಿಹ ಮುಖರಃ ಶೂನ್ಯವಾದಿಪ್ರವಾದಃ ॥** ೯

ಇವರ ಅನಂತರ ರಾಘವೇಶ್ವರಭಾರತೀ ಎಂದು ಹೆಸರಿರುವ ಯತೀಶ್ವರರು ಗೋಕರ್ಣದಲ್ಲಿ ಮಠಾಧೀಶರಾದರು ಈ ರಾಘವೇಶ್ವರಭಾರತೀಗಳಿಗೆ ತಮ್ಮ ಗುರುಗಳಿಂದಲೇ ಸಂನ್ಯಾಸ ದೀಕ್ಷೆಯಾಗಿತ್ತು. ಇವರು ಮಹಾವಿದ್ವಾಂಸರು. ಇವರಿಂದ ಅದ್ವೈತವೇದಾಂತದ ಸಾರವು ಎಲ್ಲ ಕಡೆಯಲ್ಲಿಯೂ ಪ್ರಚುರ ಪ್ರಚಾರ ಹೊಂದಿತು. ಇದರಿಂದ ಆದುವರೆಗೆ ಎಲ್ಲೆಲ್ಲಿಯೂ ಶೂನ್ಯವಾದದ ಕೋಲಾಹಲವನ್ನು ಎಬ್ಬಿಸಿದ್ದ ನಾಸ್ತಿಕರ ತಂಡಕ್ಕೆ ಬಾಯಿಕಟ್ಟಿ ಮೂಕುಹಿಡಿಯಿತು.

**ಬಾಲ್ಯೇ ಯೋಽಸಾವಲಭತ ಗುರೋಃ ಪಾಣಿನೀಯೇ ಕಣಾದೇ**
**ವೈಯಾಸಿಕ್ಯಾಮಥ ನಿಪುಣತಾಂ ಜೈಮಿನೀಯೇ ಚ ಕಾಶ್ಯಾಮ್ ।**
**ವಿಷ್ಣೋರಕ್ಷ್ಣಾಮಿವ ಸ ಜಗತೀಂ ದರ್ಶಯಿಷ್ಯನ್ ಸಹಸ್ರಂ**
**ಶಾಲಗ್ರಾಮ್ಣಾಂ ದಶಶತಮಸಾವಾನಯದ್ವಾರಣಾಸ್ಯಾಃ ॥** ೧೦

ರಾಘವೇಶ್ವರಭಾರತೀಗಳ ವಿದ್ಯಾಭ್ಯಾಸ ಕಾಶಿಯಲ್ಲಿ ಆಯಿತು. ಇವರು ಗುರುಗಳಿಂದ ವ್ಯಾಕರಣ, ವೇದಾಂತ, ಮೀಮಾಂಸಾ ಶಾಸ್ತ್ರಗಳನ್ನು ಕಲಿತರು, ಶಾಸ್ತ್ರಾರ್ಥದಲ್ಲಿ ಇವರ ಬುದ್ಧಿ ಅತ್ಯಂತ ಚುರುಕು. ಇವರು ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಮಠಕ್ಕೆ ಹಿಂದಿರುಗಿದರು. ಆಗ ಶ್ರೀ ರಾಘವೇಶ್ವರಭಾರತೀಸ್ವಾಮಿ

ಗಳು ಕಾಶಿಯಿಂದ ಸಾವಿರ ಸಾಲಿಗ್ರಾಮಗಳನ್ನು ಸಾವಿರಗಣ್ಣಿನವನೂ ಎಲ್ಲೆಲ್ಲೂ ತುಂಬಿರುವವನೂ ಆದ ಆ ವಿರಾಟ್ ಪುರುಷನಾದ ವಿಷ್ಣುವಿನ ಸಾವಿರಗಣ್ಣುಗಳನ್ನು ಲೋಕದ ಜನರಿಗೆ ತೋರಿಸಬೇಕೆಂದು ತಂದಿರಬಹುದೋ ಎಂಬಂತೆ ತೆಗೆದುಕೊಂಡು ಬಂದರು.

**ಭಕ್ತಾಃ ಕೇಚಿಚ್ಚರಣರಜಸಾ ಯಸ್ಯ ವೈರಾಗ್ಯಭಾಜಃ**
**ಕೇಚಿತ್ಸಾಂತ್ವಪ್ರಣಯವಚಸಾ ಯಸ್ಯ ಕಾರುಣ್ಯಸಿಂಧೋಃ ।**
**ಯಸ್ಮಾತ್ತತ್ತ್ವಶ್ರವಣವಿಧಿನಾ ಕೇಚಿದಾನಂದಭೂಮ್ನಃ**
**ಕೇಚಿದ್ದೃಷ್ಟ್ಯಾ ಬಹುಲಕೃಪಯಾ ಲೇಭಿರೇ ವಾಂಛಿತಾರ್ಥಮ್ ॥**

ವೈರಾಗ್ಯಶಾಲಿಗಳಾದ ಯಾವ ಮಹಾಪುರುಷರ ಪಾದಧೂಳಿಯಿಂದ ಭಕ್ತರಾದ ಕೆಲವರೂ ಕರುಣೆಯ ಕಡಲಾದ ಯಾವ ಮಹಾಶಯರ ಹಿತವಾದ ಮತ್ತು ಪ್ರಿಯವಾದ ಮಾತಿನಿಂದ ಆರ್ತರಾದ ಕೆಲವರೂ ಆನಂದಮಯವಾದ ಬ್ರಹ್ಮವನ್ನು ತಿಳಿದು ಬ್ರಹ್ಮಸ್ವರೂಪವೇ ಆಗಿರುವ ಯಾವ ಬ್ರಹ್ಮಜ್ಞಾನಿಗಳ ಕಡೆಯಿಂದ ಬ್ರಹ್ಮತತ್ತ್ವದ ಶ್ರವಣ, ಮನನ, ನಿದಿಧ್ಯಾಸನ ಮುಂತಾದ ವಿಧಿಯಿಂದ ಮುಮುಕ್ಷುಗಳೂ ಬ್ರಹ್ಮಜಿಜ್ಞಾಸುಗಳೂ ಆದ ಕೆಲವರೂ ಪರರ ದುಃಖವನ್ನು ಹೋಗಲಾಡಿಸುವ ಇಚ್ಛೆಯಿರುವ ಯಾರ ಕರುಣಾಮಯವಾದ ಪ್ರಸನ್ನ ದೃಷ್ಟಿಯಿಂದ ಜನಸಾಮಾನ್ಯರೂ ಕೂಡ ತಮ್ಮ ತಮ್ಮ ಇಷ್ಟಸಿದ್ಧಿಯನ್ನು ಪಡೆದರೋ,

**ದೃಷ್ಟ್ವಾ ರಾಜಾ ವಿಪದಭಿಹತೋ ರಾಘವೇಶಂ ಯತಿಂ ತಂ**
**ಗೋಕರ್ಣಸ್ಥಂ ವಿಜಯನಗರಾಧೀಶ್ವರೋ ದೇವರಾಜಃ ।**
**ವಂದಿತ್ವಾಂಘ್ರಿದ್ವಯಮಿಹ ಗುರೋರತ್ಯಗಾತ್ ಸ್ವೀಯಮಾಧಿಂ**
**ಹೃಷ್ಟೋ ನಿಷ್ಕಾಂಶ್ಚರಣಯುಗಲೋಪಾಯನಾನ್ಯರ್ಪಯಚ್ಚ ॥**

ಆ ರಾಘವೇಶ್ವರಭಾರತೀಸ್ವಾಮಿಗಳು ಗೋಕರ್ಣದಲ್ಲಿ ಇರುವಾಗ ವಿಜಯನಗರದ ಸಾಮ್ರಾಜ್ಯಾಧೀಶನಾದ ದೇವರಾಯನೆಂಬ ರಾಜನು ಅವರನ್ನು ಒಮ್ಮೆ ಸಂದರ್ಶಿಸಿದನು. ಆಪತ್ತಿಗೆ ತುತ್ತಾದ ಅರಸನು ಗುರುಗಳ ಪಾದಗಳಿಗೆ ಎರಗಿ ತನ್ನ ಮನೋವ್ಯಥೆಯನ್ನು ಶ್ರೀಗಳ ಸನ್ನಿಧಿಯಲ್ಲಿ ತೋಡಿಕೊಂಡನು. ಆಗ ದಯಾಮಯರಾದ ಗುರುಗಳ ಅನುಗ್ರಹದಿಂದ ಅರಸನ ಆಪತ್ತು ದೂರವಾಯಿತು. ಸಂತುಷ್ಟನಾದ ಆ ಭೂಪಾಲನು ಬಹಳ ಹೊನ್ನುಗಳನ್ನು ಪಾದಕಾಣಿಕೆಯಾಗಿ ಗುರುಗಳಿಗೆ ಒಪ್ಪಿಸಿದನು.

ಭೂಪಃ ಸೋಽಯಂ ಕನಕಕಲಶೀಪಂಚಕೈಃ ಶೋಭಮಾನಂ
ಭವ್ಯಂ ಹ್ಯಾಂದೋಲನಮಥ ಸಮಂ ಪಂಚಕೈರ್ದೀಪಿಕಾನಾಮ್ ।
ಪ್ರಾದಾತ್ಸ್ವಕ್ಕಾತ್ಯ ಕಿಮು ನಿಜಮಹೌದಾರ್ಯಸಾಮ್ರಾಜ್ಯಲಕ್ಷ್ಮೀಂ
ತಸ್ಮೈ ದೇವದ್ವಿಜಗುರುಸಮಾರಾಧಕಃ ಸ್ವಾಗತಾರ್ಥಮ್ ॥ ೧೪

ವಿಜಯನಗರ ಸಾಮ್ರಾಜ್ಯದ ಒಡೆಯನಾದ ದೇವರಾಯನು ದೇವ, ಬ್ರಾಹ್ಮಣ, ಗುರು—ಇವರಲ್ಲಿ ಪೂಜ್ಯಬುದ್ಧಿಯುಳ್ಳವನಾಗಿದ್ದನು. ಅವನು ಶ್ರೀ ರಾಘವೇಶ್ವರ ಭಾರತೀಸ್ವಾಮಿಗಳಿಗೆ ಸ್ವಾಗತಕ್ಕಾಗಿ ತನ್ನ ಬೊಕ್ಕಸದಿಂದ ಖರ್ಚುಹಾಕಿಸಿ ತಯಾರಿಸಿದ ಪಂಚ ದೀಪಿಕಾವ[illegible] ಸಹಿತವಾದ ಬಂಗಾರದ ಪಂಚ ಕಲಶಗಳುಳ್ಳ ಭವ್ಯವಾದ ಪಾಲಕ್ಕಿಯನ್ನು [illegible] ಸಾಮ್ರಾಜ್ಯದ ಲಕ್ಷ್ಮಿಯನ್ನೇ ಧಾರೆಯೆರೆದನೋ ಎಂಬಂತೆ ಕಾಣಿಕೆಯಾಗಿ ಸಲ್ಲಿಸಿದನು.

ಸೋಽಯಂ [illegible] ರಾಘವೇಶೋ ಯತೀಂದ್ರಃ
ಸಂಜಗ್ರಾಹ ಶ್ರುತಿಪಥಹಿತಂ ರಾಮಚಂದ್ರಾಭಿಧಾನಮ್ ।
ಆತ್ಮಾರಾಮಃ * ಕತಿಪಯದಿನಾನ್ಯಾಶ್ರಮೇಽಸ್ಮಿನ್ನುಷಿತ್ವಾ
ಗುರ್ವಾಜ್ಞಪ್ತಃ ಸ ಕಿಲ ಗತವಾಂಸ್ತಾಪಸಾವಾಸಭೂಮಿಮ್ ॥ ೧೫

ವೃದ್ಧರಾದ ಆ ರಾಘವೇಶ್ವರಭಾರತೀಯತೀಂದ್ರರು ಧಾರ್ಮಿಕರಾದ ರಾಮಚಂದ್ರಭಾರತೀ ಎಂಬ ಶಿಷ್ಯರನ್ನು ಪರಿಗ್ರಹಿಸಿದರು. ಬ್ರಹ್ಮಾನುಭವಿಗಳಾದ ಇವರು ಕೆಲವು ಕಾಲ ಮಠದಲ್ಲಿ ಉಳಿದು ಗುರುಗಳ ಅಪ್ಪಣೆ ಪಡೆದು ತಪಸ್ಸಿಗಾಗಿ ಪ್ರಶಾಂತವಾದ ಅರಣ್ಯ ಪ್ರಾಂತವನ್ನು ಸೇರಿದರು.

ಸ್ನಿಗ್ಧಾರಣ್ಯಂ ಪ್ರಕೃತಿಸುಭಗಂ ಕಾರ್ಣಗಿರ್ಯಂತಿಕಸ್ಥಂ
ಸಾಂದ್ರಚ್ಛಾಯಂ ಮುನಿಜನಹಿತಂ ದುಷ್ಟಸತ್ವಾದಿಶೂನ್ಯಮ್ ।
ಪ್ರಾಪ್ತಸ್ತೀರಂ ಖಲು ಪ್ರಶರಾಂಬ್ವವಾಯಾಸ್ತಟಿನ್ಯಾಃ
ಶಾಂತಸ್ವಾಂತಃ ಸ ಚ ಯತಿಪತಿರ್ಭಾರತೀರಾಮಚಂದ್ರಃ ॥ ೧೬

ಪ್ರಶಾಂತರಾದ ಆ ರಾಮಚಂದ್ರಭಾರತೀಸ್ವಾಮಿಗಳು ಕಾಡಿನಲ್ಲಿ ಸಂಚರಿಸುತ್ತಾ ಪ್ರಕೃತಿಮನೋಹರವೂ ಮುನಿಜನಹಿತವೂ ಹುಲಿ, ಕರಡಿ ಮುಂತಾದ ದುಷ್ಟ

---

* ಆತ್ಮನಿ = ಚಿದಾನಂದೇ, ಆರಮಂತೇ ಇತಿ ಆತ್ಮಾರಾಮಾಃ. ಇಂದ್ರಿಯಗಳನ್ನು ವಿಷಯಗಳಿಂದ ಹಿಂತೆಗೆದು, ಸಚ್ಚಿದಾನಂದರೂಪವಾದ ಬ್ರಹ್ಮವಸ್ತುವಿನಲ್ಲಿ ಮನಸ್ಸನ್ನು ಏಕಾಗ್ರವಾಗಿಸಿ ಧ್ಯಾನಿಸುವ ಯೋಗಿಗಳಿಗೆ ಆತ್ಮಾರಾಮರು ಎನ್ನುವರು, ಬ್ರಹ್ಮಾನುಭವಿಗಳೆಂದು ತಾತ್ಪರ್ಯ.

ವನ್ಯಪ್ರಾಣಿಗಳ ಸಂಚಾರ ಹಿತವೂ ಶ್ರೀರಾಮನ ಶರಹತಿಯಿಂದ ಹೊರಹೊಮ್ಮಿ ಶರಾವತಿಯೆಂದು ಪ್ರಸಿದ್ಧಿ ಪಡೆದ ನದಿಯ ತೀರದಲ್ಲಿರುವ ಕಾರಣ ಗಿರಿಯ ಹತ್ತಿರದ ಸುಂದರವಾದ ಅರಣ್ಯವನ್ನು ತಲುಪಿದರು.

ತಸ್ಮಿನ್ ಸೀತಾರಮಣಚರಣನ್ಯಾಸಮುದ್ರಾಪವಿತ್ರೇ
ಸ್ನಾತ್ವಾಽಜಸ್ರಂ ತ್ರಿಷವಣಮಘೌಘಕ್ಷೋದಕೇಷೂದಕೇಷು ।
ಪ್ರಾಸಾದೀಯನ್ನಭಿನವಪಲಾಶೋಪಕ್ಲೃಪ್ತೇ ಕುಟೀರೇ
ಪ್ರಾಣಾನಾಯಮ್ಯ ಚ ಸ ಪರಮಂ ಬ್ರಹ್ಮ ನಿಧ್ಯಾಯತಿ ಸ್ಮ ॥೧೬

ವನವಾಸಿಯಾದ ಶ್ರೀರಾಮನು ಸಂಚಾರ ಮಾಡಿದುದರಿಂದ ಶರಾವತೀ ತೀರದ ಕಾಡು ಅವನ ಹೆಜ್ಜೆಯ ಗುರುತಿನ ಮುದ್ರೆಯಿಂದ ಪರಿಶುದ್ಧವಾಯಿತು. ಅಂತಹ ಶರಾವತೀ ತೀರದ ಕಾಡಿನಲ್ಲಿ ಶ್ರೀರಾಮಚಂದ್ರಭಾರತೀಸ್ವಾಮಿಗಳು ಉಳಿದರು. ಅಲ್ಲಿ ತರೆಗೆಲೆಯ ಗುಡಿಸಿಲಿನಲ್ಲಿ ಅರಮನೆಯಲ್ಲಿರುವಂತೆ ಸಂತುಷ್ಟರಾಗಿರುತ್ತಾ ಅವರು ಬೆಳಿಗ್ಗೆ ಮಧ್ಯಾಹ್ನ ಸಂಜೆ ಈ ಮೂರುಹೊತ್ತು ಶರಾವತಿಯ ನಿರ್ಮಲ ಪ್ರವಾಹದಲ್ಲಿ ಮುಳುಗಿ ಮಿಂದರು, ಬಳಿಕ ನಿಶ್ವಾಸಪ್ರಶ್ವಾಸಗಳನ್ನು ನಿರೋಧಿಸಿ ಯೋಗಶಾಸ್ತ್ರದಲ್ಲಿ ಹೇಳಿದಂತೆ ಪ್ರಾಣಾಯಾಮ ಮಾಡುತ್ತಾ ಯಾವಾಗಲೂ ಪರಬ್ರಹ್ಮ ವಸ್ತುವನ್ನು ಧ್ಯಾನಿಸುತ್ತಾ ಇದ್ದರು.

ರಾಮಧ್ಯಾನಸ್ತಿಮಿತಮನಸೋ ರಾಮಚಂದ್ರಾರ್ಯಭಾನೋ–
ರ್ದ್ವೈತಧ್ವಾಂತಂ ವಿಗಲಿತಮಭೂತ್ತೇಜಸಾಮುಷ್ಯ ಭಿಕ್ಷೋಃ ।
ಕರ್ಣಾಕರ್ಣಿ* ಶ್ರವಣಮಧುರಾ ಕೀರ್ತಿಕನ್ಯಾಪ್ಯನನ್ಯಾ
ಮಂದಂ ಮಂದಂ ನೃಪಕುಲಭುವಾಂ ಕರ್ಣಮೂಲಂ ಜಗಾಹೇ॥

ಶ್ರೀರಾಮನ ಸತತ ಚಿಂತನೆಯಲ್ಲಿ ಮುಳುಗಿದ ಚಿತ್ತವುಳ್ಳ ಗುರುಗಳಾದ ರಾಮಚಂದ್ರಭಾರತೀಸ್ವಾಮಿಗಳು ಸೂರ್ಯನಂತೆ ತೇಜಸ್ವಿಗಳಾಗಿದ್ದರು ಈ ಸೂರ್ಯನ ಬೆಳಕಿನಿಂದ ಜೀವಾತ್ಮ ಬ್ರಹ್ಮರಿಗೆ ಪಾರಮಾರ್ಥಿಕವಾದ ಅಭೇದವು ಸ್ಫುಟವಾಗಿ ತೋರಗಾಣಿಕೆಯ ಭೇದವೆಂಬ ಕಗ್ಗತ್ತಲೆಯು ಕಣ್ಮರೆಯಾಯಿತು. ಅದ್ವೈತಾನುಭವಿಗಳಾದ ಈ ಯತಿವರ್ಯರ ಕೀರ್ತಿ ಕನ್ಯೆಯು ಮಾತ ಕಿವಿಗಿಂಪಾಯಿತು. ಅನ್ಯ ದುರ್ಲಭವಾದ ಈ ಕೀರ್ತಿಕನ್ಯೆಯ ಸುದ್ದಿ ಕಿವಿಯಿಂದ ಕಿವಿಗೆ ಹರಡುತ್ತಾ ಮೆಲ್ಲಮೆಲ್ಲನೆ ಅರಸುಮನೆತನದವರ ಕಿವಿಯಬುಡಕ್ಕೆ ಮುಟ್ಟಿತು. (ಕಿವಿಯ ರಂಧ್ರವನ್ನು ಹೊಕ್ಕಿತು).

* ಕರ್ಣೇ ಕರ್ಣೇ ಗೃಹೀತಂ ಕಥನಂ = ಕರ್ಣಾಕರ್ಣಿ, (ಕರ್ಣಪ್ರತಿಸಾರೇಣೇಚ್) ಕರ್ಣಾಕರ್ಣಿ ಹಿ ಕಪಯಃ ಕಥಯಂತಿ ಚ ತತ್ಕಥಾಂ ॥ ಡಾನೂಚುಣೇ ॥

**ದೃಷ್ಟ್ವಾ ಭೂಪಾಃ ಕೆಳದಿನಗರಾಧೀಶ್ವರಾಸ್ತಂ ಯಮೀಂದ್ರಂ**
**ಧನ್ಯಂಮನ್ಯಾಃ ಪ್ರಣಯವಿವಶಾಃ ಸಂಪ್ರಣೇಮುಃ ಕ್ರಮೇಣ ।**
**ಪ್ರೋಚುಸ್ತಸ್ಯಾಪ್ರತಿಮತಪಸಾ ವಿಸ್ಮಿತಾಸ್ತೇ ತಮಿತ್ಥಂ**
**ಶಾಧಿ ಸ್ವಾಮಿಂಸ್ತ್ವಯಿ ಯದುಚಿತಂ ಶಂಕರೇ ಕಿಂಕರಾಃ ಸ್ಮಃ॥೧೮**

ಕೆಳದಿ ಮತ್ತು ನಗರ ಸಂಸ್ಥಾನದ ಸ್ಥಾಪಕನಾದ ಚೌಡಪ್ಪನಾಯಕ, ಹಂಪೆಯ ಸೋಮಣ್ಣ ನಾಯಕ ಮುಂತಾದ ಅರಸರು ಸಂಯಮಿ ಶ್ರೇಷ್ಠರಾದ ಈ ಸ್ವಾಮಿಗಳ ಹೆಸರು ಕೇಳಿ ಭಕ್ತಿವಶರಾಗಿ ಗುರುಗಳ ಸಮೀಪಕ್ಕೆ ಬಂದರು. ಗುರುಗಳನ್ನು ಕಂಡು ನಮಸ್ಕರಿಸಿದರು. ಸ್ವಾಮಿಗಳ ಅಸದೃಶ ತಪಸ್ಸಿನಿಂದ ಬೆಕ್ಕಸಬೆರಗಾದರು. ಇವರ ದರ್ಶನದಿಂದ ತಾವು ಧನ್ಯರಾದೆವೆಂದು ತಿಳಿದರು. ಗುರುಗಳ ಹತ್ತಿರ ಅವರು "ಗುರುವರ್ಯರೇ ! ತಮಗೆ ಏನಾಗಬೇಕು. ತಮಗೆ ಅರ್ಹವಾದ ಯಾವ ಕೆಲಸವನ್ನು ನಾವು ಮಾಡೋಣ, ಅಪ್ಪಣೆಯಾಗಲಿ. ಲೋಕಕ್ಕೆ ಮಂಗಳವನ್ನುಂಟುಮಾಡುವ ತಾವು ಶಂಕರರೇ ಆಗಿರುವಿರಿ ನಾವು ತಮ್ಮ ಕಿಂಕರರಾಗಿದ್ದೇವೆ" ಎಂದು ಬಿನ್ನವಿಸಿದರು.

**ರಾಜನ್ಯಾಸ್ತೇ ಗುರುಚರಣಶುಶ್ರೂಷಯಾ ಲಬ್ಧಕಾಮಾಃ**
**ಗುರ್ವಾಜ್ಞಪ್ತಾಃ ಪುರಮುಪಶರಾವತ್ಯನಘಾಂ ಗ್ರಹಾರ್ಯೈಃ ।**
**ಕ್ಷೇತ್ರಾರಾಮೈಃ ಸಹ ಚರಣಯೋರರ್ಪಯನ್ಕಲ್ಪಯಿತ್ವಾ**
**ಪಶ್ಚಾತ್ತದ್ಧಿ ಪ್ರಥಿತಮಭವದ್ರಾಮಚಂದ್ರಪುರೀತಿ ॥ ೧೯**

ಕೆಳದಿ ಮತ್ತು ವಿಜಯನಗರದ ಸಂಸ್ಥಾಪಕರಾದ ಅರಸರು ಗುರುಗಳ ಸೇವೆಯಿಂದ ತಮ್ಮ ಇಷ್ಟಸಿದ್ಧಿಯನ್ನು ಪಡೆದರು. ಸಂತುಷ್ಟರಾದ ಅವರು ಗುರುಗಳ ಅಪ್ಪಣೆಯ ಪ್ರಕಾರ ಶರಾವತೀನದಿಯ ತೀರದಮೇಲೆ ಪಟ್ಟಣವೊಂದನ್ನು ಕಟ್ಟಿಸಿದರು ಮತ್ತು ಗುರುಗಳಿಗಾಗಿ ಕುಟೀರವೊಂದನ್ನು ನಿರ್ಮಿಸಿ ಕೊಟ್ಟರು. ಗುರುದೇವ ಬ್ರಾಹ್ಮಣರ ಸೇವೆಗಾಗಿ ಆ ರಾಜರು ಅಡಿಕೆ ತೋಟ ಗದ್ದೆಗಳಿಂದ ಕೂಡಿದ ಗ್ರಾಮಗಳನ್ನು ಅಗ್ರಹಾರಗಳನ್ನೂ ಕಲ್ಪಿಸಿ ಶ್ರೀರಾಮಚಂದ್ರಪುರದ ಸ್ವಾಮಿಗಳಿಗೆ ಕಾಣಿಕೆಯಾಗಿ ಕೊಟ್ಟರು. ಅನಂತರ ಅರಸರು ಕಟ್ಟಿಸಿಕೊಟ್ಟ ಆ ಪುರವು ಶ್ರೀಮಠದ ಆರಾಧ್ಯ ದೇವರಾದ ಶ್ರೀರಾಮಚಂದ್ರನ ಹೆಸರಿನಿಂದ ಅಂಕಿತವಾಗಿ ರಾಮಚಂದ್ರಾಪುರವೆಂದು ಪ್ರಸಿದ್ಧವಾಯಿತು.

**ದೇಹತ್ಯಾಗೋನ್ಮುಖಮುಪಪದಂ ಸ್ವಂ ಗುರುಂ ರಾಘವೇಶಂ**
**ಶ್ರುತ್ವಾ ಕಾಲೇ ಕೃತಮತಿರಥಾಯಸ್ಯೈಕರ್ತ್ಯ ಗೋಕರ್ಣತೀರ್ಥಮ್ ।**
**ತತ್ರ ಶ್ರಾಂತಂ ಪ್ರಣಯಸಮಾಯಂ ದ್ರಷ್ಟುಯಾ ಸಮುಪಾಗೋ**
**ಬ್ರಹ್ಮೀಭೂತೇ ಭಗವತಿ ಗುರೌ ಪ್ರಾಪ್ತವಾನ್ ಸ್ವಾಧಿಕಾರಮ್ ॥**

ತರುವಾಯ ಗೋಕರ್ಣದ ರಘೂತ್ತಮ ಮಠದಲ್ಲಿ ಇದ್ದ ತಮ್ಮ ಗುರುಗಳಾದ ರಾಘವೇಶ್ವರಭಾರತೀಗಳು ದೇಹಬಿಡುವ ಸ್ಥಿತಿಯಲ್ಲಿ ಇರುವರೆಂಬ ಸುದ್ದಿ ಇವರಿಗೆ ತಿಳಿಯಿತು. ಕೂಡಲೇ ನಿಶ್ಚಯಾತ್ಮಕ ಬುದ್ಧಿಯುಳ್ಳ ಶ್ರೀಗಳವರು ಗೋಕರ್ಣ ಕ್ಷೇತ್ರಕ್ಕೆ ಧಾವಿಸಿದರು. ಅತ್ಯಂತ ಬಳಲಿದ ವಯೋವೃದ್ಧರಾದ ಗುರುಗಳನ್ನು ನೋಡಿದರು. ಬಳಿಕ ಅವರು ಅಲ್ಲಿಯೇ ಇದ್ದು ಅವಸಾನ ಕಾಲದಲ್ಲಿ ಗುರು ರಾಘವೇಶ್ವರಭಾರತೀಗಳನ್ನು ಭಕ್ತಿಯಿಂದ ಸೇವಿಸಿದರು. ಪೂಜ್ಯರಾದ ಗುರುಗಳು ಮುಕ್ತರಾದ ಅನಂತರ ಶ್ರೀರಾಮಚಂದ್ರಭಾರತೀಗಳು ರಘೂತ್ತಮ ಮಠದ ಅಧಿಕಾರ ವನ್ನು ಪಡೆದರು.

ರಾಮಾದೀನಾಂ ಪ್ರತಿಕೃತಿಮಿಮಾಂ ಪ್ರಾಕ್ತನೈರರ್ಚಿತಾನಾ-
ಮಾನಿನ್ಯೇಽಸ್ಮಾದಭಿನವಮಠಂ ರಾಮಚಂದ್ರಾಭಿಧಾನಮ್ ।
ಧರ್ಮಾಚಾರ್ಯಸ್ತದನುಕುಶಲೀ ಭಾರತೀರಾಮಚಂದ್ರಃ
ಸೋಽಯಂ ಶಾಂತಸ್ತಪಸಿ ಚ ಯಥಾಪೂರ್ವಮತ್ರಾವತಸ್ಥೇ ॥೨೧

ಧರ್ಮಾಚಾರ್ಯರೂ ಕಾರ್ಯಚತುರರೂ ಆದ ಅವರು ತಮ್ಮ ಪೂರ್ವಿಕ ಗುರುಗಳು ಪೂಜಿಸಿದ ರಾಮ, ಸೀತಾ, ಲಕ್ಷ್ಮಣ, ಚಂದ್ರಮೌಳಿ, ಶ್ರೀಪಾದುಕಾ ಮುಂತಾದ ವಿಗ್ರಹಗಳನ್ನು ಗೋಕರ್ಣದ ಮಠದಿಂದ ರಾಮಚಂದ್ರಾಪುರದ ಹೊಸ ಮಠಕ್ಕೆ ತೆಗೆದುಕೊಂಡು ಬಂದರು. ತರುವಾಯ ಪ್ರಶಾಂತರಾದ ಆ ರಾಮಚಂದ್ರ ಭಾರತೀಸ್ವಾಮಿಗಳು ಮೊದಲಿನಂತೆ ತಪೋನಿಷ್ಠರಾಗಿ ಇಲ್ಲಿಯೇ ಉಳಿದರು.

ಜ್ಞಾನೀ ವೃದ್ಧಃ ಸ ಕಿಲ ನಿಯಮಾಚಾರಶೀಲಸ್ತಪಸ್ವೀ
ತನ್ವನ್ವರ್ಣಾಶ್ರಮವಿಹಿತಸದ್ಧರ್ಮರಕ್ಷಾದ್ಯುಪಾಯಾನ್ ।
ಕೃತ್ವಾ ಶಿಷ್ಯಂ ತ್ವಭಿನವಮಥೋ ರಾಘವೇಶಂ ಯುವಾನಂ
ಧ್ಯಾಯನ್ ರಾಮಂ ಪ್ರಣವರಸಿಕೋ ಬ್ರಹ್ಮನಿರ್ವಾಣಮಾರ್ಚ್ಛತ್

ವಯೋವೃದ್ಧರೂ, ಜ್ಞಾನಿಗಳೂ ಆದ ಅವರು ಶೌಚ, ಸಂತೋಷ ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನ ಎಂಬ ಯೋಗ ಶಾಸ್ತ್ರೋಕ್ತವಾದ ನಿಯಮ ಮತ್ತು ಯತ್ಯಾಶ್ರಮದ ಧರ್ಮವಾದ ತ್ರಿಷವಣ, ಧ್ಯಾನ, ಭಿಕ್ಷಾಚರ್ಯ ಮುಂತಾದವುಗಳಲ್ಲಿ ನಿರತರಾಗಿದ್ದರು. ಅಲ್ಲದೇ ಅವರು ವರ್ಣಾಶ್ರಮವಿಹಿತವಾದ ಸತ್ಕರ್ಮಾಚರಣೆಗೆ ತಕ್ಕ ಸೌಕರ್ಯವನ್ನು ಶಿಷ್ಯಮಂಡಲಿಗೆ ಕಲ್ಪಿಸಿ ವೈದಿಕ ಧರ್ಮದ ರಕ್ಷಣೆಯ ಬಗ್ಗೆ ತಕ್ಕ ವ್ಯವಸ್ಥೆ ಮಾಡಿದರು. ಬಳಿಕ ತಮಗೆ ವಯಸ್ಸಾದುದರಿಂದ ತಮ್ಮ ಬಳಿಕ ಮಠದ ಉತ್ತರಾಧಿಕಾರಕ್ಕೆ ಅರ್ಹನಾದ ಯುವಕನೊಬ್ಬನಿಗೆ ಸಂನ್ಯಾಸ ದೀಕ್ಷೆಯನ್ನು ಕೊಟ್ಟರು. ಯೋಗ ಪಟ್ಟಾಭಿಷಿಕ್ತನಾದ ಆ ಶಿಷ್ಯನಿಗೆ ಅಭಿನವ

ರಾಘವೇಶ್ವರಭಾರತೀ ಎಂದು ಹೆಸರಿಟ್ಟು ಅವರಿಗೆ ಶ್ರೀಮಠದ ಅಧಿಕಾರವನ್ನು ವಹಿಸಿದರು. ಬಳಿಕ ಪ್ರಣವ ಜಪಾಸಕ್ತರಾದ ರಾಮಚಂದ್ರಭಾರತೀಗಳು ಶ್ರೀರಾಮನನ್ನು ಧ್ಯಾನಿಸುತ್ತಾ ದೇಹವನ್ನು ತ್ಯಜಿಸಿ ಮುಕ್ತರಾದರು.

ಪಶ್ಚಾದ್ವಿದ್ಯಾಪ್ರಸೃಮರಯಶಾ ನೂತನೋ ರಾಘವೇಶೋ
ದತ್ವಾ ದೀಕ್ಷಾಂ ಸವಿಧಿ ಯಮಿನೇ ರಾಮಯೋಗೀಂದ್ರನಾಮ್ನೇ।
ಮುಕ್ತಃ ಸೋऽಭೂದಮಿತಮಹಿಮಾ ರಾಮಯೋಗೀಂದ್ರನಾಮಾ
ಧರ್ಮಾಚಾರೇಷ್ವಧಿಕೃತಭವದ್ರಾಮಚಂದ್ರಾರ್ಯಪೀಠೇ ॥ ೨೩

ರಾಮಚಂದ್ರಭಾರತೀಗಳ ಅನಂತರ ಅಭಿನವ ರಾಘವೇಶ್ವರಭಾರತೀಗಳು ರಾಮಚಂದ್ರಾಪುರದ ಮಠಾಧೀಶರಾದರು ಇವರು ಬ್ರಹ್ಮವಿದ್ಯಾಪಾರಂಗತರು. ಇವರ ವಿದ್ಯಾಕೀರ್ತಿ ಎಲ್ಲೆಡೆಗೂ ಹಬ್ಬಿತ್ತು ಕೆಲವು ಕಾಲದ ತರುವಾಯ ಯೋಗಶಾಸ್ತ್ರ ಪರಿಣತರೂ ತಮ್ಮ ಶಿಷ್ಯರೂ ಆದ ರಾಮಯೋಗೀಂದ್ರ ಭಾರತೀಯವರನ್ನು ಶ್ರೀಮಠದ ಆಚಾರ್ಯ ಪೀಠದಲ್ಲಿ ಕೂರಿಸಿ ತಾವು ಮುಕ್ತರಾದರು

ವಿದ್ಯಾಸಿಂಧೋಸ್ತದನು ಸ ಗುರೋ ರಾಮಯೋಗೀಂದ್ರಪರ್ಯಾತ್
ಲಬ್ಧ್ವಾ ದೀಕ್ಷಾಮಿಹ ಗುರುರಭೂದ್ಭಾರತೀ ಶ್ರೀನೃಸಿಂಹಃ ।
ಪಶ್ಚಾತ್ತಸ್ಮಾನ್ನೃಹರಿಯಮಿನಃ ಪ್ರಾಪ್ತಸಂನ್ಯಾಸಧರ್ಮಾ
ಪ್ರಾಚಾರ್ಯತ್ವಂ ನಿರವಹದನಂತೇಂದ್ರಭಾರತ್ಯಭಿಖ್ಯಃ ॥ ೨೪

ವಿದ್ಯಾಪಾರಿಧಿಯೆನಿಸಿದ ಶ್ರೀರಾಮಯೋಗೀಂದ್ರಭಾರತೀಗಳ ಅನಂತರ ಅವರ ಶಿಷ್ಯರಾದ ಶ್ರೀನೃಸಿಂಹ ಭಾರತೀಗಳು ಗುರು ಪೀಠವನ್ನು ಅಲಂಕರಿಸಿದರು. ಅವರ ಬಳಿಕ ನೃಸಿಂಹಭಾರತೀಗಳಿಂದ ಸಂನ್ಯಾಸ ದೀಕ್ಷೆ ಪಡೆದ ಅನಂತೇಂದ್ರ ಭಾರತೀಗಳು ಶ್ರೀರಾಮಚಂದ್ರಾಪುರದ ಮಠಾಧಿಪತಿಗಳಾದರು.

ಪ್ರೌಢಪೀಠಂ ತದನು ಗುರುಣಾऽನಂತಯೋಗೀಂದ್ರನಾಮ್ನಾ

ಪ್ರಾಸಾದೋऽಯಂ ದೃಢತರಶಿಲಾಸ್ತಂಭಸನ್ನದ್ಧಮೂಲಃ
ಕುಟ್ಯಾ ಭಾಸಂ ವ್ಯಸೃಜದಮುತೋ ರಾಮಚಂದ್ರಾಪುರಸ್ಥಃ ॥

ಅನಂತೇಂದ್ರಭಾರತೀಸ್ವಾಮಿಗಳ ಅನಂತರ ಅವಿಚ್ಛಿನ್ನವಾದ ಪ್ರಾಚೀನ ಗುರುಪರಂಪರೆಯ ಆಚಾರದಂತೆ ತಮ್ಮ ಗುರುವರ್ಯರಿಂದ ಸಂನ್ಯಾಸದೀಕ್ಷೆ ಪಡೆದ ರಾಮಭದ್ರಭಾರತೀ ಯತೀಂದ್ರರು ಆಚಾರ್ಯ ಪೀಠಕ್ಕೆ ಬಂದರು. ಇದುವರೆಗೆ ರಾಮಚಂದ್ರಾ

ಪುರದಲ್ಲಿ ಗುಡಿಸಲಾಗಿದ್ದ ಮಠದ ಮನೆಯು ಈಗ ದೊಡ್ಡಕಲ್ಲಿನಕಟ್ಟಡವಾಗಿ ಪರಿವರ್ತಿತವಾಯಿತು ಭದ್ರವಾದ ಕಲ್ಲಿನ ತಳಪದಿ ಹಾಕಿದ ದೊಡ್ಡ ದೊಡ್ಡ ಕಲ್ಲಿನ ದೃಢವಾದ ಕಂಬಗಳುಳ್ಳ ವಿಶಾಲವಾದ ಬೃಹದಾಕಾರದ ಕಟ್ಟಡವಾಗಿ ಕಂಗೊಳಿಸಿತು ಇದು ಶ್ರೀರಾಮಭದ್ರಭಾರತೀಸ್ವಾಮಿಗಳ ಅನುಗ್ರಹ

**ಜೀವಬ್ರಹ್ಮಾದ್ವಯರಸನಿಧೇ ರಾಮಭದ್ರಾತ್ಪರಸ್ಮಾತ್**
**ಸಂನ್ಯಸ್ತೋಽಯಂ ತದನು ಗುರುಣಾ ಪ್ರಾಪ್ತವಿದ್ಯೋಪದೇಶಃ ।**
**ತಾರ್ತೀಯೀಕೋ ನಿರವಧಿಕೃಪೋ ರಾಘವಶ್ಚೇಶ್ವರಾಖ್ಯಃ**
**ಪಾರಂಪರ್ಯಾದಭಜತ ಪದಂ ರಾಮಚಂದ್ರಾರ್ಯಪೀಠೇ ॥ ೨೬**

ಅದ್ವೈತಬ್ರಹ್ಮಾನಂದನಿಧಿಗಳಾದ ರಾಮಭದ್ರಭಾರತೀಸ್ವಾಮಿಗಳ ಅನಂತರ ಇಮ್ಮಡಿ ರಾಘವೇಶ್ವರಭಾರತೀಸ್ವಾಮಿಗಳು ಗುರುಪರಂಪರೆಯ ಅವಿಚ್ಛಿನ್ನ ಸಂಪ್ರದಾಯದಂತೆ ರಾಮಚಂದ್ರಾಪುರದ ಮಠದ ಆಚಾರ್ಯಪೀಠಕ್ಕೆ ಬಂದರು. ಇವರು ತಮ್ಮ ಗುರುಗಳಿಂದ ಪಾರಿವ್ರಾಜಕ ದೀಕ್ಷೆ ಪಡೆದು ವಿದ್ಯೋಪದಿಷ್ಟರಾದ ಸಂನ್ಯಾಸಿ ಶಿಷ್ಯರಾಗಿದ್ದರು. ಇವರು ಎಲ್ಲೆಯಿಲ್ಲದ ದಯೆಯುಳ್ಳವರಾಗಿದ್ದರು

**ಲಬ್ಧ್ವಾ ದೀಕ್ಷಾಮಥ ಚ ಗುರುಣಾ ರಾಘವೇಶೇನ ತೇನ**
**ವ್ಯಾಖ್ಯಾಪೀಠೇ ಕುಲಪತಿರಭೂತ್ತತ್ರ ವಿದ್ಯಾಘನೇಂದ್ರಃ ।**
**ಉತಚ್ಛಿಷ್ಯಃ ಸ ಖಲು ರಘುನಾಥಾಹ್ವಯಸ್ತಸ್ಯ ಶಿಷ್ಯಃ**
**ಪೀಠಂ ಪ್ರಾಪತ್ತದನು ಗುರುರಾಡ್ ಭಾರತೀ ರಾಮಚಂದ್ರಃ ॥೨೭**

ಶ್ರೀರಾಘವೇಶ್ವರಭಾರತೀಗಳ ತರುವಾಯ ರಾಮಚಂದ್ರಾಪುರದ ಗುರುಪೀಠದಲ್ಲಿ ವಿದ್ಯಾಘನೇಂದ್ರಭಾರತೀಸ್ವಾಮಿಗಳು ಕುಲಪತಿಗಳಾದರು. ಇವರು ತಮ್ಮ ಗುರುಗಳಿಂದಲೇ ಯತ್ಯಾಶ್ರಮದ ದೀಕ್ಷೆ ಪಡೆದಿದ್ದರು. ಇವರ ತರುವಾಯ ರಘುನಾಥಭಾರತೀಗಳು ಪೀಠಕ್ಕೆ ಬಂದರು. ಆಮೇಲೆ ರಾಮಚಂದ್ರಭಾರತೀಸ್ವಾಮಿಗಳು ವ್ಯಾಖ್ಯಾಪೀಠದಲ್ಲಿ ಮಂಡಿಸಿದರು

**ಧರ್ಮಾಚಾರ್ಯಃ ಕುಲಪತಿರಯಂ ರಾಮಚಂದ್ರೋ ಯತೀಂದ್ರಃ**
**ಸ್ವಸ್ವಾಚಾರೇಷ್ವವಿಚಲಮತೀನ್ ಶಿಷ್ಯವರ್ಗಾಂಶ್ಚಕಾರ ।**
**ಆತ್ಮಾರಾಮೋ ರಘುಪದಯುತಂ ಹ್ಯುತ್ತಮಾಖ್ಯಂ ಚ ಶಿಷ್ಯಂ**
**ಕೃತ್ವಾ ಪೀಠೇ ಹರಿಪದಮಸೌ ಬ್ರಹ್ಮಭೂಯಂ ಜಗಾಹೇ॥ ೨೮**

ಕುಲಪತಿಗಳಾದ ರಾಮಚಂದ್ರಭಾರತೀಸ್ವಾಮಿಗಳು ಸಹಜಬ್ರಹ್ಮಾನಂದರು. ಗುರುಗಳಾದ ಇವರು ಶಿಷ್ಯರೆಲ್ಲರೂ ತಮ್ಮ ವರ್ಣಾಶ್ರಮ ಧರ್ಮದಲ್ಲಿ ಯಾವಾಗಲೂ

ನಿರತರಾಗುವಂತೆ ಮಾಡಿದ್ದರು. ವೃದ್ಧರಾದ ಬಳಿಕ ರಘೂತ್ತಮಭಾರತೀ ಎಂಬುವ ಶಿಷ್ಯರನ್ನು ಆಚಾರ್ಯ ಪೀಠದಲ್ಲಿ ಕೂರಿಸಿ ತಾವು ಪರಮಾತ್ಮನ ಪಾದ ಸೇರಿದರು ಅಂದರೆ ಸ್ವಸ್ವರೂಪವಾದ ಬ್ರಹ್ಮವೇ ಆದರು

**ಧರ್ಮಾದೇಶೇ ರಘುಪದಯುಜಾ ಚೋತ್ತಮೇನಾತ್ತದೀಕ್ಷಃ**
**ಪ್ರಾಚಾರ್ಯೋಽಭೂತ್ತದನು ಪರಮೇಶಾನಭಾರತ್ಯಭಿಖ್ಯಃ ।**
**ವೃದ್ಧಾಚಾರಾನನುಸೃತವತಾ ತೇನ ದತ್ವಾಽಥ ದೀಕ್ಷಾಂ**
**ವ್ಯಾಖ್ಯಾಪೀಠೇ ನಿಶಿತಧಿಷಣೋ ರಾಘವೇಶೋಽಭ್ಯಷೇಚಿ ॥** ೩೯

ರಘೂತ್ತಮಭಾರತೀಗಳ ತರುವಾಯ ಪರಮೇಶ್ವರಭಾರತೀಗಳು ಪೀಠಕ್ಕೆ ಬಂದರು. ಇವರು ತಮ್ಮ ಗುರುಗಳಿಂದ ಸಂನ್ಯಾಸ ದೀಕ್ಷೆ ಪಡೆದು ಯೋಗ ಪಟ್ಟಾಭಿಷಿಕ್ತರಾಗಿದ್ದರು ಪೂಜ್ಯರಾದ ಹಿರಿಯ ಆಚಾರ್ಯರ ಆಚರಣೆಗಳನ್ನು ಅನುಸರಿಸುತ್ತಿದ್ದ ಅವರು ಚುರುಕು ಬುದ್ಧಿಯುಳ್ಳ ರಾಘವೇಶ್ವರಭಾರತೀ ಎಂಬ ತಮ್ಮ ಶಿಷ್ಯರನ್ನು ರಾಮಚಂದ್ರಾಪುರ ಮಠದ ವ್ಯಾಖ್ಯಾನ ಪೀಠದಲ್ಲಿ ಉತ್ತರಾಧಿಕಾರಿಯಾಗಿ ನೇಮಿಸಿದರು.

**(ವಸಂತತಿಲಕಾವೃತ್ತಮ್)**

**ನಾಮ್ನಾ ರಘೂತ್ತಮ ಇತಿ ಪ್ರಥಿತಂ ಯುವಾನಂ**
**ಕೃತ್ವಾ ಸ್ವಶಿಷ್ಯಮವದಾತಮುದಾರಚೇತಾಃ ।**
**ವ್ಯಾಖ್ಯಾಸನೇ ತಮಭಿಷಿಚ್ಯ ಚಿರಾಯ ಯೋಗೀ**
**ಮುಕ್ತೋ ಬಭೂವ ಗುರುರಾಡಥ ರಾಘವೇಶಃ ॥** ೪೦

ದೊಡ್ಡ ಮನಸ್ಸಿನವರೂ, ಯೋಗಶಾಸ್ತ್ರ ನಿಪುಣರೂ ಆದ ರಾಘವೇಶ್ವರ ಭಾರತೀಸ್ವಾಮಿಗಳು ಹಲವು ವರ್ಷಗಳು ಕಳೆದ ಬಳಿಕ ಪರಿಶುದ್ಧ ಹೃದಯರೂ ಯುವಕರೂ ಆದ ಒಬ್ಬರಿಗೆ ಸಂನ್ಯಾಸ ದೀಕ್ಷೆ ಕೊಟ್ಟು ಅವರನ್ನು ರಘೂತ್ತಮ ಭಾರತೀ ಎಂದು ಕರೆದು ಶ್ರೀರಾಮಚಂದ್ರಾಪುರದ ಶ್ರೀಮಠದ ವ್ಯಾಖ್ಯಾನಪೀಠದಲ್ಲಿ ಕೂರಿಸಿದರು ಬಳಿಕ ತಾವು ಬ್ರಹ್ಮೀಭೂತರಾದರು

ಶ್ರೀರಾಮಚಂದ್ರಪುರಪೀಠಪತಿಸ್ತತೋಽಸೌ
ಭಾರತ್ಯಪೇತವೃಜಿನಸ್ಸ ರಘೂತ್ತಮಾಖ್ಯಃ ।
ಶಿಷ್ಯಾಂಬುಜಪ್ರಕರಚಿತ್ಸುಖಭಾನುರಾರ್ಯೋ
ಬ್ರಹ್ಮಾನುಚಿಂತನಪರಶ್ಚ ನಿನಾಯ ಕಾಲಮ್ ॥ ೪೧

ಪೀಠಾಧಿಪತಿಗಳಾದ ಶ್ರೀ ರಘೂತ್ತಮಭಾರತೀಯವರ ಮನಸ್ಸು ನಿರ್ಮಲ, ರಾಗದ್ವೇಷರಹಿತ ಅವರು ಶಿಷ್ಯರೆಂಬ ತಾವರೆಗಳ ರಾಶಿಗೆ ಸಂತಸವನ್ನು ಉಂಟು ಮಾಡುವ ಜ್ಞಾನಾನಂದಮಯನಾದ ಸೂರ್ಯಪ್ರಕಾಶವೇ ಹೌದು ಆ ಮಹಾನುಭಾವರು ಯಾವಾಗಲೂ ಬ್ರಹ್ಮಚಿಂತನದಲ್ಲಿಯೇ ಕಾಲವನ್ನು ತಳ್ಳುತ್ತಿದ್ದರು

(ಕೆಳಗಣ ನಾಲ್ಕು ಪದ್ಯಗಳು ಏಕಾನ್ವಯ ಹೊಂದುವುವು.)

**ಸ್ವಾಂತೇವಸಂತಮುಪಸೇವಿತದೇಶಿಕಾಂಘ್ರಿಂ**
**ಶ್ರೀರಾಘವೇಶ್ವರಯತೀಂದ್ರಮಥಾಭಿಷಿಚ್ಯ ।**
**ಧರ್ಮೋಪದೇಶಕಪದೇ ಸ ಫಣೀಹಯೋಗೀ**
**ನಿರ್ಮೋಕಪಟ್ಟಮಿವ ಜೀರ್ಣವಪುರ್ವಿಹಾಯ ॥** ೩೧

**ಬ್ರಹ್ಮೀಬಭೂವ ಹಿ ಚಿರಾಯ ತತೋ ಯತೀಶಃ**
**ಶ್ರೀರಾಘವೇಶ್ವರ ಇತಿ ಪ್ರಥಿತಾಭಿಧಾನಃ ।**
**ಸ್ವಾಚಾರ್ಯಕಂ ನಿರವಹಸ್ಮೃತಿಮಾನ್ ಯಥಾಸ್ವಂ**
**ಕಾಲೇ ಗತೇ ಬಹುತಿಥೇ ಸ ರಘೂತ್ತಮಾಖ್ಯಮ್ ॥** ೩೨

**ಪೀಠೇಽಭಿಷಿಚ್ಯ ಯಮಿನಾಂ ಪತಿರಾತ್ತದೀಕ್ಷಂ**
**ವಿಷ್ಣೋಃ ಪದಂ ಕಿಲ ಜಗಾಮ ಸ ರಾಘವೇಶಃ ।**
**ಪಶ್ಚಾದ್ರಘೂತ್ತಮಯತಿಃ ಕಿಲ ರಾಮಚಂದ್ರ-**
**ಪೀಠೇ ಚಿರಾಯ ಗುರುರಾಸ ಮಹಾನುಭಾವಃ ॥** ೩೩

**ಕೃತ್ವಾ ಯಥಾಮತಿಸನಾತನಧರ್ಮಬೋಧಂ**
**ಶ್ರೀರಾಘವೇಶ್ವರಪದಾಂಕಿತಮಾರ್ಯಗೃಹ್ಯಮ್ ।**
**ಧರ್ಮಾನುಶಾಸನಪದೇ ವಿನಿವೇಶ್ಯ ಶಿಷ್ಯಂ**
**ಪ್ರೌಜ್ಝನ್ನಿಜಂ ವಪುರಸಾವಪುನರ್ಭವಾಯ ॥** ೩೪

ಶ್ರೀ ರಘೂತ್ತಮಭಾರತೀಗಳು ಕೆಲವು ಕಾಲ ಕಳೆದ ಮೇಲೆ ಗುರುಸೇವಾ-ಪರಾಯಣರೂ ತಮ್ಮಿಂದ ಸಂನ್ಯಾಸ ದೀಕ್ಷೆಪಡೆದು ಶಿಷ್ಯರೂ ಆದ ಶ್ರೀ ರಾಘವೇಶ್ವರ ಭಾರತೀಗಳನ್ನು ಆಚಾರ್ಯ ಪೀಠದಲ್ಲಿ ಅಭಿಷೇಕ ಮಾಡಿದರು. ಅನಂತರ ಯೋಗಿಗಳಾದ ರಘೂತ್ತಮಭಾರತೀಗಳು ಮುಪ್ಪಿನಿಂದ ಸಡಿಲವಾದ ತಮ್ಮ ಶರೀರವನ್ನು ವು ಪರೆಕಳಚುವಂತೆ ಕಳಚಿಹಾಕಿದರು ಅಂದರೆ ಅವರು ಬ್ರಹ್ಮೀ ಭಾವವನ್ನು ದರು. ಅನಂತರ ಶ್ರೀ ರಾಘವೇಶ್ವರಭಾರತೀ ಗುರುಗಳು ತಮ್ಮ ಆಚಾರ್ಯ ಣೆಗಾರಿಕೆಯಾದ ಬ್ರಹ್ಮವಿದ್ಯೋಪದೇಶ, ಧರ್ಮಪ್ರಚಾರಾದಿ ಕಾರ್ಯ ತ್ತಾಗಿ ನಿರ್ವಹಿಸಿದರು. ಬುದ್ಧಿಶಾಲಿಗಳಾದ ಅವರು ಕೆಲವು ಕಾಲ

ಮಠದಲ್ಲಿ ಉಳಿದು ಅನಂತರ ರಘೂತ್ತಮ ಭಾರತೀ ಎಂಬುವವರನ್ನು ಶಿಷ್ಯರನ್ನಾಗಿ ಪರಿಗ್ರಹಿಸಿ ವ್ಯಾಖ್ಯಾನಪೀಠದಲ್ಲಿ ಅವರನ್ನು ಕೂರಿಸಿದರು. ಬಳಿಕ ರಾಘವೇಶ್ವರ ಭಾರತೀಸ್ವಾಮಿಗಳು ಮುಕ್ತರಾದರು.

ತರುವಾಯ ಮಹಾನುಭಾವರಾದ ಶ್ರೀ ರಘೂತ್ತಮಭಾರತೀಗಳು ಬಹು ಕಾಲ ಶ್ರೀ ರಾಮಚಂದ್ರಾಪುರದ ಮಠದಲ್ಲಿ ಆಚಾರ್ಯರಾಗಿದ್ದರು. ವೃದ್ಧರಾದ ಮೇಲೆ ಅವರು ಸಜ್ಜನಮಾನ್ಯರಾದ ಶ್ರೀ ರಾಘವೇಶ್ವರಭಾರತೀ ಎಂಬ ಶಿಷ್ಯರನ್ನು ಧರ್ಮಪೀಠದಲ್ಲಿ ಕೂರಿಸಿ ತಾವು ದೇಹತ್ಯಾಗಮಾಡಿ ಮುಕ್ತಿಪಡೆದರು.

ಬ್ರಹ್ಮಾನುಭೂತಿಪರಿಶುದ್ಧನಿಜಾಂತರಾತ್ಮಾ
ಶ್ರೀರಾಘವೇಶ್ವರಗುರುಃ ಸ್ವಗುರೂಪದಿಷ್ಟಮ್ ।
ಧರ್ಮಂ ಶ್ರುತಿಸ್ಮೃತಿಪಥೋಚಿತಸೂತ್ತದೀಕ್ಷಃ
ಪ್ರಾಚಾರಯತ್ ಖಲು ಮುಮುಕ್ಷುಜನೋದಯಾಯ ॥೩೫

ತಮ್ಮ ಗುರುಗಳಿಂದ ಮಹಾವಾಕ್ಯೋಪದೇಶ ಪಡೆದ ಶ್ರೀ ರಾಘವೇಶ್ವರ ಭಾರತೀಸ್ವಾಮಿಗಳು ಬ್ರಹ್ಮಾನುಭವದಿಂದ ಪರಿಶುದ್ಧ ಮನಸ್ಸಿನವರಾಗಿದ್ದರು. ಯಾವುದೇ ವಿಧವಾದ ಮನೋವಿಕ್ಷೇಪಗಳೂ ಅವರಿಗೆ ಇರಲಿಲ್ಲ. ಅವರು ಮುಮುಕ್ಷುಗಳೂ ಜಿಜ್ಞಾಸುಗಳೂ ಆದ ಧಾರ್ಮಿಕರ ಏಳಿಗೆಗಾಗಿ ಶ್ರೌತಸ್ಮಾರ್ತೋಭಯಮಾರ್ಗ ಹಿತಪ್ರದವಾದ ಸನಾತನಧರ್ಮರಹಸ್ಯವನ್ನೂ ಪ್ರಚಾರ ಮಾಡಿದರು.

---

ಟಿಪ್ಪಣಿ=ಶ್ರೀ ರಾಮಚಂದ್ರಾಪುರದ ಗುರುಪರಂಪರಾಸ್ತೋತ್ರದಲ್ಲಿ ಶ್ರೀಶಂಕರ ಭಗವತ್ಪಾದದಿಂದ ೨೫ನೆಯ ಗುರುಗಳಾದ ರಘೂತ್ತಮಭಾರತೀಗಳ ತರುವಾಯ ಕ್ರಮಸಂಖ್ಯೆ (೨೬)ನೆಯ ಶ್ರೀ ರಾಘವೇಶ್ವರ ಭಾರತೀಸ್ವಾಮಿಗಳನ್ನು ಇಮ್ಮಡಿಪ್ರೌಢದೇವ ಎಂದು ಕರೆದಿದ್ದಾರೆ ಹಾಗೆಯೇ ಇದೇ ಕ್ರಮಸಂಖ್ಯೆ ೨೮ನೆಯ ರಾಘವೇಶ್ವರಭಾರತಿಗಳ ತರುವಾಯ ಪಟ್ಟಕ್ಕೆ ಬಂದ. ಕ್ರಮಸಂಖ್ಯೆ ೨೯ನೆಯ ರಘೂತ್ತಮಭಾರತೀಗಳೂ ಇಮ್ಮಡಿ ಪ್ರೌಢದೇವ ಎಂದು ಸಂಕೇತಿಸಿರುವುದನ್ನು ಗಮನಿಸಬೇಕು. ಶ್ರೀ ಶಂಕರಾಚಾರ್ಯರಿಂದ ೨೫ನೆಯ ರಘೂತ್ತಮಭಾರತೀಗಳ ಬಳಿಕ ಪರಂಪರೆ ಹೀಗೆ ಇದೆ-(೨೬) ರಾಘವೇಶ್ವರಭಾರತೀ (ಇಮ್ಮಡಿ ಪ್ರೌಢದೇವ) (೨೭) ರಘೂತ್ತಮಭಾರತೀ (೨೮) ರಾಘವೇಶ್ವರಭಾರತೀ (೨೯) ರಘೂತ್ತಮಭಾರತೀ (ಇಮ್ಮಡಿ ಪ್ರೌಢದೇವ) ೩೦ ರಾಘವೇಶ್ವರಭಾರತೀ (೩೧) ರಾಮಚಂದ್ರ ಭಾರತೀ (೩೨) ರಾಘವೇಂದ್ರಭಾರತೀ (೩೩) ರಾಘವೇಶ್ವರಭಾರತೀ (೩೪) ರಾಮಚಂದ್ರ ಭಾರತೀ (೩೫) ರಾಘವೇಂದ್ರಭಾರತೀಸ್ವಾಮಿಗಳು (ಈಗಿನವರು)

(ಮಂದಾಕ್ರಾಂತಾವೃತ್ತಮ್)

**ಸೋಽಯಂ ಬಾಲಂ ತದನು ಗುರುರಾಡ್ರಾಘವೇಶಾಭಿಧಾನಃ**
**ಶಿಷ್ಯಂ ವರ್ಷೇ ಜನಿಗಣನಯಾ ದ್ವಾದಶೇ ತಸ್ಥಿವಾಂಸಮ್ ।**
**ಸಂನ್ಯಾಸ್ಯೈನಂ ಮಠಪತಿಪದೇ ಸ್ಥಾಪಯಿತ್ವಾ ಯಥಾಸ್ವಂ**
**ವೃದ್ಧೋ ಬ್ರಹ್ಮಣ್ಯಧಿಗತಮನಾ ಬ್ರಹ್ಮಭಾವಂ ಪ್ರಪೇದೇ॥ ೩೬**

ಬಳಿಕ ಗುರುಗಳಾದ ಶ್ರೀರಾಘವೇಶ್ವರಭಾರತೀಸ್ವಾಮಿಗಳು ಹನ್ನೆರಡು ವಯಸ್ಸಿನ ಬಾಲಕನಿಗೆ ಸಂನ್ಯಾಸದೀಕ್ಷೆಯನ್ನು ಕೊಟ್ಟು ಆತನನ್ನು ರಾಮಚಂದ್ರಾಪುರದ ಮಠಾಧೀಶಸ್ಥಾನದಲ್ಲಿ ಸ್ಥಾಪಿಸಿದರು. ಅನಂತರ ವಯೋವೃದ್ಧರೂ ಬ್ರಹ್ಮಜ್ಞಾನಿಗಳೂ ಆದ ಅವರು ತಮ್ಮ ತಮ್ಮ ಧ್ಯೇಯವನ್ನು ಅತಿಕ್ರಮಿಸದೇ ದೇಹತ್ಯಾಗ ಮಾಡಿ ಬ್ರಹ್ಮಸ್ವರೂಪವನ್ನು ಹೊಂದಿದರು

**ಬಾಲೇ ಪೀಠಂ ಶ್ರಿತವತಿ ಗುರೌ ರಾಮಚಂದ್ರಾಭಿಧಾನೇ**
**ಕಂಚಿತ್ಕಾಲಂ ಪಿಶುನ ಜನತಾ ಹ್ಯಂತರಾಯಂ ವಿತೇನೇ ।**
**ವಾತ್ಯಾ ನೂನಂ ಜನಯಿತುಮಲಂ ಜಾತು ಕಲ್ಲೋಲಮುದ್ಧಾ**
**ತದ್ಗಾಂಭೀರ್ಯಂ ತಿರಯತು ಕಥಂ ಮಗ್ನ ಮೈನಾಕಶೈಲೇ ॥**

ಬಾಲಕರಾದ ರಾಮಚಂದ್ರಭಾರತೀಸ್ವಾಮಿಗಳು ಆಚಾರ್ಯಪೀಠದಲ್ಲಿರುವಾಗ ದುಷ್ಟರು ಕೆಲವು ವರ್ಷಗಳ ತನಕ ಕಿರುಕುಳವನ್ನುಂಟುಮಾಡಿದರು ಆದರೆ ಅವರ ಆಟ ಬಹುಕಾಲನಡೆಯಲಿಲ್ಲ. ಮೈನಾಕಪರ್ವತವನ್ನೇ ಮುಳುಗಿಸಿದ ಸಮುದ್ರದಲ್ಲಿ ಇದ್ದಕ್ಕಿದ್ದಹಾಗೆ ಎದ್ದಿರುವ ಬಿರುಗಾಳಿ ದೊಡ್ಡ ದೊಡ್ಡ ತೊರೆಗಳನ್ನು ಉಂಟುಮಾಡಬಹುದು ಆದರೆ ಆ ಬಿರುಗಾಳಿ ಸಮುದ್ರದ ಆಳವನ್ನು ಕೆಡಿಸೀತೆ ?

**ಅತ್ರ ಸ್ಥಿತ್ವಾ ನಿಯತಮುಚಿತಂ ಕಾರ್ಯಜಾತಂ ಮಠೀಯಂ**
**ಕಾರಂಕಾರಂ ನ್ಯವಸದಥ ಕೆಕ್ಕಾರು* ಶಾಖಾ ಮಠೇಶಃ ।**
**ಬಾಲಂ ಸಂನ್ಯಾಸಿನ ಮಿಹ ಮಠಾಧೀಶ್ವರಂ ವೇದಶಾಸ್ತ್ರಾ-**
**ಣ್ಯಧ್ಯಾಪ್ಯೈನಂ ಪರಿಣತಮತಿಂ ರಾಘವೇಶಸ್ತ್ವಕಾರ್ಷೀತ್ ॥೩೮**

* ಇದು ಹೊನ್ನಾವರ ತಾಲ್ಲೂಕಿನಲ್ಲಿದೆ ಗೋಕರ್ಣದ ರಘೂತ್ತಮ ಮಠದ ೧೧ನೆಯ ಗುರುಗಳಾದ ರಾಘವೇಶ್ವರಭಾರತೀಗಳ ಎರಡನೆಯ ಶಿಷ್ಯರಾದ ರಘೂತ್ತಮಭಾರತೀಗಳಿಂದ ೧೩ನೆಯವರಾದ ರಾಘವೇಶ್ವರಭಾರತೀಗಳ ತನಕ ನಡೆಯಿತು. ಬಳಿಕ ಕೊನೆಯ ರಾಘವೇಶ್ವರ ಭಾರತೀಗಳ ಕಾಲದಲ್ಲಿ ಇದು ಪ್ರಧಾನಮಠಕ್ಕೆ ಸೇರಿತು. ಅಲ್ಲಿಂದ ಇಲ್ಲಿ ಮತ್ತೆ ಸಂನ್ಯಾಸಿಗಳು ಬೇರೆ ಆಗಲಿಲ್ಲ ಹಿರಿ ಒಡೆಯರು ಎಂದು ಪ್ರಸಿದ್ಧರಾದ ರಾಘವೇಶ್ವರಭಾರತೀಗಳೇ ಬಾಲಕ ರಾಮಚಂದ್ರಭಾರತೀಗಳಿಗೆ ವಿದ್ಯಾಭ್ಯಾಸಮಾಡಿಸಿದ್ದು ಅವರು ರಾಮಚಂದ್ರಾಪುರದ ಮಠದಲ್ಲಿಯೇ ಉಳಿದಿದ್ದರು.

ಪ್ರಧಾನಮಠವಾದ ಶ್ರೀ ರಾಮಚಂದ್ರಾಪುರದಲ್ಲಿರುವ ಮಠಕ್ಕೆ ಅಧೀನವಾಗಿದ್ದ ಕೆಕ್ಕಾರಿನ ರಘೂತ್ತಮಮಠದ ಅಂದಿನಸ್ವಾಮಿಗಳಾಗಿದ್ದ ರಾಘವೇಶ್ವರ ಭಾರತೀಗಳು ಮಠದ ಆಡಳಿತದಲ್ಲಿ ಅನುಭವಿಗಳೂ, ವಯೋವೃದ್ಧರೂ ಜ್ಞಾನವೃದ್ಧರೂ ಆಗಿದ್ದರು ಈ ಸಮಯದಲ್ಲಿ ಅವರು ರಾಮಚಂದ್ರಾಪುರದ ಮಠದಲ್ಲಿ ಇದ್ದು ಮಠಕ್ಕೆ ಸಂಬಂಧಿಸಿದ ಅತ್ಯವಶ್ಯಕವೂ ಯೋಗ್ಯವೂ ಆದ ಕಾರ್ಯಕಲಾಪಗಳನ್ನು ಆಯಾ ಕಾಲದಲ್ಲಿ ಪುನಃ ಪುನಃ ಚೆನ್ನಾಗಿ ಮಾಡಿಸುತ್ತಾ ಇಲ್ಲಿಯೇ ಉಳಿದಿದ್ದರು. ಅವರು ರಾಮಚಂದ್ರಾಪುರಮಠಾಧಿಪತಿಗಳ ಪೀಠದಲ್ಲಿ ಉಪಸ್ಥಿತರಾಗಿದ್ದ ಬಾಲಕ ರಾಮಚಂದ್ರಭಾರತೀಗಳಿಗೆ ವೇದ ಮತ್ತು ಶಾಸ್ತ್ರಗಳಲ್ಲಿ ತಾವೇ ಅಧ್ಯಾಪನ ಮಾಡಿಸಿದರು. ಅಲ್ಲದೆ ಅವರನ್ನು ಎಲ್ಲವಿಷಯಗಳಲ್ಲಿಯೂ ಒಳ್ಳೆಯ ಧೀಮಂತರನ್ನಾಗಿ ಮಾಡಿದರು.

**ಕಾಲೇ ತಸ್ಮಿನ್ನಿತರಮಠಪೀಠೇಶ್ವರೈ ರಾಜಕೀಯಃ**
**ಕೋಽಪ್ಯಸ್ಯಾಸೀನ್ನಿಜಗುರುಕುಲಾಯತ್ತದಾಯೋ ವಿವಾದಃ ।**
**ರಾಜಾ ನ್ಯಾಯ್ಯೇ ಪಥಿ ಕೃತಪದಃ ಕೃಷ್ಣರಾಜ ಸ್ತೃತೀಯಃ**
**ಪ್ರತ್ಯಾಚಖ್ಯಾವಿತರಮಠಪೀಠಾಧಿಪಾಪಾದನೋಕ್ತೀಃ॥ ೩೯**

ಆ ಕಾಲದಲ್ಲಿ ಈ ರಾಮಚಂದ್ರಭಾರತೀಸ್ವಾಮಿಗಳಿಗೆ ತಮ್ಮ ಗುರು ಪರಂಪರೆಯಿಂದ ಸ್ವಾಧೀನದಲ್ಲಿರುವ ಆಸ್ತಿ ಪಾಸ್ತಿ ಹಕ್ಕುಬಾಧ್ಯತೆ, ಗೌರವ ಘನತೆ ಮಾನಮರ್ಯಾದೆ ಮುಂತಾದವುಗಳ ವಿಷಯದಲ್ಲಿ ಶಾಂಕರ ಸಂಪ್ರದಾಯಕ್ಕೆ ಸೇರಿದ ಇತರ ಮಠದ ಸ್ವಾಮಿಗಳೊಂದಿಗೆ ಯಾವುದೋ ಒಂದು ರಾಜಕೀಯವ್ಯವಹಾರವು ನ್ಯಾಯಾಲಯದಲ್ಲಿ ಇತ್ತು (ಕೆಳ ಕೋರ್ಟಿನಲ್ಲಿ ಪ್ರತಿವಾದಿ ಮಠಾಧಿಪತಿಗಳ ಆಪಾದನೆಗಳಿಗೆ ಅಪಜಯವು ಉಂಟಾಗುವುದರಲ್ಲಿ ಇತ್ತು. ಅಷ್ಟು ಹೊತ್ತಿಗೆ ಶ್ರೀರಾಮಚಂದ್ರಾಪುರದ ಮಠಾಧೀಶರ ದೂರು ಅಂದಿನ ಮೈಸೂರಿನ ಮಹಾರಾಜರಾದ ಮುಮ್ಮಡಿ ಕೃಷ್ಣರಾಜರ ಸನ್ನಿಧಿಗೆ ನ್ಯಾಯದ ತೀರ್ಮಾನದ ಬಗ್ಗೆ ಹೋಯಿತು.) ಅದು ಶ್ರೀ ಮನ್ಮಹಾರಾಜ ಮುಮ್ಮಡಿ ಕೃಷ್ಣರಾಜರ ಆಸ್ಥಾನದಲ್ಲಿ ಪಕ್ಷಪಾತವಿಲ್ಲದೆ ಪರಿಶೀಲಿಸಲ್ಪಟ್ಟಿತು ನ್ಯಾಯಮಾರ್ಗದಲ್ಲಿ ಹೆಜ್ಜೆತಪ್ಪದ ಮಹಾರಾಜರು ಇತರ ಪೀಠಾಧಿಪತಿಗಳು ಇವರ ಮೇಲೆ ಹೊರಸಿದ ಆಪಾದನೆಗಳನ್ನು ತಳ್ಳಿಹಾಕಿದರು. ಮತ್ತು ಶ್ರೀ ರಾಮಚಂದ್ರಾಪುರಮಠದ ಘನತೆ ಗೌರವಗಳಿಗೆ ಕುಂದು ಬರದಂತೆ ವ್ಯವಸ್ಥೆಮಾಡಿ ಮಠದ ಮರ್ಯಾದೆಯನ್ನು ಮೊದಲಿನಂತೆ ಉಳಿಸಿಕೊಟ್ಟರು

**ವ್ಯಾಖ್ಯಾಸಿಂಹಾಸನಮಧಿಶಯಾನಸ್ಯ ಚೈತಸ್ಯ ಭಿಕ್ಷೋಃ**
**ಹಸ್ತಾಯತ್ತಂ ಹ್ಯಭವದಥ ಕೆಕ್ಕಾರು ಮಠಾಧಿಪತ್ಯಮ್ ।**
**ಕ್ಷಾಂತಸ್ತೇನ ಪ್ರಶಮ ನಿಧಿನಾ ಶಿಷ್ಯವೃಂದಾಪರಾಧಃ**
**ಪ್ರಾಯಶ್ಚಾಯುರ್ವ್ಯಯಿತಮಮುನಾ ಕಂಟಕೋದ್ಧಾರಣೇಷು ॥**

ಶ್ರೀರಾಮಚಂದ್ರಾಪುರದ ಮಠದಲ್ಲಿ ವಾಸಿಸುತ್ತಾ ಬಾಲಕ ರಾಮಚಂದ್ರ ಭಾರತೀಗಳಿಗೆ ವಿದ್ಯಾಭ್ಯಾಸಮಾಡಿಸುತ್ತಾ ಇದ್ದ ಕೆಕ್ಕಾರಿನ ಶ್ರೀ ರಘೂತ್ತಮಮಠದ ಯತಿಯು ರಾಮೇಶ್ವರ ಭಾರತೀಗಳು (ಹಿರೆ ಒಡೆಯರು) ಬ್ರಹ್ಮೀಭೂತರಾದ ಬಳಿಕ ಕೆಕ್ಕಾರಿನ ರಘೂತ್ತಮಮಠದ ಒಡೆತನವು ಆಗ ರಾಮಚಂದ್ರಾಪುರದ ಆಚಾರ್ಯ ಪೀಠವನ್ನು ಅಲಂಕರಿಸಿದ್ದ ಶ್ರೀ ರಾಮಚಂದ್ರ ಭಾರತೀ ಸ್ವಾಮಿಗಳ ಕಡೆಗೆ ಬಂದಿತು. ಅದರ ಸರ್ವಸ್ವವೂ ಈವರೆಗೂ ರಾಮಚಂದ್ರಾಪುರಮಠದ ಸ್ವಾಮಿತ್ವಕ್ಕೆ ಸೇರಿದು ದಾಗಿದೆ. ಅತ್ಯಂತ ಪ್ರಶಾಂತರಾದ ಈ ಗುರುಗಳು, ಶಿಷ್ಯವೃಂದದವರು ತಿಳಿಯದೇ ಮಾಡಿದ ಅಪರಾಧಗಳನ್ನು ಕ್ಷಮಿಸುತ್ತಲೇ ಬಂದರು. ಸಾಮಾನ್ಯವಾಗಿ ಇವರ ಜೀವಿತಕಾಲವೆಲ್ಲಾ ತಮ್ಮ ಮಠದ ಸ್ವಾಮಿತ್ವ, ಗೌರವ ಸ್ಥಾನ ಮಾನಗಳಿಗೆ ಧಕ್ಕೆ ಯನ್ನುಂಟುಮಾಡುವ ವಿರೋಧಿಗಳ ಮುಳ್ಳು ತೆಗೆಯುವುದರಲ್ಲಿಯೇ ಸವ ಯಿತೆಂದು ಹೇಳಬಹುದು.

> ಸೋಽಯಂ ಶಿಷ್ಯಂ ಯತಿಪತಿಪದೇ ರಾಘವೇಂದ್ರಂ ನಿವೇಶ್ಯ
> ಬ್ರಹ್ಮೀಭೂತಸ್ತದನು ಗುರುರಾಡ್ ಭಾರತೀ ರಾಮಚಂದ್ರಃ ।
> ಕಾಶ್ಯಾಮಧ್ಯೈಷ್ಟ ಚ ಗುರುಕುಲೇ ರಾಘವೇಂದ್ರಃ ಪರಿವ್ರಾಡ್
> ದ್ವೇ ಮೀಮಾಂಸೇ ಅಪಿ ಚ ಕುಶಲೀ ಚಾಕ್ಷಪಾದೀಯಶಾಸ್ತ್ರಮ್॥

ತಮ್ಮ ಜೀವಿತಕಾಲವನ್ನು ಮಠದ ವ್ಯವಸ್ಥೆಗಾಗಿ ಸವೆಸಿದ ಆ ರಾಮಚಂದ್ರ ಭಾರತೀಸ್ವಾಮಿಗಳು ತಮ್ಮ ಶಿಷ್ಯರಾದ ಚಿಕ್ಕ ವಯಸ್ಸಿನ ರಾಘವೇಂದ್ರಭಾರತೀ ಗಳನ್ನು ತಮ್ಮ ಉತ್ತರಾಧಿಕಾರಿಯಾಗಿ ಪೀಠಕ್ಕೆ ನೇಮಿಸಿ ಮುಕ್ತರಾದರು. ಬಳಿಕ ಬುದ್ಧಿಶಾಲಿ ಬಾಲಕ ರಾಘವೇಂದ್ರ ಭಾರತೀಸ್ವಾಮಿಗಳು ವಿದ್ಯಾರ್ಜನೆಗಾಗಿ ಕಾಶಿಗೆ ಹೋದರು ಅವರು ಅಲ್ಲಿರುವ ಗುರುಕುಲದಲ್ಲಿ ಮೀಮಾಂಸಾ, ವೇದಾಂತ, ತರ್ಕಶಾಸ್ತ್ರಗಳನ್ನು ಸಾಂಪ್ರದಾಯಿಕವಾಗಿ ಓದಿದರು.

> ಸಾಂಗಂ ವೇದಂ ವಿಧಿವದವಗತ್ಯಾತ್ಮವಿದ್ಯಾಪದಾತಃ
> ಸಾಂಖ್ಯಂ ಯೋಗಂ ತದನು ಮತಿಮಾನ್ ಪಾಣಿನೀಯಂ ಪಪಾಠ।
> ಕಾಶೀನಾಥಪ್ರಣಮನಪರಸ್ತತ್ಕಥಾಸ್ವಾದಲುಬ್ಧಃ
> ಸೋಽಯಂ ಕಾಶ್ಯಾಂ ಕತಿಪಯ ಸಮಾಶ್ಚಾನುಗಂಗಂ
> ನ್ಯವಾತ್ಸೀತ್ ॥೪೨

ಬಳಿಕ ಕುಶಲಮತಿಗಳಾದ ಅವರು ವೇದ ಮತ್ತು ವೇದಾಂಗಗಳನ್ನು ವಿಧಿ ವತ್ತಾಗಿ ಅಭ್ಯಾಸಮಾಡಿದರು. ಸಾಂಖ್ಯ, ಯೋಗ, ಪಾಣಿನೀಯವ್ಯಾಕರಣ ಶಾಸ್ತ್ರಗಳನ್ನೂ ಓದಿದರು. ಬ್ರಹ್ಮವಿದ್ಯೆಯಿಂದ ಶುದ್ಧಮನಸ್ಕರಾದ ಇವರು

ಕಾಶೀವಿಶ್ವನಾಥಸ್ವಾಮಿಗೆ ನಮಸ್ಕರಿಸುತ್ತಾ ದಿನವೂ ಶಿವಮಹಿಮೆಯ ಕಥಾಸುಧೆಯನ್ನು ಆಸ್ವಾದಿಸುತ್ತಾ ಗಂಗೆಯ ದಡದ ಉದ್ದಕ್ಕೂ ಹರಡಿದ ಕಾಶಿಯಲ್ಲಿ ಕೆಲವು ವರ್ಷಗಳ ತನಕ ನೆಲೆಸಿದ್ದರು.

**ವಾರಾಣಸ್ಯಾಮಥ ನಿವಸತೋ ರಾಘವೇಂದ್ರಸ್ಯ ತಸ್ಯ**
**ಪ್ರಜ್ಞಾವತ್ತಾಮತಿಶಯತಪಸ್ಸಿದ್ಧಿಮಾರ್ತಾನುಕಂಪಾಮ್ ।**
**ಶ್ರುತ್ವಾ ಚಾಸ್ಮೈ ಸಪದಿ ಗುರವೇ ಹ್ಯಾಂಗ್ಲರಾಜಾಧಿನೇತಾ**
**ಸರ್ವೋತ್ಕೃಷ್ಟಾಂ ನೃಪತಿಮಹಿತಾಮರ್ಹಣಾಮಾಜಹಾರ ॥೪೩**

ಆ ರಾಘವೇಂದ್ರಭಾರತೀಸ್ವಾಮಿಗಳು ಕಾಶಿಯಲ್ಲಿರುವ ಸಮಯದಲ್ಲಿ ಬ್ರಿಟಿಷರ ಆಳ್ವಿಕೆಯಿತ್ತು. ಸ್ವಾಮಿಗಳ ಅಸಾಧಾರಣ ಪ್ರತಿಭೆ, ಅತಿಶಯ ತಪಸ್ಸಿದ್ಧಿ, ದೀನರ ಮೇಲಣ ದಯೆ ಮುಂತಾದ ಸದ್ಗುಣಗಳ ವಿಷಯಕವಾದ ವಾರ್ತೆಯು ಕಿವಿಯಿಂದ ಕಿವಿಗೆ ಮುಟ್ಟುತ್ತಾ ಅಂದಿನ ಭಾರತದ ಬ್ರಿಟಿಷ್ ವೈಸರಾಯ್ ಅಧಿಕಾರಿಯ ಕಿವಿಗೂ ಬಿತ್ತು. ಈ ವಾರ್ತೆಯಿಂದ ಆಂಗ್ಲ ಅಧಿಕಾರಿಗೆ ಸ್ವಾಮಿಗಳನ್ನು ಸಂದರ್ಶಿಸಬೇಕೆಂದು ಉತ್ಕಟಕುತೂಹಲವುಂಟಾಯಿತು. ಅವರು ಶ್ರೀ ಸ್ವಾಮಿಗಳನ್ನು ಸಂದರ್ಶಿಸಿ ಮೆಚ್ಚಿ ಅವರಿಗೆ ಸರ್ವೋತ್ಕೃಷ್ಟವಾದ ರಾಜಮರ್ಯಾದೆ ಮಾಡಿದರು.

**ಲೋಕಕ್ಷೇಮಾದ್ಯವಹಿತಮನಾಃ ಕಾಲವಿಚ್ಚೈಷ ಯೋಗೀ**
**ಧರ್ಮಾಚಾರಪ್ರಸರಣ ವಿರೋಧ್ಯಂತರಂಗಂ ಬಿಭೇದ ।**
**ಲುಬ್ಧಾ ಅಸ್ಯ ಪ್ರವಚಸಿ ಸುಧಾಸ್ವಾದುನಿ ದ್ರಾಕ್ ಪ್ರಪನ್ನಾಃ**
**ಜಾತಾಃ ಕಾಮಂ ಮಧುನಿ ಮಧುಪಾಃ ಕೌಸುಮೇ ಲಬ್ಧವರ್ಣಾಃ॥**

ಕಾಲಜ್ಞರಾದ ರಾಘವೇಂದ್ರಭಾರತೀಗಳು ಲೋಕಕಲ್ಯಾಣಕರವಾದ ಕಾರ್ಯಗಳಲ್ಲಿ ಗಮನ ವಹಿಸುತ್ತಿದ್ದರು. ಅವರು ಸನಾತನ ಧರ್ಮದ ಪ್ರಚಾರಕ್ಕೆ ಅಡ್ಡಿ ತರುವ ನಾಸ್ತಿಕರ ಮನಸ್ಸನ್ನು ಒಲಿಸಿ ಅವರೊಡನೆ ವಿಚಾರವಿನಿಮಯಮಾಡಿ ಧರ್ಮದ ವಿಷಯದಲ್ಲಿ ಅವರಿಗಿದ್ದ ಭಿನ್ನಾಭಿಪ್ರಾಯವನ್ನು ಹೋಗಲಾಡಿಸುತ್ತಿದ್ದರು. ದುಃಖಿಗಳ ದುಃಖವನ್ನು ಹೋಗಲಾಡಿಸುವ ಅವರು ಒಳ್ಳೆಯ ಮಾತುಗಾರರು. ಸೊದೆಯನ್ನು ಸವಿದಂತಿರುವ ಅವರ ಪ್ರವಚನದ ವಿಷಯದಲ್ಲಿ ಪಂಡಿತರು ಹೂವಿನ ಮಕರಂದಕ್ಕೆ ಎಳಸುವ ದುಂಬಿಗಳಂತೆ ತಾವಾಗಿಯೇ ಅತ್ಯಂತ ಕುತೂಹಲಿಗಳಾಗಿದ್ದರು.

**ಭಿಕ್ಷುರ್ಗಂಗಾಧರ ಇತಿ ಪುರೀ ಸಂಜ್ಞ ಗೋವರ್ಧನೀಯಃ**
**ಕೋಽಪ್ಯಾಚಾರ್ಯೋ ನಿಜಗುರುಕುಲಪ್ರಾಪ್ತತುರ್ಯಾಶ್ರಮಶ್ರೀಃ ।**
***ಧ್ಯಾಯಂ ಧ್ಯಾಯಂ ನೃಹರಿಚರಣಾವದ್ವಯಾನಂದಭೂಮಾ**
**ತುಂಗಾರೋಧಸ್ಯಕೃತ ವಸತಿಂ ತೀರ್ಥಹಳ್ಳೀಪುರೇಽಸ್ಮಿನ್ ॥೪೫**

ಪುರೀ ಅಥವಾ ಜಗನ್ನಾಥದಲ್ಲಿರುವ ಪೂರ್ವಾಮ್ನಾಯ ಪೀಠದ ಗೋವರ್ಧನ ಮಠದ ಪರಂಪರೆಗೆ ಸೇರಿದ ಗಂಗಾಧರಪುರಿ ಎಂಬ ಹೆಸರಿನ ಸಂನ್ಯಾಸಿಗಳೊಬ್ಬರಿದ್ದರು. ಅವರಿಗೆ ತಮ್ಮ ಆಚಾರ್ಯ ಕುಲಕ್ಕೆ ಸೇರಿದವರಿಂದ ಸಂನ್ಯಾಸಾಶ್ರಮದಿಂದ ದೀಕ್ಷೆಯಾಗಿತ್ತು. ಅದ್ವೈತ ಬ್ರಹ್ಮಾನಂದಾನುಭವಿಗಳಾದ ಅವರು ಶ್ರೀ ಮಹಾವಿಷ್ಣುವಿನ ದಿವ್ಯಾವತಾರವಾದ ಶ್ರೀನರಸಿಂಹನನ್ನು ಬಾರಿ ಬಾರಿಗೂ ಧ್ಯಾನಿಸುತ್ತಾ ತುಂಗಾನದಿತೀರದಲ್ಲಿರುವ ತೀರ್ಥಹಳ್ಳಿಯಲ್ಲಿ ಮಠಮಾಡಿಕೊಂಡಿದ್ದರು.

**ತಚ್ಛಿಷ್ಯೋಽಭೂನ್ನಯವಿದಮರೇಂದ್ರಾಹ್ವಯೋ ಯಃ ಪರಿವ್ರಾಟ್**
**ಕಂಚಿತ್ಕಾಲಂ ಮಠಪತಿಕೃತೀರ್ನಿರ್ವಹನ್ ವೀತರಾಗಃ ।**
**ಸರ್ವಂ ರಿಕ್ಥಂ ಪ್ರಶಮನಿಧಯೇ ರಾಘವೇಂದ್ರಾಯ ಚಾಸ್ಮೈ**
**ದತ್ವಾ ಸೋಽಪಿ ನ್ಯವಸದಿಹ ತೇನಾರ್ಯವರ್ಯೇಣ ಸಾಕಮ್॥**

ಆ ಗಂಗಾಧರಪುರಿಗಳಿಗೆ ಅಮರೇಂದ್ರಪುರಿ ಎಂಬ ಸಂನ್ಯಾಸಿ ಶಿಷ್ಯರಿದ್ದರು. ಅವರು ಶಾಸ್ತ್ರಜ್ಞರು.ತಮ್ಮ ಗುರುಗಳು ಬ್ರಹ್ಮೀಭೂತರಾದಮೇಲೆ ಇವರು ಮಠದ ಸ್ವಾಮಿಗಳಾದರು. ಕೆಲವು ಕಾಲ ಮಠದ ಆಡಳಿತವನ್ನು ನಡೆಸಿದರು. ಸಹಜ ವಿರಕ್ತರಾದ ಆ ಅಮರೇಂದ್ರಪುರಿಗಳು ತಮ್ಮ ಮಠದ ಸ್ವಾಮಿತ್ವ ಹಾಗೂ ಎಲ್ಲ ಸಂಪತ್ತನ್ನೂ ರಾಮಚಂದ್ರಾಪುರದ ಮಠಾಧೀಶರಾಗಿದ್ದ ರಾಘವೇಂದ್ರಭಾರತೀ ಸ್ವಾಮಿಗಳಿಗೆ ವಹಿಸಿಕೊಟ್ಟರು. ಬಳಿಕ ಅವರು ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳ ಜೊತೆಗೆ ಶ್ರೀ ರಾಮಚಂದ್ರಾಪುರದ ಮಠದಲ್ಲಿಯೇ ಉಳಿದರು.

**ಪ್ರಜ್ಞಾಲೋಕಪ್ರಶಮಿತತಮೋವೃತ್ತಿಮಂತೇವಸಂತಂ**
**ಪೀಠೇ ಕೃತ್ವಾ ಸ್ವಯಮುಪಶಮೀ ರಾಘವೇಶಾಭಿಧಾನಮ್ ।**
**ಸತ್ಯಜ್ಞಾನಾಮೃತರಸಭರೇ ನಿರ್ವಿಕಲ್ಪೇ† ಸಮಾಧೌ**
**ಸ್ಥಿತ್ವಾ ವಿಷ್ಣೋಃ ಪದಮಯಮಗಾದ್ರಾಘವೇಂದ್ರೋ**
**ಯತೀಂದ್ರಃ ॥೪೭**

---

*ಆಭೀಕ್ಷ್ಣ್ಯೇ ಣಮುಲ್ (೩-೪-೨೨) (ಪೌನಃ ಪುನ್ಯೇ ಪೂರ್ವವಿಷಯೇ ಣಮುಲ್ ಕ್ತ್ವಾ ಚ) ಸ್ಮಾರಂ ಸ್ಮಾರಂ ನಮತಿ।

† ನಿರ್ವಿಕಲ್ಪಸಮಾಧಿ= ಜ್ಞಾತೃ ಮತ್ತು ಜ್ಞೇಯಗಳಭೇದ ತೋರದೇ ಚಿತ್ತವು ಧ್ಯೇಯವಸ್ತುವಿನಲ್ಲಿಯೇ ಲಯಹೊಂದುವುದು. ಇದು ಸಮಾಧಿಯ ಒಂದು ಭೇದ.

ಪರಮಶಾಂತರಾದ ರಾಘವೇಂದ್ರಭಾರತೀಸ್ವಾಮಿಗಳು ರಾಘವೇಶ್ವರಭಾರತೀ ಎಂಬ ಶಿಷ್ಯರನ್ನು ಸ್ವೀಕರಿಸಿದರು. ಆ ಶಿಷ್ಯರು ಜ್ಞಾನ ಪ್ರಕಾಶದಿಂದ ಅವಿದ್ಯೆಯನ್ನು ತಿರಸ್ಕರಿಸಿದ್ದರು, ಅಂತಹ ಜ್ಞಾನಿಗಳಾದ ಶಿಷ್ಯರನ್ನು ಆಚಾರ್ಯ ಪೀಠದಲ್ಲಿ ಕೂರಿಸಿದರು. ಆಮೇಲೆ ಅವರು ಸಚ್ಚಿದಾನಂದ ಪೂರ್ಣವಾದ ನಿರ್ವಿಕಲ್ಪ ಸಮಾಧಿಯೋಗದಲ್ಲಿದ್ದು ಮುಕ್ತಿಯನ್ನು ಪಡೆದರು.

ಲಬ್ಧ್ವಾ ಬಾಲಃ ಸ ಕಿಲ ವಯಸಾ ಷೋಡಶಸ್ತುರ್ಯದೀಕ್ಷಾ-
ಮಧ್ಯಾತ್ಮಶ್ರೀಚರಣರಣಿತಸ್ವರ್ಣಮಂಜೀರಹೂತಃ ।
ಪಾಂಡ್ಯಾನ್ಯಾತೋ ದ್ವಿಜಕುಲಶಿರೋರತ್ನವಾಸ್ತವ್ಯದೇಶಾನ್
ವಿದ್ಯಾಹೇತೋಃ ಕಿಲ ಯತಿಪತಿಸ್ತಾಮ್ರಪರ್ಣೀತಟೇಷು ॥೪೮

ಹದಿನಾರು ವಯಸ್ಸಿನ ಬಾಲಸಂನ್ಯಾಸಿ ಶ್ರೀರಾಘವೇಶ್ವರಭಾರತೀಸ್ವಾಮಿಗಳು ಅಧ್ಯಾತ್ಮ ಶ್ರೀಯ ಕಾಲಿನಲ್ಲಿ ದನಿಗೈಯುತ್ತಿರುವ ಬಂಗಾರದ ಕಾಲಂದುಗೆಯಿಂದ ಕರೆಯಲ್ಪಟ್ಟವರಾಗಿ, ವಿದ್ಯಾರ್ಜನೆಗಾಗಿ ಪಾಂಡ್ಯದೇಶಕ್ಕೆ ಹೋದರು. ಪಾಂಡ್ಯ ದೇಶದ ತಾಮ್ರಪರ್ಣೀತೀರಗಳಲ್ಲಿರುವ ಅಗ್ರಹಾರಗಳಲ್ಲಿ ವೇದ ವೇದಾಂಗ ಪಾರಂಗತರಾದ ಬ್ರಾಹ್ಮಣಶ್ರೇಷ್ಠರ ಕುಟುಂಬಗಳು ವಾಸಿಸುತ್ತಿದ್ದವು

ವಿದ್ವದ್ವರ್ಯೈಃ ಪರಿಗತಭುವಸ್ತಿನ್ನವಲ್ಯಾದಿಪಲ್ಲೀಃ
ಗತ್ವಾ ಕಾಂಚೀಂ ಶಿವಸಹಚರೀ ಮಧ್ಯ*ಕಾಂಚೀಮಿವಾಸೌ ।
ಪ್ರಾಪ್ಯಾದ್ವೈತಪ್ರವಚನಪರಾಣ್ಯಧ್ಯಗೀಷ್ಟಾಥ ಭಾಷ್ಯಾ-
ಣ್ಯಾಚಾರ್ಯಸ್ಯ ಪ್ರಥಿತಯಶಸಶ್ಶಂಕರಸ್ಯಾಖಿಲಾನಿ ॥ ೪೯

ಪಾಂಡ್ಯದೇಶಕ್ಕೆ ಪ್ರಯಾಣಮಾಡಿದ ಗುರುವರ್ಯರು ಶ್ರೇಷ್ಠವಿದ್ವಾಂಸರೂ ಶ್ರೋತ್ರೀಯರೂ ವೇದ ವೇದಾಂಗ ಪಾರಂಗತರೂ ಆದ ಬ್ರಾಹ್ಮಣರು ವಾಸಿಸುತ್ತಿದ್ದ ತಾಮ್ರಪರ್ಣೀತೀರದ ಅಗ್ರಹಾರಗಳಿಗೂ ತಿನ್ನವಲ್ಲಿ ಮುಂತಾದ ಹಳ್ಳಿಗಳಿಗೂ ಹೋದರು. ಮತ್ತು ಅವರು ಶ್ರೀ ಕಾಮೇಶ್ವರನ ಸಹಚರಿಯಾದ ಕಾಮಾಕ್ಷೀದೇವಿಯ ನಡುವಿನ ಕಾಂಚಿಯಂತಿರುವ ಕಾಂಚೀ ನಗರಕ್ಕೂ ಹೋದರು. ಈ ಎಲ್ಲಾ ಕಡೆಗಳಲ್ಲೂ ಅವರು ವಿದ್ಯಾಭ್ಯಾಸಮಾಡಿದರು. ಕೀರ್ತಿಶಾಲಿಗಳಾದ ಶ್ರೀಮಚ್ಛಂಕರಭಗವತ್ಪಾದರ ಎಲ್ಲಾ ಅದ್ವೈತವೇದಾಂತದ ಪ್ರಕರಣ ಗ್ರಂಥಗಳನ್ನೂ ಪ್ರಸ್ಥಾನತ್ರಯವನ್ನೂ ಸಹ ಶಂಕರಭಾಷ್ಯಸಹಿತವಾಗಿ ಅಧ್ಯಯನ ಮಾಡಿದರು.

---

* ಕಾಂಚೀ= ಡಾಬು, ಕಾಂಚೀನಗರ, ಮಧ್ಯ= ಸೊಂಟ

**ಶಾಬ್ದಂ ಪಾತಂಜಲಮುಯುಮುದಾರಂ ಸ ಭಾಷ್ಯಂ ಪಠಿತ್ವಾ**
**ಸ್ವಾನುಷ್ಠಾನೋಪಹಿತಫಲದಂ ಯೋಗಶಾಸ್ತ್ರಂ ವಿದಿತ್ವಾ ।**
**ಸಾಂಖ್ಯಂ ನ್ಯಾಯಂ ತ್ವಧಿಗುರುಕುಲಂ ಗೌತಮಂ ಜೈಮಿನೀಯಂ**
**ಜ್ಞಾತ್ವಾ ಚಾಭೂದ್ವಿಬುಧಪರಿಷನ್ಮಾನನೀಯೋ ಯತೀಂದುಃ ॥**

ಶ್ರೀಗುರುಗಳು ಅಲ್ಲಿರುವ ಗುರುಕುಲದಲ್ಲಿ ಪಾಣಿನೀಯವ್ಯಾಕರಣಸೂತ್ರಗಳಿಗೆ ಅನುಗುಣವಾದ ಪಾತಂಜಲಮುನಿಪ್ರಣೀತವಾದ ವ್ಯಾಕರಣ ಮಹಾಭಾಷ್ಯವನ್ನು ಓದಿದರು. ಬಹುಕಾಲ ಅತ್ಯಂತ ಶ್ರದ್ಧೆಯಿಂದ ಅನುಷ್ಠಾನಮಾಡಲು ಫಲಕಾರಿಯಾದ ಯೋಗಶಾಸ್ತ್ರವನ್ನು ಅಭ್ಯಾಸಮಾಡಿ ತಿಳಿದರು. ಬಳಿಕ ಕಪಿಲಮುನಿ ಪ್ರಣೀತವಾದ ಸಾಂಖ್ಯಶಾಸ್ತ್ರ,ಗೌತಮಮುನಿ ಪ್ರಣೀತ ನ್ಯಾಯಶಾಸ್ತ್ರ ಮತ್ತು ಜೈಮಿನಿ ಮುನಿ ಪ್ರಣೀತ ಮೀಮಾಂಸಾಶಾಸ್ತ್ರಗಳನ್ನು ಓದಿ ತಿಳಿದರು. ಅನಂತರ ವಿದ್ವಾಂಸರಾದ ಶ್ರೀರಾಘವೇಶ್ವರಭಾರತೀಸ್ವಾಮಿಗಳು ಪಂಡಿತಮಂಡಲಿಯ ಸಂಮಾನ್ಯರೂ ಆಗಿದ್ದರು.

**ಕಂಚಿತ್ಕಾಲಂ ಹ್ಯಧಿನಿವಸತೋ ರಾಘವೇಶಸ್ಯ ಕಾಂಚೀ-**
**ಮಸ್ಯಾ ರಾಜಾ ಖಲು ಯತಿಪತೇರಸ್ಯ ಪಾದಾನತೋಽಭೂತ್ ।**
**ನೀತ್ವಾ ಗೇಹಂ ನೃಪತಿರನಘಂ ಪೂಜಯಿತ್ವಾ ತಮೇನಂ**
**ಭಕ್ತ್ಯಾಽಮುಷ್ಮೈ ವ್ಯತರದುಪದಾಂ ಕುಂಜರಂ ಕಾಂಚನಾದ್ಯೈಃ॥**

ಜಗದ್ಗುರುಗಳಾದ ಶ್ರೀರಾಘವೇಶ್ವರಭಾರತೀಸ್ವಾಮಿಗಳು ಕೆಲವುಕಾಲ ಕಾಂಚೀನಗರದಲ್ಲಿ ವಾಸಿಸಿದ್ದರು. ಆಗ ಅಲ್ಲಿಯ ಅರಸನು ಸ್ವಾಮಿಗಳನ್ನು ದರ್ಶನ ಮಾಡಿದನು. ಶ್ರೀಗಳವರನ್ನು ಮರ್ಯಾದಾಪೂರ್ವಕವಾಗಿ ಅರಮನೆಗೆ ಬರಮಾಡಿಕೊಂಡು ಅತ್ಯಂತಭಕ್ತಿಯಿಂದ ಪೂಜಿಸಿದನು ಪಾದಗಾಣಿಕೆಯಾಗಿ ಅಪಾರ ಸುವರ್ಣರತ್ನಾದಿಗಳನ್ನು ಅರ್ಪಿಸಿದುದಲ್ಲದೆ ಸ್ವಾಮಿಗಳ ಗೌರವಾರ್ಥವಾಗಿ ಉತ್ತಮವಾದ ಆನೆಯೊಂದನ್ನೂ ಶ್ರೀಗಳವರ ಪಾದಕ್ಕೆ ಒಪ್ಪಿಸಿದನು.

**ಏವಂ ರಾಜ್ಞಾ ಕಿಲ ವಿನಯಿನಾ ಮಾನಿತೋಽಸೌ ಯತೀಶೋ**
**ವಿದ್ಯಾಸ್ನಾತಃ ಪ್ರತಿನಿವವೃತೇ ಕಾಂಚಿಕಾಯಾಃ ಸ್ವಧಾಮ ।**
**ಯೋಗಾಭ್ಯಾಸಪ್ರವಣಮನಸಾ ರಾಮಪಾದಾಂಬುಜಶ್ರೀ-**
**ಚಿಂತಾಸಂತಾನಕಸುರಭಿಣಾ ರಾಘವೇಶೋ ನ್ಯವಾತ್ಸೀತ್ ॥೫೨**

ಹೀಗೆ ಅತ್ಯಂತ ವಿಧೇಯನಾದ ಕಾಂಚಿಯ ಮಹಾರಾಜನಿಂದ ಸನ್ಮಾನಿತರಾದ ಯತಿವರ್ಯರು ವಿದ್ಯಾಭ್ಯಾಸವನ್ನು ಪೂರೈಸಿ ಗುರುಕುಲದಿಂದ ಬೀಳ್ಕೊಟ್ಟು ಕಾಂಚಿ

ಯಿಂದ ರಾಮಚಂದ್ರಾಪುರಕ್ಕೆ ಹಿಂತಿರುಗಿದರು. ಇಲ್ಲಿಗೆ ಬಂದ ಮೇಲೆ ಶ್ರೀ ರಾಘವೇಶ್ವರಭಾರತೀಗಳು ಶ್ರೀರಾಮನ ಅಡಿದಾವರೆಯು ನಿರಂತರವಾದ ದಿವ್ಯಧ್ಯಾನದಿಂದ ಮನೋಹರವೂ ಯೋಗಾಭ್ಯಾಸದಲ್ಲಿ ನಿರತವೂ ಆದ ಮನಸ್ಸಿನಿಂದ ವಾಸಿಸುತ್ತಿದ್ದರು. (ಅಥವಾ ಶ್ರೀರಾಮನ ಪಾದಪದ್ಮದ ದೈವೀಸಂಪತ್ತಿನ ಧ್ಯಾನವೆಂಬ ದೇವಲೋಕದ ಸಂತಾನಕವೆಂಬ ವೃಕ್ಷದ ಆಶ್ರಯದಿಂದ ಸುಂದರವೂ ಅಷ್ಟಾಂಗಯೋಗಾಭ್ಯಾಸದಲ್ಲಿ ಆಸಕ್ತವೂ ಆದ ಮನಸ್ಸಿನವರಾಗಿ ಕಾಲ ಕಳೆಯುತ್ತಿದ್ದರು.)

ಅಕ್ಷ್ಣೋಃ ಕಾಣಃ ಕತಿಪಯದಿನೇಷ್ವರ್ದಿತಸ್ಸನ್ಮಸೂರ್ಯಾ-
ಯೋತಸ್ತ್ರ್ಯಕ್ಷಂ ಶಿಖರಿಣಿ ತಪೋ ದುಷ್ಕರಂ ಕರ್ತುಮೇಷಃ ।
ತಪ್ತ್ವಾ ಶಂಭೋರಲಭತ ಪುನಶ್ಚಕ್ಷುಷೀ ರಾಘವೇಶೋ
ಲೋಕೇ ಪುಂಸಾಂ ಕಿಮುತ ತಪಸಾ ದುಷ್ಕರೇಣಾಸ್ತ್ಯಲಭ್ಯಮ್ ॥

ಕೆಲವು ಕಾಲ ಕಳೆದ ಬಳಿಕ ಆಚಾರ್ಯರು ಪ್ಯೈಲಿ ರೋಗದಿಂದ ಪೀಡಿತರಾದುದರಿಂದ ಅವರಿಗೆ ಕಣ್ಣುಹೋಯಿತು. ಬಳಿಕ ಅವರು ಮುಕ್ಕಣ್ಣನಾದ ಶಿವನನ್ನು ಕುರಿತು ದುಷ್ಕರವಾದ ತಪಸ್ಸು ಮಾಡಲು ಕೊಡಚಾದ್ರಿ ಬೆಟ್ಟಕ್ಕೆ ಹೋದರು. ಕೊಡಚಾದ್ರಿಯಲ್ಲಿ ಶ್ರೀ ರಾಘವೇಶ್ವರಭಾರತೀಸ್ವಾಮಿಗಳು ತಪಸ್ಸುಮಾಡಿ ಪರಮೇಶ್ವರನಿಂದ ಹೋದ ಕಣ್ಣುಗಳೆರಡನ್ನೂ ತಿರುಗಿ ಪಡೆದರು. ಲೋಕದಲ್ಲಿ ಪುರುಷರಿಗೆ ದುಷ್ಕರವಾದ ತಪಸ್ಸಿನಿಂದ ದೊರಕದಿರುವ ಇಷ್ಟಾರ್ಥವು ಯಾವುದಿದೆ ?

ಸೋಽಯಂ ಜಾತು ಶ್ರಿತಬುಧಜನಪ್ರಾರ್ಥನಾಂ ಸಾರ್ಥಯಿಷ್ಯನ್
ಸೋಪಗ್ರಾಹ್ಯೈರ್ನಿಖಿಲಬಿರುದೈರನ್ವಿತಃ ಸಂಭ್ರಮೇಣ ।
ಧರ್ಮಾಚಾರ್ಯೈಃ ಪ್ರತಿಹಿತಪಥೇ ಸ್ಥಾಪಯಿಷ್ಯನ್ ಸ್ವಶಿಷ್ಯಾನ್
ಗ್ರಾಮಗ್ರಾಮಾನ್ಯತಿಪತಿರಭೋ ರಾಘವೇಶಃ ಪ್ರತಸ್ಥೇ ॥ ೩೪

ತಪಸ್ಸಿನಿಂದ ಹೋದ ಕಣ್ಣುಪಡೆದ ಈ ಸ್ವಾಮಿಗಳ ಹತ್ತಿರ ಶಿಷ್ಯರಾದ ವೈದಿಕ ಗೃಹಸ್ಥರು ಬಂದು ತಮ್ಮ ಸೀಮೆಗೆ ಸವಾರಿ ಬರಬೇಕೆಂದು ಪ್ರಾರ್ಥಿಸಿಕೊಂಡರು. ಶಿಷ್ಯಪ್ರಿಯರಾದ ಸ್ವಾಮಿಗಳು ಶಿಷ್ಯಕೋರಿಕೆಯನ್ನು ನೆರವೇರಿಸ ಬಯಸಿದರು. ಬಳಿಕ ಧರ್ಮಾಚಾರ್ಯರಾದ ಶ್ರೀರಾಘವೇಶ್ವರಭಾರತೀಗಳು ಶಿಷ್ಯರಿಗೆ ಉಪದೇಶಮಾಡಿ ಅವರನ್ನು ವೈದಿಕಧರ್ಮಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವ ಸದುದ್ದೇಶದಿಂದ ಆನೆ, ಪಲ್ಲಕ್ಕಿ, ಛತ್ರಿ ಚಾಮರ, ದೀವಟಿಗೆ ಮುಂತಾದ

ಮಠದ ಮರ್ಯಾದೆಯ ಚಿಹ್ನೆ ಬಿರುದು ಬಾವಲಿ ಪ್ರಶಸ್ತಿ, ಪರಿವಾರಗಳೊಂದಿಗೆ ಗ್ರಾಮಸಮೂಹಗಳನ್ನು ಕುರಿತು ಸಂಚಾರ ಹೊರಟರು

ಮಧ್ಯೇಮಾರ್ಗಂ ಪ್ರಣತವರದೋ ಗ್ರಾಮವೃದ್ಧಾನುಪೇತಾನ್
ಯೋಗಕ್ಷೇಮಂ ಕ್ರತುಷು ನಿಲಯಾದ್ಯೇಷ್ವಸೌ ಪರ್ಯಪೃಚ್ಛತ್ ।
ಭಕ್ತ್ಯಾ ಶಿಷ್ಯೈಃ ಸವಿಧಿ ಕೃತಮಾತಿಥ್ಯಮುಪ್ಯಾದದಾನಃ
ಕಸ್ಯಾಪ್ಯೇಕಸ್ಯಕೃತ ವಸತಿಂ ಪ್ರಾರ್ಥಿತೋಽಸೌ ಯತೀಂದ್ರಃ॥

ಗ್ರಾಮದಿಂದ ಗ್ರಾಮಕ್ಕೆ ಪ್ರಯಾಣಮಾಡುವಾಗ ನಡುದಾರಿಯಲ್ಲಿ ಸ್ವಾಮಿಗಳ ಭೇಟಿಗಾಗಿ ಆಯಾ ಗ್ರಾಮದ ಗೃಹಸ್ಥರು ಕಾದಿರುತ್ತಿದ್ದರು. ನಮಸ್ಕರಿಸಿದವರ ಇಷ್ಟಾರ್ಥಗಳನ್ನು ಸಲ್ಲಿಸುವ ಸ್ವಭಾವದ ಆಚಾರ್ಯರು ತಮ್ಮ ಬಳಿಗೆ ಬಂದ ಆಯಾ ಗ್ರಾಮಸೀಮೆಯ ವಯೋವೃದ್ಧರಾದ ಗೃಹಸ್ಥಶಿಷ್ಯರೊಡನೆ ಅವರ ಪೂಜೆ ಉಪಾಸನೆ ಆಚಾರಾದಿಗಳ ವಿಷಯದಲ್ಲಿಯೂ ಮನೆಯ ಕುಟುಂಬದ ವಿಷಯದಲ್ಲಿಯೂ ಯೋಗಕ್ಷೇಮವನ್ನು ಕೇಳಿದರು. ಶಿಷ್ಯರು ಭಕ್ತಿಯಿಂದ ವಿಧಿವತ್ತಾದಿ ಒಪ್ಪಿಸಿದ ಆತಿಥ್ಯ ಸ್ವೀಕರಿಸಿದರು. ಹೀಗೆ ಸಂಚಾರದಲ್ಲಿರುವಾಗ ಯಾರೋ ಒಬ್ಬ ಶಿಷ್ಯರು ಆಚಾರ್ಯರನ್ನು ತಮ್ಮ ಮನೆಗೆ ಬಂದು ವಸತಿ ಮಾಡಬೇಕೆಂದು ಕೇಳಿಕೊಂಡರು, ಸ್ವಾಮಿಗಳು ಅವರ ಕೋರಿಕೆಯಂತೆ ಒಂದು ರಾತ್ರಿ ಅವರ ಮನೆಯಲ್ಲಿ ಉಳಿದಿದ್ದರು.

ತತ್ರಾಕಸ್ಮಾದುಷಸಿ ತರಸಾಽಽಲಾನ ಮುತ್ಪಾಟ್ಯ ಹಸ್ತೀ
ದರ್ಪೋತ್ಸಿಕ್ತೋ ದ್ರುತಗತಿರಯಂ ಹಸ್ತಿಪೈರಪ್ಯನೇಯಃ।
ಕ್ರುದ್ಧೋ ಮಾರ್ಗೇ ಮಿಲಿತಜನತಾಂ ತ್ರಾಸಯನ್ ಧೂತಶುಂಡಃ
ಸ್ವೈರೀ ತೀವ್ರಂ ವ್ಯಚರದಚಿರಾನ್ಮುಕ್ತದಂಡೋ ಮರೀಯಃ ॥

ಅಲ್ಲಿ ಮರುದಿನ ಬೆಳಿಗ್ಗೆ ಮಠದ ಆನೆಯೊಂದು ಮದವೇರಿ ಕಟ್ಟಿದ್ದ ಗೂಟವನ್ನು ಬೇಗ ಕಿತ್ತು ವೇಗವಾಗಿ ಓಡತೊಡಗಿತು. ಮಾವಟಿಗರ ಹತೋಟಿಗೂ ಅದು ಸಿಕ್ಕಲಿಲ್ಲ ರೇಗಿದ ಆ ಆನೆ ಸೊಂಡಿಲನ್ನು ಅಲ್ಲಾಡಿಸುತ್ತಾ ದಾರಿಯಲ್ಲಿ ನೇರಿದ ಜನರನ್ನು ಹದರಿಸತೊಡಗಿತು. ಅಂಕುಶದ ಶಿಕ್ಷೆಗೂ ಬಗ್ಗದ ಆ ಮತ್ತ ಮತಂಗಜ ಬಹುಬೇಗ ಯಾರ ನಿಯಂತ್ರಣಕ್ಕೂ ಒಳಪಡದೆ ಭಯಂಕರವಾಗಿ ನುತ್ತಾಡುತ್ತಿತ್ತು.

ಆನೇತುಂ ಯಂ ಸ್ವವಶಮವಶಂ ನಾಶಕನ್ ಸಾದಿನಸ್ತೇ
ಮಾತಂಗಃ ಸ ಪ್ರಗುಣಿತಮದಃ ಪೂಗವಾಟೀಂ ಪ್ರವಿಶ್ಯ ।
ಕ್ಷಿಪ್ತ್ವಾ ವೃಕ್ಷಾಂಸ್ತದನು ಕದಲೀಕಾಂಡಲಾವಂ ಲವಿತ್ವಾ
ರುಷ್ಟಃ ಸೋಽಯಂ ಕ್ರಮುಕಕೃಷಿಕಾನ್
ಭೀಷಯಾಮಾಸ ಸರ್ವಾನ್ ॥

ಯಾವ ಆನೆಯನ್ನು ತಮ್ಮ ವಶಕ್ಕೆ ತಗೆದುಕೊಳ್ಳಲು ಮಾವಟಿಗರಿಗೂ ಸಾಧ್ಯವಾಗಲಿಲ್ಲವೋ, ಹುಚ್ಚು ಹಚ್ಚಾಗಿ ಸೊಕ್ಕಡರಿದ ಆ ಗಜ ಸುತ್ತಾಡುತ್ತಾ ಅಡಿಕ ತೋಟದ ಒಳ ಹೊಕ್ಕಿತು. ತೋಟದ ಒಳಗೆ ನುಗ್ಗುತ್ತಿದ್ದ ಹಾಗೆ ಅದು ಅಲ್ಲಿರುವ ಧೃಢವಾದ ಅಡಿಕೆ ಮರಗಳನ್ನು, ಬಾಳೆಯ ದಿಂಡುಗಳನ್ನು ಮುರಿದಹಾಗೆ ಮುರಿದುಹಾಕಲಾರಂಭಿಸಿತು ಕೋಪಗೊಂಡ ಗಜರಾಜ ಆ ತೋಟದಲ್ಲಿ ಕೆಲಸ ಮಾಡುತ್ತಿದ್ದ ಕೃಷಿಕಾರ್ಮಿಕರಲ್ಲರನ್ನೂ ಹೆದರಿಸಿ ಓಡಿಸಿತು.

ಆಚಾರ್ಯಸ್ತಂ ಸ ಕಿಲ ಕರಿಣಂ ದುರ್ನಿವಾರಂ ನಿಶಮ್ಯ
ತ್ರಸ್ತಂ ತಸ್ಮಾದಿಹ ಮಪಕಲಾಜ್ಜೀವಲೋಕಂ ನಿಶಾಮ್ಯ ।
ಸ್ಮೃತ್ವಾ ರಾಮಂ ಪ್ರಣಯಿಮಧುರಃ ಸರ್ವಭೂತಾಧಿವಾಸಂ
ಸರ್ವೇಷಾಮಪ್ಯಭಯಕೃದಸೌ ಸ್ವಾಸನಾಚ್ಚೋದತಿಷ್ಠತ್ ॥ ೫೮

ಮದವೇರಿ ತನ್ನಿಷ್ಟಬಂದಂತೆ ಓಡಾಡುತ್ತಿರುವ ಮರದ ಆನೆಯನ್ನು ತಡೆದು ನಿಲ್ಲಿಸಿ ಹತೋಟಿಗೆ ತರಲು ಯಾರಿಗೂ ಸಾಧ್ಯವಾಗುತ್ತಿಲ್ಲವೆಂಬ ಸುದ್ಧಿ ಸ್ವಾಮಿಗಳ ಕಿವಿಗೆ ಮುಟ್ಟಿತು. ಮದೋದ್ಧತವಾದ ಆ ಗಜರಾಜನ ದೆಸೆಯಿಂದ ಹೆದರಿ ಓಡುತ್ತಿರುವ ಜನ ಪಶು ಪ್ರಾಣಿವರ್ಗವನ್ನು ಕೂಡ ಆಚಾರ್ಯರು ಕಣ್ಣಾರೆಕಂಡರು. ಸರ್ವರಿಗೂ ಅಭಯಪ್ರದರೂ, ಭಕ್ತರಿಗ ಹಿತರೂ ಆಗಿದ್ದ ಶ್ರೀ ರಾಘವೇಶ್ವರ ಭಾರತೀಸ್ವಾಮಿಗಳು ಸರ್ವ ಪ್ರಾಣಿಗಳ ಅಂತರಂಗದಲ್ಲಿ ಸನ್ನಿಹಿತನಾದ ಪರಮಾತ್ಮನಾದ ಶ್ರೀರಾಮನನ್ನು ಸ್ಮರಿಸಿ ಕೂಡಲೇ ತಮ್ಮ ಪೀಠದಿಂದ ಮೇಲಕ್ಕೆ ಎದ್ದರು.

ಗತ್ವಾಭ್ಯರ್ಣಂ ಸ ಚ ಗಜಪತಿಂ ರಾಮಭದ್ರೇತಿ ಹೂತ್ವಾ
ಮಂದಂ ಮಂದಂ ನಿಜಕರತಲೇನಾಸ್ಪೃಶತ್ತಸ್ಯ ಹಸ್ತಮ್ ।
ಜ್ಞಾತ್ವಾ ಹಸ್ತಸ್ಪೃಶಮಥ ಗುರುಂ ಸೂಕ್ಷ್ಮವೇದೀ ಗಜೇಂದ್ರಃ
ಸ್ವಾಚಾರ್ಯಸ್ಯ ಪ್ರಣಯವಚಸಾ ಶಾಂತಚಿತ್ತೋ ಬಭೂವ ॥

ಅವರು ಆನೆಯ ಹತ್ತಿರ ಹೋಗಿ ‘ರಾಮಭದ್ರಾ !” ಎಂದು ಕರೆದು ಮೆಲ್ಲ ಮೆಲ್ಲನೆ ತಮ್ಮ ಕೈಯಿಂದ ಅದರ ಸೊಂಡಿಲನ್ನು ಮುಟ್ಟಿದರು. ಸೂಕ್ಷ್ಮಗ್ರಾಹಿಯಾದ

ಗಜೇಂದ್ರವು ತನ್ನನ್ನು ಕೈಯಿಂದ ಮುಟ್ಟಿದವರು ಗುರುಗಳೆಂದು ತಿಳಿದು ತನ್ನ ಸ್ವಾಮಿಗಳಾದ ಗುರುಗಳ ಪ್ರೇಮದ ಮಾತಿಗೆ ಪ್ರಸನ್ನಚಿತ್ತವಾಯಿತು.

**ಶಾಂತಃ ಸ್ವೈರಂ ತಮಿಹ ಗುರುರಾಡ್ ಹಸ್ತಿನಂ ಹಸ್ತದಂಡೇ**
**ಶಾಟ್ಯಾ ಬಧ್ವಾ ಭವನಮನಯದ್ ಗಾಮಿವಾಯಾಸಶೂನ್ಯಮ್ ।**
**ಆಚಾರ್ಯಸ್ಯಾಚರಿತಮಖಿಲಂ ಪಶ್ಯತಾಂ ಭೀತಿಭಾಜಾಂ**
**ಚಿತ್ತಂ ಚಿತ್ರೀಕೃತಮುಭಯತಃ ಸಂಸ್ಥಿತಾನಾಂ ಜನಾನಾಮ್ ॥**

ಶಾಂತರಾದ ಗುರುವರ್ಯರು ಸ್ವೇಚ್ಛೆಯಾಗಿ ತಿರುಗುತ್ತಿದ್ದ ಆನೆಯನ್ನು ತಮ್ಮ ಉತ್ತರೀಯವಾದ ಕಾವಿಬಟ್ಟೆಯಿಂದ ಸೊಂಡಿಲಿನಲ್ಲಿ ಕಟ್ಟಿ ಆಕಳಿನಂತೆ(ಹಸುವಿನಂತೆ) ಅನಾಯಾಸವಾಗಿ ಮನೆಗೆ ಎಳೆದುಕೊಂಡು ಬಂದರು. ಆಚಾರ್ಯರ ಈ ಎಲ್ಲಾ ನಡವಳಿಕೆಯನ್ನು ರಸ್ತೆಯ ಇಕ್ಕೆಲಗಳಲ್ಲಿ ನಿಂತಿರುವ ಭಯಗೊಂಡಿದ್ದ ನೋಡುತ್ತಿರುವ ಜನಗಳ ಮನಸ್ಸು ಬೆಕ್ಕಸಬೆರಗಾಯಿತು.

**ಸರ್ವತ್ರಾಪಿ ಶ್ವಪಚಶುನಕಬ್ರಾಹ್ಮಣೇಭಜ್ಞಗೋಷು**
**ಬ್ರಹ್ಮೈವೈತನ್ನಿಖಿಲಮಿತಿ ಸಂಪಶ್ಯತಾಂ ಸಂಯತಾನಾಮ್ ।**
**ರಾಗದ್ವೇಷಾದ್ಯನುಪಹತಧೀಗೋಚರೋ ನಾಸ್ತಿ ಚಾನ್ಯತ್**
**ಸ್ವಸ್ಮಾದ್ಯಸ್ಮಾತ್ ಪ್ರಕೃತಿಸರಲೋ ರಾಘವೇಶೇ ಗಜೋಽಭೂತ್ ॥**

ಜಾತಿ ಗುಣಧರ್ಮಗಳಿಂದ ಪರಮನಿಕೃಷ್ಟನೂ, ಶ್ವಪಾಕನೂ ಆದ ಚಂಡಾಲ, ಜಾತ್ಯಾದಿಗಳಿಂದ ಅತಿ ನಿಕೃಷ್ಟವೂ ತುಚ್ಛವಸ್ತುವನ್ನು ತಿನ್ನುವ ನಾಯಿ, ವೇದ ಶಾಸ್ತ್ರಗಳನ್ನು ಅಧ್ಯಯನ ಮಾಡಿದ ಸದಾಚಾರಿಯಾದ ಬ್ರಾಹ್ಮಣ, ರಾಜಪೂಜ್ಯವಾದ ಭದ್ರಗಜ, ಉಪಶಾಂತನಾದ ಜ್ಞಾನಿ, ಜಗತ್ತಿಗೆ ಪವಿತ್ರವಾದ ಗೋವು, ಮಣ್ಣು, ಕಲ್ಲು, ಬಂಗಾರ ಮುಂತಾದ ಎಲ್ಲವುಗಳಲ್ಲಿಯೂ ಆಕಾಶದಂತೆ ಏಕರೂಪವಾದ ಸಮರಸವಾದ ಪರಬ್ರಹ್ಮವನ್ನು ಸಾಕ್ಷಾತ್ಕರಿಸುವ, ಸಮದರ್ಶಿಗಳಾದ ಆತ್ಮಜ್ಞಾನಿಗಳ ನಿರ್ಮಲ ಬುದ್ಧಿಗೆ ಗೋಚರವಾಗುವ ವಸ್ತುವೆಂದರೆ ಬ್ರಹ್ಮವೊಂದೇ. ಅಂಥ ಜ್ಞಾನಿಗಳಿಗೆ ಸ್ವಸ್ವರೂಪ ಬ್ರಹ್ಮದ ಹೊರತು ಬೇರೆ ಯಾವುದೂ ವಿಷಯವಾಗುವುದಿಲ್ಲ. ಪ್ರಕೃತ, ಜ್ಞಾನಿಗಳಾದ ರಾಘವೇಶ್ವರಭಾರತೀಸ್ವಾಮಿಗಳು ಮದವೇರಿ ಸ್ವೇಚ್ಛೆಯಾಗಿ ತಿರುಗಾಡುತ್ತಿದ್ದ ಮರದ ಆನೆಯ ಹೃದಯದಲ್ಲಿ ಬ್ರಹ್ಮವಸ್ತುವನ್ನೇ ಕಂಡರು. "ಇದು ತನಗಿಂತ ಬೇರೆ" ಎಂಬ ದ್ವೈತ ಬುದ್ಧಿ ಅವರಿಗೆ ಆಗ ಉಂಟಾಗಲಿಲ್ಲ ಆನೆಗೂ ಇವರು ತನ್ನವರೆಂಬ ಗ್ರಹಿಕೆಯಾಗಿ ಗುರುಗಳಲ್ಲಿ ಭಕ್ತಿ ಮೂಡಿರಬಹುದು. ರಾಗ ದ್ವೇಷರಹಿತಚಿತ್ತರೂ ಸರ್ವರಿಗೂ ಅಭಯಪ್ರದರೂ ಪರಿವ್ರಾಜಕರೂ ಆದ ಆ ಗುರುಗಳ ಸನ್ನಿಧಿಯಲ್ಲಿ ಮಂದಿಸಿದ ಆ ಆನೆ ತನ್ನಷ್ಟಕ್ಕೇ ಸರಳವಾದದ್ದು ಆಶ್ಚರ್ಯ ವೇನಲ್ಲ.

**ಲೋಕೇ ಧಾತ್ರಾ ಯದಪಿ ನಿಖಿಲಂ ಶಬ್ದ ಜಾತಂ ವಿಸೃಷ್ಟಂ**
**ತತ್ತತ್ ಸ್ವಾರ್ಥಂ ನಿಯತಮಭಿಧತ್ತೇ ಹಿ ತೇನಾರ್ಥಸಿದ್ಧಿಃ ।**
**ಪ್ರತ್ಯಗ್ ದೃಷ್ಟ್ಯಾ ಕರಬದರವತ್ಪಶ್ಯತಾಂ ಭೂತಭವ್ಯಂ**
**ವಾಚಾಂ ಸಿದ್ಧಿಃ ಪರಿಣಮಯತೇ ಯೋಗಿನಾಂ ಧಾತೃಸೃಷ್ಟಮ್॥**

ಬ್ರಹ್ಮ ಸೃಷ್ಟಿಯಲ್ಲಿ ಅಭಿವ್ಯಕ್ತವಾದ ಜಾಗತಿಕ ಭಾಷೆಗಳ ಯಾವ ಯಾವ ಶಬ್ದ ರಾಶಿಗಳು ಇವೆಯೋ ಅವು ಆಯಾ ಭಾಷೆಯಲ್ಲಿ ತಮ್ಮ ತಮ್ಮ ಸಂಕೇತಿತಾರ್ಥವನ್ನು ತಪ್ಪದೇ ಬೋಧಿಸುತ್ತವೆ. ಅದರಿಂದ ಲೋಕವ್ಯವಹಾರವು ಸಿದ್ಧಿಸುವುದು ಎಲ್ಲರಿಗೂ ಗೊತ್ತು. ಆದರೆ ಅಂಗೈಯಲ್ಲಿರುವ ಎಲಚೀ ಹಣ್ಣಿನಂತೆ ಲೋಕದ ಎಲ್ಲ ಸ್ಥಿತಿಗತಿಗಳನ್ನೂ ತ್ರಿಕಾಲ ಜ್ಞಾನದಿಂದ ತಿಳಿದಿರುವ ಯೋಗಿಗಳ ವಾಕ್ಸಿದ್ಧಿಯು ಬ್ರಹ್ಮಸೃಷ್ಟಿಯ ನಿಯತ ಸ್ಥಿತಿಯನ್ನೇ ಬದಲಾಯಿಸುವ ಸಾಮರ್ಥ್ಯವನ್ನು ಹೊಂದಿದೆ, ಲೋಕಪ್ರಸಿದ್ಧ ವ್ಯವಹಾರದಲ್ಲಿ ಸಾಮಾನ್ಯ ಜನತೆ ಸಮರ್ಥವಾದರೆ ಅಧ್ಯಾತ್ಮ ಜ್ಞಾನಿಗಳು ಲೋಕಾತೀತವಾದ ಘಟನಾವಳಿಗಳನ್ನು ನಿರ್ಮಿಸಬಲ್ಲರು.

**ದೃಷ್ಟಾಂತೋಽಯಂ ಕಿಲ ಭಗವತೋ ರಾಘವೇಶಸ್ಯ ವೃತ್ತೇ**
**ಕೇ ವಾ ನಾಸನ್ ಗುರುಕರುಣಯಾ ನಿರ್ಧನಾ ಭಾಗ್ಯವಂತಃ ।**
**ನಿಃಸಂತಾನಾ ಅಪಿ ಸುತನಯಾ ಏಡಮೂಕಾಃ ಪ್ರಗಲ್ಭಾಃ**
**ಅಲ್ಪಾಯುಷ್ಕಾ ಅಪಿ ಚ ವಿತತಾಯೂಂಷಿ ತಸ್ಯಾಶಿಷಾಪುಃ॥ 63**

ಋಷಿಗಳೂ, ಯೋಗಿಗಳೂ ಆದ ಮಹಾತ್ಮರ ಲೋಕಾನುಗ್ರಹಕ್ಕೆ ಶ್ರೀ ರಾಘವೇಶ್ವರಭಾರತೀಸ್ವಾಮಿಗಳ ನಡವಳಿಕೆಯೊಂದು ದೃಷ್ಟಾಂತವನ್ನೊದಗಿಸುವುದು. (ಇವರ ದರ್ಶನದಿಂದ ಭಕ್ತರ ಪೂರ್ವಜನ್ಮದ ಮತ್ತು ಈ ಜನ್ಮದ ಸಮಸ್ತ ಪಾಪಗಳು ನಾಶವಾದವು ) ಇವರ ಕೃಪೆಯಿಂದ ತೀರ ಬಡವರೂ ಭಾಗ್ಯವಂತರಾದರು ಮಕ್ಕಳಿಲ್ಲದವರು ಸತ್ಪುತ್ರರನ್ನು ಪಡೆದರು, ಕೇಳುವುದಕ್ಕೂ ಮಾತನಾಡುವುದಕ್ಕೂ ಬಾರದವರೂ ಸಹ ಉತ್ತಮವಾಗ್ಮಿಗಳೂ, ಪ್ರವಣಶಕ್ತಿಸಂಪನ್ನರೂ ಆದರು. ಅಲ್ಪಾಯುಷಿಗಳು ದೀರ್ಘಾಯುಷ್ಯವನ್ನು ಅವರ ಅನುಗ್ರಹದಿಂದ ಪಡೆದರು.

**ಶರ್ವೇ ರುಷ್ಟೇ ಶರಣಮಯತೇ ಸದ್ಗುರುಂ ತಂ ಶರಣ್ಯಂ**
**ಲೋಕಸ್ತಸ್ಮಿನ್ ಭವತಿ ಕುಪಿತೇ ಕಃ ಪರಿತ್ರಾತುಮೀಷ್ಟೇ ।**
**ಯಸ್ಮಾತ್ಕೇಚಿತ್ ಪ್ರಕೃತಿಮುಖರಾ ನ್ಯಕ್ಕೃತಾ ರಾಘವೇಶಾ-**
**ದನ್ವೀಯುಸ್ತಾಂ ಪತನಸರಣಿಂ ಶಿಷ್ಯಪಾಶಾಸ್ತ್ರಿಶಂಕೋಃ ॥ ೬೪**

ದೇವರಿಗೆ ತಪ್ಪುಮಾಡಿ ಅವನ ಕೋಪಕ್ಕೆ ಗುರಿಯಾದ ಜನತೆ ರಕ್ಷಣೆಗಾಗಿ ಗುರುವನ್ನು ಮೊರೆ ಹೋಗಬಹುದು. ಆದರೆ ಗುರುಗಳಿಗೆ ಅಪರಾಧ ಮಾಡಿದವ

ನನ್ನು ಯಾರೂ ಕಾಪಾಡಲಾರರು. ಅವಿಧೇಯರಾದ ಕೆಲವು ಶಿಷ್ಯರು ರಾಘವೇಶ್ವರ ಭಾರತೀಸ್ವಾಮಿಗಳ ಎದುರು ವಿತಂಡವಾದಮಾಡಿ ಅವರಿಂದ ಧಿಕ್ಕೃತರಾದರು. (ಬಳಿಕ ಅವರು ಶೃಂಗೇರಿ ಮಠದ ಶಿಷ್ಯರಾಗ ಬಯಸಿ ಅಲ್ಲಿಗೆ ಹೋದರು. ಅಲ್ಲಿಯೂ ಪುರಸ್ಕಾರದೊರೆಯಲಿಲ್ಲ) ಆ ಕುತ್ಸಿತ ಶಿಷ್ಯರು ದೇವೇಂದ್ರನಿಂದ ತಿರಸ್ಕೃತನಾಗಿ ಬೀಳುತ್ತಿರುವ ತ್ರಿಶಂಕುವಿನ ಪತನ ಮಾರ್ಗವನ್ನು ಅನುಸರಿಸಿದರು.

**ಬಾಲೋ ಹ್ಯಷ್ಟಾದಶಸಮವಯಸ್ಯಾಸ್ಥಿತೋ ರಾಮಚಂದ್ರೋ**
**ಭಾರತ್ಯಾಖ್ಯಃ ಶಮದಮನಿಧೀ ರಾಮಚಂದ್ರಾರ್ಯಪೀಠೇ ।**
**ದಿಷ್ಟೋ ವರ್ಣಾಶ್ರಮಸಮುಚಿತಾಚಾರಧರ್ಮೋಪದೇಷ್ಟಾ**
**ಪೂರ್ವಾಚಾರ್ಯಪ್ರಣಿಹಿತದಿಶಾ ಧರ್ಮಸಾರಥ್ಯಮೈಚ್ಛತ್ ॥೬೫**

ಶ್ರೀ ರಾಘವೇಶ್ವರ ಭಾರತೀಗಳು ತಮ್ಮ ಶಿಷ್ಯರಾದ ಶಮದಮಾದಿ ಗುಣ ಸಂಪನ್ನರೂ, ಸುಮಾರು ಹದಿನೆಂಟು ವರ್ಷ ವಯಸ್ಸಿನವರೂ ಆದ ರಾಮಚಂದ್ರ ಭಾರತೀ ಎಂಬ ಹೆಸರುಳ್ಳ ಬಾಲ ಸನ್ಯಾಸಿಗಳನ್ನು ಆಚಾರ್ಯ ಪೀಠದಲ್ಲಿ ಕೂರಿಸಿದರು. ವರ್ಣಾಶ್ರಮ ಧರ್ಮಗಳಿಗೆ ಉಚಿತವಾದ ಆಚಾರಾದಿಗಳನ್ನು ಶಿಷ್ಯವರ್ಗಕ್ಕೆ ಉಪದೇಶ ಮಾಡುವ ಹಂಬಲವುಳ್ಳ ಶ್ರೀರಾಮಚಂದ್ರಭಾರತೀ ಸ್ವಾಮಿಗಳು ತಮ್ಮ ಹಿಂದಿನ ಹಿರಿಯ ಗುರುಗಳು ಹೇಳಿದ ಕ್ರಮದಿಂದ ಧರ್ಮವನ್ನು ಪ್ರಚಾರಮಾಡಬೇಕೆಂಬ ಸಂಕಲ್ಪವುಳ್ಳವರಾಗಿದ್ದರು.

**ಶಿಷ್ಯಸ್ವಾಂತೋಲ್ಲಸನಶಶಿನಾ ರಾಘವೇಶೇನ ತೇನ**
**ಪ್ರಾಪ್ತಾತ್ಮಶ್ರೀಚರಣರಸಿಕೇನಾರ್ತಿಸಂತಾರಕೇಣ ।**
**ವಿದ್ಯಾ ವಿದ್ಯಾಜಲಧಿಶಯನಾರಾಯಣೇನಾಧ್ಯಗೀಷ್ಟ**
**ಸ್ವಾಚಾರ್ಯೇಣ ಪ್ರಶಮನಿಧಿನಾ ರಾಮಚಂದ್ರಃ ಪರಿವ್ರಾಟ್ ॥**

ಅಧ್ಯಾತ್ಮಶ್ರೀಯಚರಣ ಸೇವಾಸಕ್ತರಾದ ಶ್ರೀ ರಾಘವೇಶ್ವರ ಭಾರತೀಗಳು ಶಿಷ್ಯರ ಹೃದಯ ಕನ್ನೈದಿಲೆಯನ್ನು ಅರಳಿಸುವಿಕೆಯಲ್ಲಿ ಚಂದ್ರನೇ ಆಗಿರುವರು. ಆರ್ತರ ಸಂಕಟಗಳನ್ನು ಹೋಗಲಾಡಿಸುವ ಇವರು ವಿದ್ಯೆ ಎಂಬ ಕ್ಷೀರ ಸಾಗರದಲ್ಲಿ ಪವಡಿಸಿದ ನಾರಾಯಣನೇ ಸರಿ. ಪ್ರಶಾಂತರೂ ತನ್ನ ಗುರುಗಳೂ ಆದ ಆ ರಾಘವೇಶ್ವರ ಭಾರತೀಗಳ ಹತ್ತಿರ ಬಾಲಕರಾದ ರಾಮಚಂದ್ರಭಾರತೀಸ್ವಾಮಿಗಳು ಸಕಲವಿದ್ಯೆಗಳನ್ನೂ ಓದಿದರು.

**ಮೀಮಾಂಸಾಯಾಂ ಫಣಿಪಭಣಿತೌ ಗೌತಮೀಯೇಽಥ ಯೋಗೇ**
**ವೈಯಾಸಿಕ್ಯಾಮಪಿ ಚ ನಿಗಮಾಂತಾರ್ಥಭಾಷ್ಯೇ ಚ ವೇದೇ ।**
**ಶೈಲೂಷೀವಾಪ್ರತಿಮಪದವಿನ್ಯಾಸಲೀಲಾವಿಲಾಸಾ**
**ಚಿತ್ತೇ ವಿದ್ವತ್ಸದಸಿ ಸುಷುವೇ ಶೇಮುಷೀ ಯಸ್ಯ ಚಿತ್ರಮ್ ॥೬೭**



ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀಮದ್ರಾಮಚಂದ್ರಭಾರತೀ
ಸ್ವಾಮಿಗಳವರು ಕಿರೀಟದೊಂದಿಗೆ ಹಸ್ತಿದಂತ ಸಿಂಹಾಸನದಲ್ಲಿ

ಬಾಲ ಯತೀಶ್ವರರಾದ ರಾಮಚಂದ್ರ ಭಾರತೀಗಳು ಮೀಮಾಂಸೆ,ವ್ಯಾಕರಣ, ನ್ಯಾಯ, ಯೋಗ, ಬ್ರಹ್ಮಮೀಮಾಂಸೆ, ಉಪನಿಷದ್ಭಾಷ್ಯ ಹಾಗೂ ವೇದ ಇವುಗಳಲ್ಲಿ ಅಪ್ರತಿಮ ವಿದ್ವಾಂಸರಾಗಿದ್ದರು, ವಿದ್ವಾಂಸರ ವಾಕ್ಯಾರ್ಥ ಸಭೆಯಲ್ಲಿ ವೇದದ ಸಂಹಿತಾ ಪದ ಕ್ರಮ ಮುಂತಾದ ಪಾಠಗಳ ವಿಷಯದಲ್ಲಿಯೂ, ಮೇಲೆ ಹೇಳಿದ ಶಾಸ್ತ್ರಾರ್ಥಗಳ ವಿಷಯದಲ್ಲಿಯೂ ಇವರ ಬುದ್ಧಿ ಅತ್ಯಂತ ಚುರುಕು. ನಾಟ್ಯ ಸಭೆಯಲ್ಲಿನ ನಟಿಯಂತೆ ಅಸಾಧಾರಣ ಪದವಿನ್ಯಾಸ ಲೀಲೆಯ ವಿಲಾಸವುಳ್ಳ ಇವರ ಪ್ರತಿಭೆ ಸಭಾಸದರಾದ ವಿದ್ಯಾವಂತರ ಮನಸ್ಸಿನಲ್ಲಿ ಆಶ್ಚರ್ಯವನ್ನುಂಟು ಮಾಡುತ್ತಿತ್ತು.

**ಕಾಲೇ ಯಾತೇ ಕಿಲ ಬಹುತಿಥೇ ವಿಶ್ಲಥಾಂಗೇ ಚ ಕಾಯೇ**
**ಕೃತ್ವಾ ಶಿಷ್ಯಂ ಶಮದಮನಿಧಿಂ ರಾಮಚಂದ್ರಾಭಿಧಾನಮ್ ।**
**ನ್ಯಾಸೀಕೃತ್ಯಾಶ್ರಮಪತಿಪದಂ ತತ್ರ ಭಾರತ್ಯುಪಾಹ್ವೇ**
**ಯೋಗೇನಾಂತೇ ನಿಜತನುಮಸಾವತ್ಯಜದ್ರಾಘವೇಶಃ ॥ ೩೮**

ಕೆಲವು ವರ್ಷಗಳು ಕಳೆದ ಬಳಿಕ ಶ್ರೀರಾಘವೇಶ್ವರಭಾರತೀಗಳಿಗೆ ವಾರ್ಧಕ್ಯದಿಂದ ದೇಹವು ನಿಃಶಕ್ತವಾಯಿತು. ಅಂಗೋಪಾಂಗಾದಿಗಳು ಸೋತು ಸಡಿಲವಾದವು. ಆಗ ಅವರು ಶಮದಮಾದಿ ಗುಣ ಸಂಪನ್ನನೂ, ತಮ್ಮ ಶಿಷ್ಯನೂ ಆದ ಶ್ರೀರಾಮಚಂದ್ರ ಭಾರತೀಯವರಿಗೆ ಮಠದ ಯಾವತ್ತೂ ಅಧಿಕಾರವನ್ನು ವಹಿಸಿಕೊಟ್ಟರು. ಮುಂದೆ ಆಚಾರ್ಯರಾಗಿರಬೇಕೆಂದು ನಿಯಮಿಸಿದರು. ಬಳಿಕ ಯೋಗಶಾಸ್ತ್ರಾಭಿಜ್ಞರಾದ ಶ್ರೀರಾಘವೇಶ್ವರಭಾರತೀಗಳು ಯೋಗಶಾಸ್ತ್ರಾನುಸಾರವಾಗಿ ತಮ್ಮ ಭೌತಿಕ ಶರೀರವನ್ನು ತ್ಯಜಿಸಿದರು.

**ಸೋಽಯಂ ಪ್ರೋದಕ್ಷಮುಮುಖೇ ವಿವಾದಾಸ್ಪದಂ ಲೋಕವೃತ್ತಂ**
**ಬುದ್ಧ್ಯಾ ವ್ಯಷ್ಟ್ಯಾ ಹರಿಪವನವನ್ನಿರ್ಣಯಂ ಹ್ಯಭ್ಯಧತ್ತ ।**
**ಧರ್ಮಾಧರ್ಮೋಭಯಪರವಿಸಂವಾದಿಸಂಶೀತಿರಾಶಿಂ**
**ಯುಕ್ತ್ಯಸ್ತ್ರೇಣ ಪ್ರಖರಮತಿಮಾನ್ ದಾರುಭೇದಂ ಬಿಭೇದ॥ ೩೯**

ರಾಮಚಂದ್ರ ಭಾರತೀಗಳ ಸನ್ನಿಧಿಯಲ್ಲಿ ಶಿಷ್ಯರು ತಮ್ಮ ಲೌಕಿಕ ವ್ಯವಹಾರದಲ್ಲಿಯ ವಿವಾದವನ್ನು ನಿರ್ಣಯದ ಬಗ್ಗೆ ನಿವೇದಿಸುತ್ತಿದ್ದರು.ಆಗ ಶ್ರೀರಾಮಚಂದ್ರ ಭಾರತೀ ಸ್ವಾಮಿಗಳು ಉಭಯ ಪಕ್ಷದ ವಿವಾದ ವಸ್ತುವಿನ ಸ್ವರೂಪವನ್ನು ಬುದ್ಧಿಯಿಂದ ಕೂಲಂಕಷವಾಗಿ ವಿಮರ್ಶಿಸಿ, ಧಾನ್ಯರಾಶಿಯಿಂದ ಹೊಟ್ಟನ್ನು ಬೇರ್ಪಡಿಸಿ ಶೋಧಿಸುವ ಮೊರದಂತೆ ಅಸತ್ಯಾಂಶವನ್ನು ಹೊರಗಾಗಿ ಸತ್ಯಾಂಶವನ್ನು [illegible] ನಿರ್ಣಯ ಕೊಡುತ್ತಿದ್ದರು. ಹಾಗೆಯೇ ಧಾರ್ಮಿಕ ವಿಮರ್ಶೆಯಲ್ಲಿ ಇವರು ನಿಶಿತಮತಿಗಳು. ಧರ್ಮಜಿಜ್ಞಾಸುಗಳಾದ ವೈದಿಕರು ಕರ್ಮಾನುಷ್ಠಾನದ ವಿಷಯ

ದಲ್ಲಿ ಧರ್ಮಶಾಸ್ತ್ರದ ಸಿದ್ಧಾಂತವನ್ನು ತಿಳಿಯುವುದಕ್ಕಾಗಿ ಸ್ವಾಮಿಗಳ ಸನ್ನಿಧಿಗೆ ಬರುತ್ತಿದ್ದರು. ಯಾವುದಾದರೂ ಕರ್ಮಾಚರಣೆಯ ವಿಷಯದಲ್ಲಿ ಭಿನ್ನಾಭಿಪ್ರಾಯ ಹೊಂದಿದ ಅವರು ಧರ್ಮಶಾಸ್ತ್ರದಲ್ಲಿ ಹೇಳಿದ ಅನ್ಯೋನ್ಯ ವಿರುದ್ಧ ವಾಕ್ಯಾರ್ಥಗಳಲ್ಲಿರುವ ತಾತ್ಪರ್ಯವನ್ನು ಅರಿಯದೇ ಅಸಂಗತವಾಗಿ ವಾದಿಸುತ್ತಿರಲು ಸೂಕ್ಷ್ಮಮತಿಗಳಾದ ಸ್ವಾಮಿಗಳು ಆ ಪಕ್ಷಪ್ರತಿಪಕ್ಷಗಳ ವಾದಪ್ರತಿವಾದಗಳನ್ನು ಆಲೈಸುತ್ತಾ, ತಮ್ಮ ಯುಕ್ತಿಯ ಕೊಡಲಿಯಿಂದ ಸೊಟ್ಟ ಸೊಟ್ಟಾಗಿ ಗಂಟಾದ ಮರದ ದೊಡ್ಡ ತುಂಡನ್ನು ಒಡೆದು ಹಾಕುವಂತೆ ಆ ಜಿಜ್ಞಾಸುಗಳ ಸಂಶಯದ ರಾಶಿಯನ್ನು ಚೂರು ಚೂರು ಮಾಡಿ, ಧರ್ಮಶಾಸ್ತ್ರದ ಸಿದ್ಧಾಂತವನ್ನು ಬೋಧಿಸುತ್ತಿದ್ದರು.

**ಪ್ರಾಯಃ ಕೇಚಿತ್ಕುಟಿಲಮತಯೋ ನಾಸ್ತಿಕಾ ದೈವವಾದಾನ್**
**ಧಿಕ್ಕುರ್ವಂತಿ ಶ್ರುತಿಷು ವಿಮುಖಾಃ ಪಂಡಿತಂಮನ್ಯಮಾನಾಃ ।**
**ನ್ಯಾಯ್ಯಂ ಧರ್ಮ್ಯಂ ಪರಿಣತಿಹಿತಂ ಸಾಧುಮಾರ್ಗಂ ತ್ಯಜಂತೋ**
**ವೃದ್ಧಾಚಾರಾನ್ವಿಮತಿಕಥಿತಾನ್ ಕೇವಲಂ ಸಂಗಿರಂತೇ ॥ ೭೦**

ವೇದಗಳನ್ನು ಓದದ, ಶಾಸ್ತ್ರಗಳನ್ನು ಅರಿಯದ, ತಾವೇ ಪಂಡಿತರೆಂದು ಬೀಗುವ ದುರ್ಬುದ್ಧಿಗಳಾದ ಕೆಲವು ನಾಸ್ತಿಕರು ಪುನರ್ಜನ್ಮ, ಪರಲೋಕ, ಪರಮಾತ್ಮ ಮುಂತಾದವುಗಳ ಅಸ್ತಿತ್ವವನ್ನು ಬಹುಮಟ್ಟಿಗೆ ತಿರಸ್ಕರಿಸುತ್ತಾರೆ. ಇವರು ಪರಿಣಾಮದಲ್ಲಿ ಹಿತಕರವೂ, ನ್ಯಾಯಸಮ್ಮತವೂ, ಧರ್ಮವನ್ನು ಬಿಡದಿರುವುದೂ ಆದ ಶ್ರೇಯೋಮಾರ್ಗವನ್ನು ಬಿಟ್ಟು ನಡೆಯುತ್ತಾ, ಸತ್ಸಂಪ್ರದಾಯ, ಶಿಷ್ಟಾಚಾರಗಳನ್ನು ಬುದ್ಧಿವಿಕಲರ ಹೇಳಿಕೆಯೆಂದು ಸುಮ್ಮನೆ ಹರಟುತ್ತಾರೆ.

**ಆಚಾರ್ಯಸ್ಯ ಕ್ವಚನ ಚರತೋ ಗ್ರಾಮಭಿಕ್ಷಾಪ್ರಸಂಗೇ**
**ಕ್ವಾಪಿ ಗ್ರಾಮೇ ಪಿಶುನಗೃಹಿಣಃ ಪೂಜ್ಯಮೇನಂ ಯತೀಂದ್ರಮ್ ।**
**"ಪೂಃಽಽಯಾಂತ್ವಸ್ಮತ್ಸದನಮಧುನಾ ಸ್ವಾಮಿನ" ಶ್ಚೇತಿ ವಾಚಾ**
**ದ್ವಾರಿ ಸ್ಥಿತ್ವಾ ಬತ ವಿಧಿಹತಾ ಏಕಕಂಠಾ ನ್ಯರುಂಧನ್ ॥ ೭೧**

ಒಂದುಸಲ ಶ್ರೀರಾಮಚಂದ್ರಭಾರತೀಸ್ವಾಮಿಗಳು ಸಂಪ್ರದಾಯದಂತೆ ಶಿಷ್ಯರ ಪ್ರಾರ್ಥನೆಯ ಮೇರೆಗೆ ಗ್ರಾಮಸಂಚಾರ ಕೈಗೊಂಡಿದ್ದರು. ಹೀಗಿರುವಾಗ ಗ್ರಾಮಸ್ಥರೆಲ್ಲಾ ಒಟ್ಟು ಸೇರಿ ಗುರುಗಳ ಆತಿಥ್ಯ ರೂಪವಾದ ಭಿಕ್ಷೆಗೆ ಆಹ್ವಾನಿಸಿದ್ದರಿಂದ ಯಾವುದೋ ಒಂದು ಗ್ರಾಮಕ್ಕೆ ಆಚಾರ್ಯರು ತಮ್ಮ ಪರಿವಾರ ಸಹಿತ ಸಮಸ್ತ ಮರದ ಮರ್ಯಾದೆಯೊಡನೆ ಆರಾಧ್ಯ ಶ್ರೀ ರಾಮನ ಮೂರ್ತಿ ಸಹಿತ ಪ್ರವೇಶ ಮಾಡುವುದರಲ್ಲಿ ಇದ್ದರು. ಆಗ ವಿಧಿಹತರಾದ ಆ ಗ್ರಾಮದ ದುರ್ಬುದ್ಧಿಯ

ಗೃಹಸ್ಥರು ಪೂಜ್ಯರಾದ ಯತೀಶ್ವರರನ್ನು ಕುರಿತು, "ಸ್ವಾಮಿಗಳೇ, ನಮ್ಮ ಮನೆಗೆ ಬರಬೇಡಿ" ಎಂದು ಹೇಳಿ ತಮ್ಮ ತಮ್ಮ ಮನೆಯ ಬಾಗಿಲಲ್ಲಿ ನಿಂತು ಏಕಮತ್ಯವುಳ್ಳವರಾಗಿ ತಡೆದರು.

ತಸ್ಮಾದಾರ್ಯಃ ಪ್ರತಿನಿವವೃತೇ ಚೇತಸಾ ಖಿದ್ಯಮಾನಃ
ಸೀತಾಜಾನೇರ್ವಿಪಿನವಸುಧಾ ಸರ್ವಥಾ ಪ್ರೀತಯೇಽಭೂತ್ ।
ಇತ್ಯುಕ್ತ್ವಾಽಸೌ ದಿವಸವಿಗಮೇ ವಾಸತೇಯಂ ನಿಕೇತಂ
ಮಾರ್ಗಂ ಮಾರ್ಗಂ ಪ್ರಕೃತಿಸುಭಗಂ ವೃಕ್ಷಮೂಲಂ ಪ್ರಪೇದೇ॥

ಕೂಡಲೇ ಸ್ವಾಮಿಗಳು ಖಿನ್ನಮನಸ್ಕರಾಗಿ ಹಿಂದಿರುಗಿದರು. ನಮ್ಮ ಉಪಾಸ್ಯ ದೇವತೆಯಾದ ಶ್ರೀ ರಾಮನಿಗೆ "ಅರಣ್ಯಭೂಮಿ ಬಲು ಮೆಚ್ಚಿಗೆ" ಎಂದು ಹೇಳಿ ಆ ಸಂಜೆಯ ಹೊತ್ತಿನಲ್ಲಿ ನಿವಾಸಕ್ಕೆ ಅರ್ಹವಾದ ಸ್ಥಳವೊಂದನ್ನು ಆ ಕಾಡಿನ ಅಂಚಿನಲ್ಲಿ ಹುಡುಕುತ್ತಾ ಹುಡುಕುತ್ತಾ ಪ್ರಕೃತಿ ಸುಂದರವಾದ ಒಂದು ವೃಕ್ಷದ ತಳಕ್ಕೆ ಬಂದು ತಲುಪಿದರು.

ತಾವತ್ಕಶ್ಚಿದ್ಯತಿಕುಲಪತಿಂ ರಾಮಚಂದ್ರಂ ಗೃಹಸ್ಥೋ
ನೀತ್ವಾ ಗೇಹಂ ಸಹ ಪರಿಜನೈಃ ಪೂಜ್ಯಮೇನಂ ಸಿಷೇವೇ ।
ಯಃ ಪೂರ್ವಾಹ್ಣೇ ಗುರುಚರಣಯೋಸ್ತೀರ್ಥತೋಯಾಭಿಷಿಕ್ತ-
ಸ್ತೀರ್ಥೀಭೂತಂ ಗೃಹಮಥ ಪರೀವಾರಮಪ್ಯೇಷ ಮೇನೇ॥ ೭೩

ಆ ದಿನದ ಮಧ್ಯಾಹ್ನ ತನ್ನ ಮನೆಯಲ್ಲಿ ಈ ಗುರುವರ್ಯರ ಪಾದ ಪೂಜೆ ಮಾಡಿ, ಗುರುಪಾದುಕಾತೀರ್ಥಾಭಿಷಿಕ್ತನಾದ ತಾನು ತನ್ನ ಮನೆ ಮಾತ್ರವಲ್ಲದೇ ತನ್ನ ಕುಟುಂಬದ ಪರಿಜನರೆಲ್ಲರೂ ತೀರ್ಥ*ವಾದರೆಂದು ಯಾವ ಮಹನೀಯನು ತಿಳಿದಿದ್ದನೋ ಆ ಸದ್ಗೃಹಸ್ಥ ಶಿಷ್ಯನು ಅಷ್ಟುಹೊತ್ತಿಗೆ ಅಲ್ಲಿಗೆ ಬಂದನು. ಆ ಮುಚ್ಚಂಜೆಯ ಹೊತ್ತಿನಲ್ಲಿ ಮರದ ತಳದಲ್ಲಿ ಗುರುಗಳು ತಂಗುವುದನ್ನು ಅವನು ಸಹಿಸಲಿಲ್ಲ. ಕೂಡಲೇ ಪೂಜ್ಯ ಕುಲಪತಿಗಳಾದ ಶ್ರೀ ರಾಮಚಂದ್ರ ಭಾರತೀ ಗುರುವರ್ಯರನ್ನು ತನ್ನ ಮನೆಗೆ ಬರಬೇಕೆಂದು ಪ್ರಾರ್ಥಿಸಿದನು. ಪರಿವಾರ ಸಹಿತ ಶ್ರೀಗಳವರನ್ನು ಮತ್ತೆ ತನ್ನ ಮನೆಗೆ ಬಿಜಯ ಮಾಡಿಸಿಕೊಂಡು ಸೇವಿಸಿದನು.

ಕಾಲೇನೈತೇ ಗುರುಪರಿಭವಾಯತ್ತಪಾಪಾಭಿತಪ್ತಾ
ಗೇಹಾಧೀಶಾಸ್ತನಯರಹಿತಾಃ ಕೀಟನಾಶಂ ವಿನಷ್ಟಾಃ।
ತೇಷಾಂ ವಂಶೇ ಸತತಮವಕೇಶಿತ್ವನಿತ್ಯಾ ಗೃಹಿಣ್ಯೋ
ಜಾತಾ ಲೋಕೇ ಭವತಿ ಮಹತಾಂ ಮಾನಹಾನಿರ್ವಿಪತ್ತ್ಯೈ॥ ೭೪

---

* ತೀರ್ಥ = ಪಾದೋದಕ, ಪವಿತ್ರ

ಕೆಲವು ವರ್ಷಗಳು ಕಳೆದ ಬಳಿಕ ಮೇಲೆ ಹೇಳಿದ ಗ್ರಾಮದ ಗೃಹಸ್ಥರು ಗುರು ತಿರಸ್ಕಾರದಿಂದ ಉಂಟಾದ ಪಾಪದ ಬೇಗೆಗೆ ಗುರಿಯಾದರು. ಬಳಿಕ ಅವರು ಪುತ್ರಹೀನರಾಗಿ ಕೀಟಗಳಂತೆ ಬಾಳಿದರು. ಅವರ ವಂಶದಲ್ಲಿ ಈವರೆಗೂ ಗೃಹಿಣಿಯರು ಬಂಜೆಯರಾಗಿಯೇ ಉಳಿಯುವಂತಾಯಿತು. ಲೋಕದಲ್ಲಿ ದೊಡ್ಡವರಿಗೆ ಎಸಗಿದ ಮಾನಹಾನಿಯು ತಮ್ಮ ಆಪತ್ತಿಗಾಗಿಯೇ ಆಗುವುದಲ್ಲವೆ!

**ವೇದಾಭಿಜ್ಞಾನ್ ಕವಿಕುಲಪತೀನ್ವಾವದೂಕಾನ್ವಿನೇಯಾನ್**
**ಸೇವಾಧರ್ಮಪ್ರವಣಮನಸಃ ಶಿಲ್ಪಿನಃ ಶಾಸ್ತ್ರಿವರ್ಯಾನ್ ।**
**ಆನ್ವೀಕ್ಷಿಕ್ಯಾಮವಹಿತಮತಿರ್ಭಾರತೀರಾಮಚಂದ್ರಃ**
**ತತ್ತದ್ವಿದ್ಯಾಗುಣಸಮುಚಿತಂ ಗೌರವೇಣೇಕ್ಷತೇ ಸ್ಮ ॥** ೭೫

ತರ್ಕಶಾಸ್ತ್ರ ನಿಪುಣರಾದ ರಾಮಚಂದ್ರ ಭಾರತೀ ಸ್ವಾಮಿಗಳು ತಮ್ಮ ಸನ್ನಿಧಿಗೆ ಬರುತ್ತಿದ್ದ ಶ್ರೋತ್ರಿಯರು, ಕವಿಶ್ರೇಷ್ಠರು, ವಾಗ್ಮಿವರ್ಯರು, ವಿನೀತರಾದ ಮತ್ತು ಸೇವಾಧರ್ಮದಲ್ಲಿ ಆಸಕ್ತರಾದ ಭಕ್ತರು, ಶಿಲ್ಪಕಲಾ ಪರಿಣತರು, ಶಾಸ್ತ್ರ ವಿದ್ವಾಂಸರು, ಮತ್ತು ಲೌಕಿಕ ವಿದ್ಯಾಪರಿಣತರು ಮುಂತಾದವರನ್ನು ಆಯಾಯ ವಿದ್ಯಾ ಗುಣಗಳಿಗೆ ಉಚಿತವಾದ ರೀತಿಯಲ್ಲಿ ಗೌರವದಿಂದ ನೋಡುತ್ತಿದ್ದರು.

**ಶಿಷ್ಯಶ್ಚಾಪ್ತಸ್ತದನು ಹೊಸಬಾಳೇನಿವಾಸೀ ಗೃಹಸ್ಥಃ**
**ಪುಟ್ಟಪ್ಪಾಖ್ಯೋ ದ್ವಿಜಕುಲಸದಾಚಾರಪೂತಃ ಕದಾಚಿತ್ ।**
**ರಾಜಾಗಾರಪ್ರತಿಮಸದನಂ ರಾಮಚಂದ್ರಾಪುರಂ ತ-**
**ದ್ಗತ್ವಾ ವ್ಯಜ್ಞಾಪಯದಥ ಗುರುಂ ಭಾರತೀಂ ರಾಮಚಂದ್ರಮ್॥**

ಸೊರಬ ತಾಲ್ಲೂಕಿಗೆ ಸೇರಿದ ಹೊಸಬಾಳೆ ಎಂಬ ಗ್ರಾಮದಲ್ಲಿದ್ದ ಬ್ರಾಹ್ಮಣ ಕುಲದ ಸದಾಚಾರ ಸಂಪನ್ನರಾದ ಪುಟ್ಟಪ್ಪನವರೆಂದು ಪ್ರಸಿದ್ಧಿ ಪಡೆದ ಗೃಹಸ್ಥರೊಬ್ಬರಿದ್ದರು. ಅವರು ಮಠಕ್ಕೆ ಆಪ್ತರಾದ ಶಿಷ್ಯರು. ಇವರು ಒಂದಾನೊಂದು ಬಾರಿ ರಾಜಭವನದಂತಿರುವ ಗುರುಭವನವುಳ್ಳ ರಾಮಚಂದ್ರಾಪುರಕ್ಕೆ ಹೋದರು ಆಚಾರ್ಯವರ್ಯರನ್ನು ಕಂಡು ವಂದಿಸಿದರು ಕುಶಲ ಪ್ರಶ್ನೋತ್ತರಗಳಾದ ಬಳಿಕ ಪುಟ್ಟಪ್ಪನವರು ರಾಮಚಂದ್ರಭಾರತೀಯವರನ್ನು ಕುರಿತು–

**ಸ್ವಾಮಿನ್ ತ್ವಷ್ಟಾ ಸುರಭಿನಗರಾಭ್ಯರ್ಣಪಲ್ಲೀನಿವಾಸೀ**
**ಶಿಲ್ಪಾಭಿಜ್ಞಃ ಕುಶಲಕೃತಿಮಾನ್ ವಿಶ್ವಕರ್ಮಾಂಶಶಾಲೀ ।**
**ಆಸ್ತೇ ನಿರ್ಮಾತ್ವಯಮಿಹ ಹಿರಣ್ಯಪ್ಪನಾಮಾ ಕುಲೀನಃ**
**ಸಾಧುಃ ಸಿಂಹಾಸನಮಭಿನವಂ ಹಸ್ತಿದಂತೈರ್ಮರೀಯೈಃ ॥** ೭

"ಪೂಜ್ಯರೇ! ಕುಶಲಕಲೆಯಲ್ಲಿ ಪರಿಣತನಾದ ಗುಡಿಗಾರ ಹಿರಣ್ಯಪ್ಪನೆಂಬುವನು ಸೊರಬದ ಹತ್ತಿರದ ಹಳ್ಳಿಯಲ್ಲಿ ವಾಸಿಸುತ್ತಿದ್ದಾನೆ. ಅವನು ಗಂಧದಮರ, ಆನೆಯ ದಂತ ಮೊದಲಾದವುಗಳಲ್ಲಿ ಸುಂದರ ಚಿತ್ರ ವಿಗ್ರಹಾದಿಗಳನ್ನು ಕೊರೆಯುತ್ತಾನೆ. ಕರಕೌಶಲದಲ್ಲಿ ತುಂಬಾ ಜಾಣ. ಹೆಚ್ಚೇನು? ಅವನು ದೇವಶಿಲ್ಪಿಯಾದ ವಿಶ್ವ ಕರ್ಮನ ಅಂಶಾವತಾರವೋ ಎನ್ನುವಂತಿದ್ದಾನೆ. ಈ ಗುಡಿಗಾರ ಹಿರಣ್ಯಪ್ಪನು ಸಾಧುಸ್ವಭಾವದವನೂ, ಸದ್ವಂಶೀಯನೂ ಹೌದು ಅವನು ನಮ್ಮ ಮರದ ಆನೆಯ ದಂತಗಳಿಂದ ಸುಂದರವಾದ ಹೊಸ ಸಿಂಹಾಸನವನ್ನು ಕೆತ್ತಲಿ. ಗುರುಗಳಾದ ತಾವು ಆಜ್ಞೆ ಮಾಡಿದರೆ, ಅವನು ಗುರುಸೇವೆಗೆ ಅಣಿಯಾಗಿರುವನು" ಎಂದು ಬಿನ್ನವಿಸಿದರು.

**ಇತ್ಥಂ ವಿಜ್ಞಾಪಿತಮಯಮಥಾಕರ್ಣ್ಯ ಮಾತಂಗದಂತೈಃ**
**ಪೀಠಂ ನಿರ್ಮಾಪಯಿತುಮನುಕೂಲಾರ್ಥಸಂಸಿದ್ಧಿಮೂಲಮ್ ।**
**ಧ್ಯಾತ್ವಾ ಲೋಕೋತ್ತರಕರಕಲಾಕೌಶಲಂ ವರ್ಧಯಿಷ್ಣು-**
**ರ್ಧೀಮಾನ್ ಸಿಂಹಾಸನಕೃತಿಮಿಮಾಮನ್ವಮಂ-**
**ಸ್ತಾರ್ಯವರ್ಯಃ ॥** ೭೮

ಹೀಗೆ ಬಿನ್ನೈಸಿದುದನ್ನು ಕೇಳಿ, ಗುರುವರ್ಯರು "ಆನೆದಂತಗಳಿಂದ ಪೀಠವನ್ನು ಮಾಡಿಸಲು ಬಹಳ ಹಣಬೇಕು. ಪ್ರಕೃತ, ಅಷ್ಟು ಹಣವನ್ನು ಒದಗಿಸುವುದಾದರೂ ಹೇಗೆ? ಸಾಕಷ್ಟು ಸಂಪನ್ಮೂಲದ ಹೊರತು ಈ ಕೆಲಸ ಹೇಗಾದೀತು? ಅಷ್ಟು ಬಂಡವಾಳವನ್ನು ಈ ಕೆಲಸದಲ್ಲಿ ತೊಡಗಿಸುವುದಾದರೂ ಹೇಗೆ?" ಎಂದು ಮುಂತಾಗಿ, ಕೊಂಚಕಾಲ ಆಲೋಚನಾ ಮಗ್ನರಾದರು. ಲೋಕೋತ್ತರವಾದ ಶಿಲ್ಪದ ಕರಕಲಾಕೌಶಲಕ್ಕೂ ಪ್ರೋತ್ಸಾಹ ನೀಡುವುದೂ ಸರಿಯೇ! ಬಳಿಕ ಶಿಲ್ಪ ಕಲೆಯ ಅಭಿವೃದ್ಧಿಯನ್ನು ಅಪೇಕ್ಷಿಸಿದ ಗುರುಗಳು ಸಿಂಹಾಸನದ ನಿರ್ಮಾಣಕ್ಕೆ ತಮ್ಮ ಸಮ್ಮತಿಯನ್ನು ನೀಡಿದರು.

**ತ್ವಷ್ಟಾ ನೂನಂ ನಿಖಿಲಜಗತೀಂ ಕೌತುಕಂ ದರ್ಶಯಿಷ್ಯನ್**
**ನವ್ಯಂ ಕಾವ್ಯಂ ವ್ಯರಚಯದಿದಂ ದಿವ್ಯಶಿಲ್ಪೋಪದೇಶಮ್ ।**
**ಜ್ಯೋತಿಷ್ಪಟ್ಟಂ ನನು ಸುರಗವೀಕಲ್ಪಮಾಶ್ಚರ್ಯತಲ್ಪಂ**
**ಭದ್ರಂ ಪೀಠಂ ಕನಕರುಚಿರಂ ಕಿಂನು ಧಾತ್ರಾಧಿರೋಹ್ಯಮ್ ॥**

ದೇವ ಶಿಲ್ಪಿಯಾದ ವಿಶ್ವಕರ್ಮನು ಜಗತ್ತಿಗೆ ಅಚ್ಚರಿಯ ನೋಟವನ್ನು ತೋರಿಸುವವನಾಗಿ ಈ ದಿವ್ಯಶಿಲ್ಪದ ತೋರಿಕೆಯುಳ್ಳ ಹೊಸ ಕಾವ್ಯವನ್ನು ಮಾಡಿರ ಬಹುದು. ಬಯಸಿದ ಬಯಕೆಯನ್ನು ನೀಡುವ ಕಾಮಧೇನುವಿಗೆ ಓರಗೆಯಾದ ಇದು ಆಕಾಶದಲ್ಲಿ ಮಿನುಗುತ್ತಿರುವ ಜ್ಯೋತಿರ್ಮಂಡಲದ ಪಟ್ಟಿಯೋ? ವಿಸ್ಮಯದ

ಮಂಚವೋ ? ಇಲ್ಲಿ ಬ್ರಹ್ಮನು ಸುಖಾಸೀನನಾಗಲಿರುವನೋ ? ಎಂಬ ಬಗೆ ಬಗೆಯ ಊಹೆಗೆ ನಿಲುಕುವ ಶ್ರೀ ಮರದ ಆನೆಯ ದಂತದಿಂದ ಸಿಂಹಾಸನವು ತಯಾರಾಯಿತು. ಬಂಗಾರದ ಹೊಗರನ್ನು ಹೊರ ಹೊಮ್ಮುತ್ತಿದ್ದ ಅದು ರಸಿಕರ ಕಣ್ಣಿಗೂ ಬಿತ್ತು.

ತಾರಾಶ್ರೇಣೀಪುಲಕಿತನಭಃಶ್ರೀವಿಶಿಷ್ಟೇಂದುಬಿಂಬಂ
ಬಾಲಾರ್ಕಾಂಶುಚ್ಛುರಿತಲಲಿತಂ ಕಿಂನು ಶೃಂಗಂ ಸುಮೇರೋಃ ।
ಬಾಭಾತಿ ಸ್ಮ ಪ್ರಚುರಮಣಿಯುಕ್ ಕಿಂನು ಕೂಟಂ ಹಿಮಾದ್ರೇಃ
ಶೋಭಾಶಾಲಿದ್ವಿರದರದನೋಟ್ಟಂಕಿತಂ ಸಿಂಹಪೀಠಮ್ ॥ ೮೦

ಆ ಆನೆಯ ದಂತದಲ್ಲಿ ಕೆತ್ತಿದ ಸಿಂಹಾಸನವು ಚುಕ್ಕಿಗಳ ಗುಂಪು ಗುಂಪಿನಿಂದ ಮೈನವಿರುಗೊಂಡಂತಿರುವ ಆಕಾಶಲಕ್ಷ್ಮಿಯಿಂದೊಡಗೂಡಿದ ಚಂದ್ರಮಂಡಲವೋ? ಎಳೆಯ ಸೂರ್ಯನಕಾಂತಿ ಮುಸುಕಿದ ಮನೋಹರವಾದ ಸುಮೇರು ಪರ್ವತದ ಶಿಖರವೋ ? ಹಲವು ರತ್ನಗಳ ಹೊಳಪಿನಿಂದ ಮೈದುಂಬಿ ಹೊಳೆಯುವ ಹಿಮಾಲಯದ ಶೃಂಗವೋ ? ಎಂಬಂತೆ ಅತಿಶಯವಾಗಿ ಕಂಗೊಳಿಸುತ್ತಿತ್ತು.

ಪ್ರತ್ಯಾದೇಶಃ ಕಿಲ ಭುವಿ ಕಲಾವೇದಿನಾಂ ಪ್ರಾಕ್ತನಾನಾ-
ಮಾವಿಷ್ಕಾರಃ ಕಿಮು ನವಯುಗೀಯಸ್ಯ ಶಿಲ್ಪಾಗಮಸ್ಯ ।
ಯತ್ರೋತ್ಕೀರ್ಣಾಮತಿಶಯಕಲಾಲೋಕದಿವ್ಯಾಂಜನಶ್ರೀ-
ಲಿಪ್ತಂ ಚಕ್ಷುಃ ಕಲಯಿತುಮಲಂ ವ್ಯಾಸವಾಲ್ಮೀಕಿಸೃಷ್ಟಿಮ್ ॥

ಇದು ಹಿಂದಿನ ಕಲೆಗಾರರ ಕರಕೌಶಲದ ಧಿಕ್ಕಾರವೋ ಅಥವಾ ಹೊಸ ಗಾಲದ ಶಿಲ್ಪಶಾಸ್ತ್ರದ ಆವಿಷ್ಕಾರವೋ ಏನೋ ! ಏಕೆಂದರೆ, ಯಾವ ಹಸ್ತಿದಂತದ ಸಿಂಹಾಸನದಲ್ಲಿ ಕೊರೆದು ಮೂಡಿಸಿರುವ, ಮಹಾಕವಿ ವ್ಯಾಸ ವಾಲ್ಮೀಕಿಗಳ ರಾಮಾಯಣ ಮಹಾಭಾರತದ ರಸಸನ್ನಿವೇಶದ ಚಿತ್ರಗಳನ್ನು ಬಹುಕಾಲ ಚೆನ್ನಾಗಿ ಅಭ್ಯಾಸ ಮಾಡಿ ಸ್ವಾಧೀನಪಡಿಸಿಕೊಂಡ ಕಲಾ ದರ್ಶನದ ಪ್ರತಿಭೆಯ ದಿವ್ಯಾಂಜನದ ಹೊಳಪು ಬಳಿದ ಕಣ್ಣು ಮಾತ್ರ ಗ್ರಹಿಸಿ ಆಸ್ವಾದಿಸಿ ಆನಂದಿಸಲು ಸಮರ್ಥವಾದೀತು! ಅದಿಲ್ಲದೆ ಬರಿಗಣ್ಣು ಸಿಂಹಾಸನದ ಹೊರಮೈ ನೋಟಕ್ಕೆ ಸಾಕು, ಅಷ್ಟೆ.

ನಾಟ್ಯಂ ಚೈತನ್ಯನಲಲಿತಂ ಪೂರ್ಣರಾಮಾಯಣಾಖ್ಯಂ
ಕಿಂ ವಾ ಕಾವ್ಯಂ ಜಯವಿಲಸಿತಂ ಕಿಂ ಮಹಾಭಾರತಾಹ್ವಮ್ ।
ಭಾವವ್ಯಕ್ತಿಪ್ರಕಟನಪಟೂಲ್ಲೇಖಶಿಲ್ಪಂ ವಿಶಾಲಂ
ಚಿತ್ರೈಶ್ಚೇತೋಹರಮಿಭರದೋಟ್ಟಂಕಿತಂ ಸಿಂಹಪೀಠಮ್ ॥ ೮೨

ಆನೆಯ ದಂತದಿಂದ ರಚಿತವಾದ ಸಿಂಹಾಸನವು ಕಣ್ಣಿಗೆ ಮಧುರವಾದ ವೇಷ ಭೂಷಣಗಳಿಂದ ಒಪ್ಪುವ ನಟರು ಅಭಿನಯಿಸಿದ ಪೂರ್ಣ ರಾಮಾಯಣವೆಂಬ ದೃಶ

ರೂಪವಾಗಿರಬಹುದೇ ? ಮತ್ತು ಪಾಂಡವರ ವಿಜಯದಿಂದ ಶೋಭಿಸುವ ಮಹಾಭಾರತವೆಂಬ ಮಹಾಕಾವ್ಯವಾಗಿರಬಹುದೇ? ಏಕೆಂದರೆ, ಅಗಲವಾದ ಆನೆಯ ದಂತದ ಸಿಂಹಾಸನದಲ್ಲಿ ಕೆತ್ತಿ ಬಿಡಿಸಿದ ಶ್ರೀರಾಮ, ಸೀತೆ, ಲಕ್ಷ್ಮಣ, ಗುಹ, ಹನುಮಂತ, ಸುಗ್ರೀವ, ವಿಭೀಷಣ, ಮಂಡೋದರಿ, ರಾವಣ ಮುಂತಾದ ರಾಮಾಯಣದ ಚಿತ್ರಗಳೂ ಮತ್ತು ಭೀಷ್ಮ, ದ್ರೋಣ, ಅರ್ಜುನ, ಕರ್ಣ, ಅಭಿಮನ್ಯು, ಯುಧಿಷ್ಠಿರ, ಭೀಮ, ದ್ರೌಪದಿ, ಶಲ್ಯ, ಕೌರವ, ಧೃತರಾಷ್ಟ್ರ ಮುಂತಾದ ಮಹಾಭಾರತದ ಚಿತ್ರಗಳೂ. ಆಯಾಯ ಸಂದರ್ಭಕ್ಕೆ ಉಚಿತವಾದ ರಸಭಾವಗಳನ್ನು ಹೊರಹೊಮ್ಮಿಸುವಂತೆ ಇವೆ. ಸುಂದರ ಕಲಾತ್ಮಕವಾಗಿ, ಕೆತ್ತಿದ ಈ ಮುದ್ದಾದ ಮೂರ್ತಿಗಳು ರಸಿಕರ ಮನಸ್ಸನ್ನು ಸೂರೆಗೈಯುತ್ತಿವೆ.

**ಯತ್ರೋತ್ಕೀರ್ಣೋ ನಿಶಿತಶರಸಂಘಾತಸಾದ್ರ್ರಕ್ಷತಾಂಗೋ**
**ವೃದ್ಧೋ ಭೀಷ್ಮೋ ರಣಭುವಿ ಶರವ್ರಾತತಲ್ಪೇ ಶಯಾನಃ ।**
**ನ್ಯಸ್ತಂ ಪುಸ್ತಂ ಕಿಮು ಸಮರಶೌರ್ಯಾನುಬಂಧಪ್ರಶಸ್ತಿ-**
**ನ್ಯಸ್ತಂ ಭ್ರಾಜತ್ಯನಿತರಗುಣಪ್ರಾಪಕಂ ವ್ಯಾಸಪೀಠೇ ॥** ೬೩

ಸಿಂಹಾಸನದಲ್ಲಿ ಕೊರೆದ ಭೀಷ್ಮಪರಾಜಯದ ಚಿತ್ರಣ ಹೀಗೆ ಇದೆ – ಕುರುವೃದ್ಧನೂ ಮಹಾವೀರನೂ ಆದ ಭೀಷ್ಮನು (ಸ್ವೇಚ್ಛಾಮರಣಿ, ರಣರಂಗದಲ್ಲಿ ಅರ್ಜುನನು ಶಿಖಂಡಿಯನ್ನು ಮುಂದು ಮಾಡಿಕೊಂಡು ತನಗೆ ಎದುರಾದಾಗ ಭೀಷ್ಮನು ತನ್ನ ಪ್ರತಿಜ್ಞೆಯಂತೆ ಶಿಖಂಡಿಯ ಬಾಣಗಳಿಗೆ ಪ್ರತಿಯಾಗಿ ಬಾಣಗಳನ್ನು ಹೊಡೆಯಲಿಲ್ಲ. ಅರ್ಜುನನ ಹರಿತವಾದ ಅಸಂಖ್ಯಾತ ಬಾಣಗಳು ಗರಿತನಕ ಆತನ ಮೈಗೆ ಹೊಕ್ಕು ಬೆನ್ನಿನಲ್ಲಿ ಹೊರಟವು. ನಿಲ್ಲಲು ಸಾಧ್ಯವಾಗದೇ ಭೀಷ್ಮನು ಒರಗಿದನು ಆತನ ಮೈ ನೆಲವನ್ನು ಸೋಂಕದೇ ಬಾಣಗಳ ಮೇಲೆಯೇ ನಿಂತಿತು ) ಹೀಗೆ ಅಂಬಿನ ಹಾಸಿಗೆಯ ಮೇಲೆ ಒರಗಿದ ಭೀಷ್ಮನು ಬಿಚ್ಚುಮಣೆಯ ಮೇಲೆ (ವ್ಯಾಸಪೀಠ) ಬಿಚ್ಚಿ ಇಟ್ಟಿರುವ ಸಮರದ ಪರಾಕ್ರಮದ ಸಂಬಂಧವಾಗಿ ಹೊಗಳಿದ ಶೂರರಲ್ಲದವರಿಗೆ ದೊರಕದ, ಪ್ರಶಸ್ತಿಯ ಪುಸ್ತಕವೋ ಎಂಬಂತೆ ಕಂಗೊಳಿಸಿದನು.*

**ಏಕಾಕೀ ಯಃ ಕುಶಲಮತಿರಾಯೋಧನೇ ದುಷ್ಪ್ರಧರ್ಷ್ಯಃ**
**ಸೌಭದ್ರೇಯಃ ಪ್ರಖರವಿಶಿಖೈರಾರ್ದಯದ್ಧಾರ್ತರಾಷ್ಟ್ರಾನ್ ।**
**ವ್ಯಂಗೀಭೂತೋಽಪ್ಯರಿಭಿರನಯೈಃ ಶೌರ್ಯಸಾರಃ ಸ ಬಾಲೋ**
**ಯೋಧಂ ಯೋಧಂ ವಿಲಸತಿತರಾಂ ಯಸ್ಯ ಶಿಲ್ಪೇಽಭಿಮನ್ಯುಃ ॥**

---

* ಸಂಪತಂತಮಭಿಪ್ರೇಕ್ಷ್ಯ ಮಹಾತ್ಮಾನಂ ಪಿತಾಮಹಂ ।
ಸಹ ಭೀಷ್ಮೇಣ ಸರ್ವೇಷಾಂ ಪ್ರಾಪತನ್ ಹೃದಯಾನಿ ನಃ ।
ಸ ಪಪಾತ ಮಹಾಬಾಹುಃ ವಸುಧಾಮನುನಾದಯನ್ ॥ ೯೦
ಇಂದ್ರಧ್ವಜ ಇವೋತ್ಸೃಷ್ಟಃ ಕೇತುಃ ಸರ್ವಧನುಷ್ಮತಾವರ್ ।
ಧರಣೀಂ ನ ಸ ಪಸ್ಪರ್ಶ ಶರಸಂಘೈಃ ಸಮಾವೃತಃ॥೯೧(ಭೀಷ್ಮಪರ್ವಣಿ೧೧೯ಅಧ್ಯಾಯ)

ಆ ಆನೆಯ ದಂತದ ಸಿಂಹಾಸನದಲ್ಲಿ ಕೆತ್ತಿರುವ ವೀರಬಾಲಕನಾದ ಅಭಿಮನ್ಯುವಿನ ಸಮರದ ಚಿತ್ರವಿನ್ಯಾಸ ಒಪ್ಪುವಂತಹದು. ಅಸಹಾಯ ಶೂರನಾದ ಆ ಸುಭದ್ರಾ ಕುಮಾರನು ಒಬ್ಬನೇ ಚಕ್ರವ್ಯೂಹವನ್ನು ಹೊಕ್ಕು ಭೇದಿಸಿದನು. ಸಮರ ಪಟುವಾದ ಆತನನ್ನು ಕದನದಲ್ಲಿ ಯಾರಿಗೂ ಹಿಮ್ಮೆಟ್ಟಿಸಲು ಆಗಲಿಲ್ಲ. ಪರಾಕ್ರಮವೇ ತಿರುಳಾದ ಆ ಹುಡುಗನು ತೀಕ್ಷ್ಣವಾದ ಬಾಣಗಳಿಂದ ಕೌರವರನ್ನು ಹೊಡೆದು ನೋಯಿಸಿದನು. ಕುಟಿಲ ನೀತಿಯುಳ್ಳ ಹಗೆಗಳು ಹಿಂದಿನಿಂದ ಆತನ ತೋಳನ್ನು ಕತ್ತರಿಸಿದರೂ ಹಿಂಜರಿಯದ ಆ ಅಭಿಮನ್ಯುವು ತನ್ನ ಒಂದು ತೋಳಿನಿಂದಲೇ ಬಾರಿಬಾರಿಗೂ ಶತ್ರುಗಳೊಡನೆ ಹೊಡೆದಾಡಿ ಕಂಗೊಳಿಸುತ್ತಿದ್ದಾನೆ. ಹೀಗೆ ಅಲ್ಲಿ ಅಭಿಮನ್ಯುವಿನ ಚಿತ್ರಣ ಹೃದ್ಯವಾಗಿದೆ.

**ಯತ್ರಾರ್ಧೇಂದುಪ್ರತಿಮಫಲಕನ್ಯಸ್ತಪಾಂಚಾಲಿಕಾನಾಂ**
**ಶ್ರೇಣಿಃ ಸೀತಾರಮಣವಿಜಯಶ್ರೀಧೃತಾ ದರ್ಪಣೀವ ।**
**ಯತ್ರಾಧಸ್ತಾತ್ಕಿಮು ಕುರುಪತೇಃ ಸೈನ್ಯದುರ್ಧರ್ಷಪಾರ್ಥ-**
**ಪ್ರೋದ್ಯಚ್ಚಾಪೋಚ್ಚಲದಿಷುಜಯಾಶಂಸಿನೀ ವೀರಲಕ್ಷ್ಮೀಃ ॥**

ಸಿಂಹಾಸನದ ಮೇಲೆ ಒರಗುಮಣೆಯಂತೆ ಅರ್ಧಚಂದ್ರಾಕಾರವಾದ ದಂತದ ಹಲಗೆಯಲ್ಲಿ ಕೆತ್ತಿರುವ ಶ್ರೀ ರಾಮಾಯಣದ ಕಥೆಯ ಘಟನಾವಳಿಯ ಸುಂದರವಾದ ಗೊಂಬೆಗಳ ಸಾಲು ಸೀತಾವಲ್ಲಭನಾದ ಶ್ರೀರಾಮಚಂದ್ರನ ವಿಜಯಲಕ್ಷ್ಮಿಯು ಕೈಗನ್ನಡಿಯೋ ಎಂಬಂತೆ ಇದೆ. ಯಾವ ಸಿಂಹಾಸನದ ಕೆಳಗಡೆ ಎದುರಿನ ಚೌಕಟ್ಟಿನಲ್ಲಿ ಕೆತ್ತಿರುವ ಕೌರವ ಪಾಂಡವರ ಸಮರದ ವಿವಿಧ ಘಟನೆಯ ಚಿತ್ರಗಳೊಳಗೆ ಕರ್ಣಾರ್ಜುನರ ಯುದ್ಧದ ಚಿತ್ರಣ ಮನೋಹರವಾಗಿದೆಯೋ, ಅಲ್ಲಿ ಪಾರ್ಥನು ಕರ್ಣನೊಡನೆ ಹೋರಾಡುತ್ತಿರುವನು. ಅರ್ಜುನನ ಬಾಣದ ಏಟಿಗೆ ಕೌರವ ಸೈನ್ಯ ಹಿಮ್ಮೆಟ್ಟುತ್ತಿದೆ. ಅತ್ಯಂತ ಶೌರ್ಯೋತ್ಸಾಹದಿಂದ ಕದನಗೈಯುತ್ತಿರುವ ವಿಜಿಗೀಷು ಪಾರ್ಥನು ಎತ್ತಿಹಿಡಿದ ಗಾಂಡೀವ ಬಿಲ್ಲಿನಿಂದ ನೂರಾರು ಅಂಬುಗಳು ಚಿಮ್ಮಿ ಹರಿದು ಅರಿಗಳ ತಲೆಗಳನ್ನು ಅರಿಯುತ್ತಿರಲು ವೀರಲಕ್ಷ್ಮಿಯು ಅರ್ಜುನನಿಗೆ ಜಯವಾಗಲೆಂದು ಹಾರೈಸುತ್ತಿರುವಳೋ ಎಂಬಂತೆ ಸಮರದಲ್ಲಿ ಅರ್ಜುನನ ಮೇಲುಗೈ ಎದ್ದು ತೋರುತ್ತದೆ.

**ಓತಪ್ರೋತಾಸ್ತರಣಪಿಹಿತೇನೋಪಬರ್ಹೇಣ ಯುಕ್ತಂ**
**ವೃತ್ತಂ ಕೂರ್ಮಾಕೃತಿಲಘುತರಂ ದಿವ್ಯಶಯ್ಯಾಸನಾರ್ಥಮ್ ।**
**ಓಂಕಾರಾರ್ಥಾನ್ವಿತಪರಮತತ್ತ್ವಾನುಸಂಧಾನಶೀಲಂ**
**ತಸ್ಮಿನ್ ಶಂಕೇ ಹೃದಯಕಮಲಂ ಸ್ಥಾಪಿತಂ ಪೀಠಮೇಕಮ್ ॥**

ಆ ಸಿಂಹಾಸನದ ನಡುವೆ ಆಮೆಯ ಬೆನ್ನಿನ ಆಕಾರವುಳ್ಳ ಉರುಟಾದ ಕಿರು ಮಣೆಯೊಂದು ಇಡಲ್ಪಟ್ಟಿದೆ ಅದು ಮೆತ್ತನೆಯ ಸೊಗಸಾದ ಹಾಸಿಗೆಯಿಂದ ಹೊದಿಸಲ್ಪಟ್ಟಿದೆ. ಇದಕ್ಕೆ ಹೊಂದಿಸಿ ಒರಗುದಿಂಬೊಂದನ್ನು ಪಕ್ಕದಲ್ಲಿ ಇರಿಸಲಾಗಿದೆ. ಆ ದಿಂಬಿಗೆ ಹಾಸುಹೊಕ್ಕಾಗಿ ಚೆನ್ನಾಗಿ ನೆಯ್ದ ಕಸೂತಿಹಾಕಿದ ರತ್ನಗಂಬಳಿಯ ಮುಸುಕು ಇದೆ. ಹೀಗೆ ಇರುವ ಆ ವರ್ತುಲಾಕಾರವಾದ ಪುಟ್ಟ ಪೀಠವು ಓಂಕಾರವಾಚ್ಯವಾದ ಪರಬ್ರಹ್ಮವನ್ನು ಸತತವೂ ಚಿಂತಿಸುವ ಸ್ವಭಾವವುಳ್ಳ ಯೋಗಿಗಳ ಹೃದಯ ಕಮಲವೋ ಎಂಬಂತೆ ಕಂಗೊಳಿಸುತ್ತದೆ.

**ಮುಕ್ತಾಗುಚ್ಛಾಂಚಲವಲಯಿತಂ ರೌಪ್ಯದಂಡೋಪಶೋಭಿ**
**ಕ್ಷೌಮಾಚ್ಛನ್ನಂ ಕನಕಕಲಶೋದ್ಭಾಸಿ ಶುಕ್ಲಾತಪತ್ರಮ್ ।**
**ತತ್ರೋನ್ನದ್ಧಂ ವಿಯತಿ ಸುಯಶೋಮಂಡಲಂ ವ್ಯಾಪ್ನುವಾನಂ**
**ಜ್ಯೋತ್ಸ್ನಾಪ್ರಖ್ಯಂ ಕಿಮು ವಿಜಯತೇ**
**ಧರ್ಮಸಾಮ್ರಾಜ್ಯಲಕ್ಷ್ಮ್ಯಾಃ ॥** ೮೭

ಆ ದಂತದ ಸಿಂಹಾಸನದ ಶಿರಃ ಸ್ಥಾನದಲ್ಲಿ ಶ್ವೇತಚ್ಛತ್ರಿಯೊಂದನ್ನು ಅಳವಡಿಸಲಾಗಿದೆ. ಆ ಬೆಳ್ಕೊಡೆಗೆ ಒಳ್ಳೆಯ ಬೆಳ್ಳಿಯ ಕೋಲು ಇದೆ. ತೆಳ್ಳಗಿರುವ ಬೆಲೆಬಾಳುವ ರೇಶ್ಮೆಯ ಬಟ್ಟೆಯು ಅದರ ಸುತ್ತಲಿರುವ ಹೊದಿಕೆ. ಬಟ್ಟನೆಯ ಆಕಾರದ ಆ ಬಿಚ್ಚಿದ ಬೆಳ್ಗೊಡೆಯ ಅಂಚಿಗೆ ಹೆಣೆದ ಮುತ್ತಿನ ತೋರಣದ ಕುಚ್ಚುಗಳು ವೃತ್ತಾಕಾರವಾಗಿ ಶೋಭಿಸುತ್ತಿವೆ. ಜೋತುಬಿದ್ದಿರುವ ಮುತ್ತಿನ ಅಂಚಿನ ಆ ಶ್ವೇತಚ್ಛತ್ರವು ಆಕಾಶದಲ್ಲಿ ಸುತ್ತಲೂ ಉರುಟಾಗಿ ಹರಡಿರುವ, ಬೆಳದಿಂಗಳ ಹಾಗೆ ಬೆಳ್ಳಗಿರುವ ಧರ್ಮಸಾಮ್ರಾಜ್ಯ ದೇವತೆಯಾದ ಮಹಾಲಕ್ಷ್ಮಿಯ ಯಶೋಮಂಡಲವೋ ಎಂಬಂತೆ ಪ್ರಕಾಶಿಸುತ್ತಿದೆ.

**ದ್ವಾಸ್ಸ್ಥಃ ಸಾರಸ್ವತಕುಲಭವೋ ಲಕ್ಷ್ಮಣಾಖ್ಯಃ ಕದಾಚಿತ್**
**ಭಕ್ತಃ ಸಿಂಹಾಸನಪರಿಸರಂ ರಕ್ಷಿತುಂ ಯೋ ನಿಯುಕ್ತಃ ।**
**ಪೀಠಸ್ಯಾಸ್ಯಾಭಿನವಕಲಾಸೌಷ್ಠವಂ ದರ್ಶಯಿಷ್ಯನ್**
**ಯಾವಚ್ಚೈತತ್ಸ್ಪೃಶತಿ ಗುರುರಾಟ್ತೇನ ತಾವನ್ನ್ಯಷೇಧಿ॥** ೮೮

ಶ್ರೀಮಠದಲ್ಲಿ ಸಾರಸ್ವತ ಬ್ರಾಹ್ಮಣ ವಂಶದಲ್ಲಿ ಜನಿಸಿದ ಲಕ್ಷ್ಮಣರಾಯನೆಂಬ ಸ್ವಾಮಿಭಕ್ತ ಸೇವಕನೊಬ್ಬನಿದ್ದನು. ಗುರುಗಳು ಈ ಶ್ರದ್ಧಾವಂತ ಲಕ್ಷ್ಮಣರಾಯನಿಗೆ ಹೊಸದಾಗಿ ತಯಾರಾದ ದಂತದ ಸಿಂಹಾಸನದ ರಕ್ಷಣೆಯ ಉಸ್ತುವಾರಿ ಕೆಲಸವನ್ನು ನೇಮಿಸಿದರು. ಒಮ್ಮೆ ಶ್ರೀರಾಮಚಂದ್ರಭಾರತೀಸ್ವಾಮಿಗಳೇ ಖುದ್ದಾಗಿ ಯಾರಿಗೋ ಸಿಂಹಾಸನದ ಕಲಾಸೌಂದರ್ಯದ ಘಟನೆಗಳನ್ನು ಎತ್ತಿ ತೋರಿಸುವವರಾಗಿ ಸಿಂಹಾಸನದ ಮೇಲೆ ಕೈಯಿಡುವುದರಲ್ಲಿ ಇದ್ದರು. ಕೂಡಲೇ ಶ್ರೀ ಲಕ್ಷ್ಮಣ

ರಾಯನು "ಯಾರೂ ಸಿಂಹಾಸನವನ್ನು ಮುಟ್ಟಕೂಡದು. ಕೈ ತೆಗೆಯಿರಿ." ಎಂದು ಗರ್ಜಿಸಿ ಶ್ರೀ ಸ್ವಾಮಿಯವರನ್ನು ತಡೆದನು.

**ಜ್ಞಾತ್ವಾಽಽಚಾರ್ಯೋಽಸ್ಯನುಪದಮಸಾಧಾರಣೀಂ ಭಕ್ತಿಮುತ್ತಾಂ**
**ನಿಷ್ಠಾಂ ಚಾಸ್ಯ ಪ್ರಮುದಿತಮನಾಃ ಸ್ವಾಮಿನಿರ್ದಿಷ್ಟಕಾರ್ಯೇ ।**
**ಶ್ಲಾಘಾಪೂರ್ವಂ ಪ್ರತಿನಿವವೃತೇ ಪಾಣಿಸಂಸ್ಪರ್ಶನಾತ್ ದ್ರಾಕ್**
**ಯಸ್ಮಾದಾರ್ಯೈಃ ಸ್ವಕೃತನಿಯಮೋಲ್ಲಂಘನಂ ನೋ ವಿಷೇಹೇ॥**

ಕೂಡಲೇ ಗುಣಪಕ್ಷಪಾತಿಗಳಾದ ಗುರುಗಳು ಈತನ ಅಸಾಧಾರಣವಾದ ಭಕ್ತಿಯನ್ನೂ ಸ್ವಾಮಿಗಳು ನಿಯಮಿಸಿರುವ ಕೆಲಸದ ಮೇಲಣ ಶ್ರದ್ಧೆಯನ್ನೂ ತಿಳಿದರು. ಭಲೇ! ಭಲೆ! ಎಂದು ಸೇವಕ ಲಕ್ಷ್ಮಣರಾಯನ ಕಾರ್ಯನಿಷ್ಠೆಗೆ ಮೆಚ್ಚಿ ಸಂತುಷ್ಟರಾಗಿ, ಸಿಂಹಾಸನದ ಮೇಲೆ ಕೈಯಿಡದೇ ಹಿಂದಿರುಗಿದರು. ಏಕೆಂದರೆ, ಶ್ರೀರಾಮಚಂದ್ರಭಾರತೀಸ್ವಾಮಿಗಳು ಸಿಂಹಾಸನವನ್ನು ಯಾರೂ ಕೈಯಿಂದ ಮುಟ್ಟಕೂಡದೆಂದು ತಾವೇ ಅಪ್ಪಣೆಮಾಡಿ, ತಾವಾಗಿಯೇ ತಾವು ಮಾಡಿದ ನಿಯಮವನ್ನು ಮುರಿಯಲು ಬಯಸಲಿಲ್ಲ.

**ನಿರ್ಮಾಪ್ಯೈತದ್ಬಹುಧನಜನ್ಯೈರ್ನೈಕಸಂವತ್ಸರಾಂತಂ**
**ಲೋಕೇಽಪೂರ್ವಂ ಕಿಮಪಿ ಗುರುರಾಡಾಜಹಾರಾದ್ಭುತಾರ್ಥಮ್ ।**
**ಸ್ಥಾನೇ ಚೈತತ್ಪರಮಕೃಪಯಾ ತೇನ ಶಿಲ್ಪಾಗಮಶ್ರೀ–**
**ರ್ಲಬ್ಧೋತ್ಕರ್ಷಾ ಜಯತಿ ನಿತರಾಂ ಸಾಂಪ್ರತಂ ತತ್ಕುಲೇಷು ॥**

ಶ್ರೀಸ್ವಾಮಿಗಳ ಆಜ್ಞೆಯ ಮೇಲೆ ಮರದ ಭಕ್ತರೂ, ಕಲಾವಿದರೂ, ಕಾರ್ಮಿಕರೂ,ಅಭಿಮಾನಿಗಳೂ ಮುಂತಾಗಿ ಹಲವರು ಸೇರಿ ಅನೇಕ ವರ್ಷಗಳ ತನಕ ಸತತವಾಗಿ ಕೆಲಸ ನಡೆದು ಹೊಸ ದಂತದಸಿಂಹಾಸನವು ತಯಾರಾಯಿತು. ಆಚಾರ್ಯರು ಇದನ್ನು ಹೊಸದಾಗಿ ಮಾಡಿಸಿ ಹಿಂದೆಂದೂ ತಯಾರಾಗದಿರುವ ಅತ್ಯಂತ ಆಶ್ಚರ್ಯಕರವಾದ ಅಪೂರ್ವವಾದ ಶಿಲ್ಪವನ್ನು ಜನತೆಯ ಎದುರಿಗೆ ತಂದರು. ಇದು ಅತ್ಯಂತ ಸಮಂಜಸ, ಏಕೆಂದರೆ ಶ್ರೀಗುರುಗಳ ಪರಮದಯೆಯಿಂದಲೂ, ಇದೇ ಮೊದಲಾಗಿ ಬೆಳಕಿಗೆ ಬಂದ ಆ ದಂತದ ಸಿಂಹಾಸನದ ನೂತನ ನಿರ್ಮಾಣದಿಂದಲೂ ಗುಡಿಗಾರರ ಕೆಲಸಕ್ಕೆ ಪ್ರೋತ್ಸಾಹ ದೊರೆಯಿತು ಈಗಲೂ ಗುಡಿಗಾರರಮನೆತನದಲ್ಲಿ ಶಿಲ್ಪಾಗಮದ ಸಂಪತ್ತು ಉತ್ಕರ್ಷಪಡೆದು ಮೆರೆಯುತ್ತಿದೆ.

**ಶಿಷ್ಯೇ ಕಾಶ್ಯಾಂ ನಿವಸತಿ ನಿಜೇ ರಾಘವೇಂದ್ರಾಭಿಧಾನೇ**
**ವಿದ್ಯಾಹೇತೋರ್ವಿಬುಧಸವಿಧೇ ರಾಮಚಂದ್ರೋ ಗುರುರ್ನಃ ।**
**ನವ್ಯಂ ಸಿಂಹಾಸನಮಿದಮಧಾರೋಢುಮಾಪ್ತೈಃ ಸ್ವಶಿಷ್ಯೈಃ**
**ವಾರಂ ವಾರಂ ವಿನಯಮಧುರೈಃ ಪ್ರಾರ್ಥಿತಶ್ಚಾನುಮೇನೇ ॥೯೧**

ತಮ್ಮ ಶಿಷ್ಯರಾದ ಶ್ರೀ ರಾಘವೇಂದ್ರಭಾರತೀಗಳು ವಿದ್ಯಾಸಂಪಾದನೆಗಾಗಿ ಪಂಡಿತರ ಹತ್ತಿರ ಕಾಶಿಯಲ್ಲಿ ವಾಸಿಸುತ್ತಿದ್ದರು. ಆಗ ಮಠದ ಆಪ್ತರಾದ ಶಿಷ್ಯರು ಗುರುಗಳ ಹತ್ತಿರ "ತಾವು ಈ ಹೊಸ ಆನೆಯ ದಂತದ ಸಿಂಹಾಸನದಲ್ಲಿ ಮಂಡಿಸ ಬೇಕು ಸಿಂಹಾಸನಾರೂಢರಾದ ತಮ್ಮನ್ನು ನೋಡಿ ಕಣ್ತುಂಬ ತಣಿಯಬೇಕು 'ಎಂಬ ಅಪೇಕ್ಷೆ ಶಿಷ್ಯರಿಗೆ ಇದೆ. ಆದುದರಿಂದ ತಾವು ಈ ಸಿಂಹಾಸನಾರೋಹಣದ ಉತ್ಸವಕ್ಕೆ ಸಮ್ಮತಿಸಬೇಕೆಂದು ಹಲವು ಬಾರಿ ಬಂದು ಬೇಡಿಕೊಂಡರು. ಶಿಷ್ಯವತ್ಸಲರಾದ ಗುರುಗಳು ಶಿಷ್ಯರ ಬೇಡಿಕೆಗೆ ಸಮ್ಮತಿಸಿದರು.

* ಇಂದ್ವಶ್ವಾಶಾಶಶಧರಮಿತೇ ಶಾಲಿವಾಹೇ ಶಕಾಬ್ದೇ
ಮಾಘೇಽಮಾಯಾಂ ಶುಭಕರದಿನೇ ಸರ್ವಧಾರ್ಯಾಖ್ಯವರ್ಷೇ ।
ಆರೂಢೋಽಯಂ ಗುರುಕುಲಪತಿಃ ಖ್ಯಾತಗೋಕರ್ಣತೀರ್ಥೇ
ಸಾಯಂಕಾಲೇ ಗಜರದಕೃತಂ ಸಿಂಹಪೀಠಂ ನವೀನಮ್ ॥ ೯೨

ಶಾಲಿವಾಹನಶಕ ೧೮೧೦ ನೆಯ ಸರ್ವಧಾರೀ ಸಂವತ್ಸರದ ಮಾಘ ಬಹುಳ ಅಮಾವಾಸ್ಯೆಯ ತಿಥಿಯಂದು ಶ್ರೀಮದಾಚಾರ್ಯರಾದ ರಾಮಚಂದ್ರಭಾರತೀ ಸ್ವಾಮಿಗಳು ಗೋಕರ್ಣ ಕ್ಷೇತ್ರದಲ್ಲಿ ಸಂಜೆ ತಾವು ಹೊಸದಾಗಿ ಮಾಡಿಸಿದ ಆನೆಯ ದಂತದ ಸಿಂಹಾಸನವನ್ನು ಆರೋಹಣ ಮಾಡಿದರು.

ತತ್ರದ್ದೇವಾನ್ನಿಧಿವದಥ ಹರ್ಯಕ್ಷಪೀಠಾಧಿವಾಸಾ-
ನರ್ಚಿತ್ವಾಸೌ ಗಿರಿಶಯಮುಮಾನಾಥಮೀಶಂ ಚ ನತ್ವಾ ।
ಅಧ್ಯಾರುಕ್ಷತ್ತ್ರಿಪುರಜಯಿನಃ ಸನ್ನಿಧೌ ಸಿಂಹಪೀಠಂ
ಗೋಕರ್ಣೇ ಸಂಯಮಿವರವೃಢೋ ಭಾರತೀರಾಮಚಂದ್ರಃ॥೯೩

ಶ್ರೀಗೋಕರ್ಣ ಕ್ಷೇತ್ರದಲ್ಲಿರುವ ತ್ರಿಪುರಸಂಹಾರಿಯಾದ ಶ್ರೀ ಮಹಾಬಲೇಶ್ವರ ಸ್ವಾಮಿಯ ದೇವಾಲಯದ ಪಶ್ಚಿಮ ಪೌಳಿಯಲ್ಲಿ ಅಂದು ಹೊಸ ಆನೆ ದಂತದ ಸಿಂಹಾಸನಾರೋಹಣೋತ್ಸವವು ಏರ್ಪಟ್ಟಿತ್ತು. ಶ್ರೀಮದಾಚಾರ್ಯರಾದ ರಾಮ ಚಂದ್ರಭಾರತೀಸ್ವಾಮಿಗಳು ಸಿಂಹಾಸನದಲ್ಲಿ ಸನ್ನಿಹಿತರಾದ ದೇವತೆಗಳಿಗೆ ವಿಧಿವತ್ತಾಗಿ ಮೊದಲು ಪೂಜೆ ಸಲ್ಲಿಸಿದರು. ತಾವು ಗೌರೀ ಸಹಿತನಾದ ಶ್ರೀ ಮಹಾಬಲೇಶ್ವರ ಸ್ವಾಮಿಗೆ ವಂದಿಸಿದ ಬಳಿಕ ಅವರು ವಿಧಿವತ್ತಾಗಿ ನೂತನ ಹಸ್ತಿದಂತದ ಸಿಂಹಾಸನ ವನ್ನು ಆರೋಹಣ ಮಾಡಿದರು. ಆಗ ಅಲ್ಲಿ ನೆರೆದಿದ್ದ ಸಮಸ್ತ ಭಕ್ತರೂ

---

* ಕ್ರಿಸ್ತಾಬ್ದ ೧೮೮೯ನೆಯ ಫೆಬ್ರವರಿ ೨೭ನೆಯ ತಾರೀಖು ಸೋಮವಾರ ಸಿಂಹಾಸನಾ ರೋಹಣವಾದದ್ದು.

ವಿದ್ವದ್ವೈದಿಕರೇ ಮುಂತಾದ ಶಿಷ್ಯರೂ ಸಹ ಫಲಪುಷ್ಪಕಾಣಿಕೆಗಳನ್ನು ಅರ್ಪಿಸಿ ಗುರುಗಳಿಗೆ ಅಭಿವಂದಿಸಿದರು.

ಕುಹ್ವಾಮುಸ್ಯಾಮುಪಶಮನಿಧೇರುತ್ಸವೋ ಯಃ ಪ್ರವೃತ್ತೋ
ವಿದ್ಯಾರಣ್ಯಾಹ್ವಯಗುರುಕುಲಾಚಾರ್ಯಸಮ್ಮಾನಿತಸ್ಯ ।
ಪ್ರಾಚೀನಸ್ಯ ಪ್ರಥಿತಯಶಸಸ್ತಸ್ಯ ಚಿದ್ಬೋಧನಾಮ್ನಃ
ಪೀಠಾರೋಹೋತ್ಸವಶುಭದಿನಸ್ಮಾರಕೋಽಪ್ಯತ್ರ ಸೋಽಭೂತ್ ॥

ಉಪಶಾಂತಿನಿಧಿಯಾದ ಶ್ರೀರಾಮಚಂದ್ರಭಾರತೀಸ್ವಾಮಿಗಳು ಮಾಘ ಬಹುಳ ಅಮಾವಾಸ್ಯೆಯಂದು ಮಠದ ನವ್ಯದಂತದ ಸಿಂಹಾಸನವನ್ನು ಹತ್ತಿದರಷ್ಟೆ. ಗೋಕರ್ಣದ ಮಹಾಬಲೇಶ್ವರ ದೇವಸ್ಥಾನದಲ್ಲಿ ನಡೆದ ಈ ಮಹೋತ್ಸವವು ಶ್ರೀಮದ್ರಾಮಚಂದ್ರಾಪುರದ ಗುರುಪರಂಪರೆಯಲ್ಲಿ ಹಿಂದೆ ಹತ್ತನೆ ತಲೆಯವರಾಗಿದ್ದ, ಶೃಂಗೇರಿ ಮಠದ ಪೀಠಾಧಿಪತಿಗಳಾದ ಶ್ರೀ ವಿದ್ಯಾರಣ್ಯಸ್ವಾಮಿಗಳಿಂದ ಸಿಂಹಾಸನ ಕಿರೀಟಾದಿಗಳನ್ನಿತ್ತು ಸಮ್ಮಾನಿತರೂ ಆಗಿದ್ದ ಶ್ರೀ ಚಿದ್ಬೋಧಭಾರತೀ ಸ್ವಾಮಿಗಳ ಸಿಂಹಾಸನಾರೋಹಣೋತ್ಸವದ ಸ್ಮಾರಕವೋ ಎನ್ನುವಂತೆ ಇದ್ದಿತು.*

ಮಂದಾಕ್ರಾಂತೈಃ ಕ್ರಮಿಕವಿಧಯಾ ರಾಮಚಂದ್ರಾರ್ಯಪೀಠೇ
ವೃತ್ತಂ ಪದ್ಯೈರಹಮಕಥಯಂ ಸದ್ಗುರೂಣಾಂ ಯಥಾಸ್ವಮ್ ।
ಉದ್ಯದ್ಭಂಗಾಕುಲಮತಿಚಲಂ ಪಂಕಿಲಂ ಚಿತ್ತತೀರ್ಥಂ
ಶುದ್ಧೀಕರ್ತುಂ ಕತಕತು§ ಗುರೋಃ ಸ್ತುತ್ಯಚಾರಿತ್ರಯೋಗಃ ॥

ಶ್ರೀ ಮದ್ರಾಮಚಂದ್ರಾಪುರದ ಮಠದ ಪರಂಪರೆಯಲ್ಲಿ ಅನುಕ್ರಮವಾಗಿ ಬಂದ ಆಚಾರ್ಯರ ಇತಿವೃತ್ತವನ್ನು ಮೆಲ್ಲಮೆಲ್ಲಗೆ ಅಡಿಯಿಟ್ಟು ರಸಿಕರ ಹೃದಯ ಮುಟ್ಟುವಂತಹ ಮಂದಾಕ್ರಾಂತ ಎಂಬ ವೃತ್ತದ ಕವಿತೆಗಳಿಂದ ನಿರೂಪಿಸಿದೆನು. ಏಕೆಂದರೆ ಈ ಚಿತ್ತವೆಂಬುದು ಸರೋವರದಂತಿದೆ. ಇಲ್ಲಿ ಮೇಲೆ ಏಳುವ ವಿಕ್ಷೇಪಗಳ ಹೆದ್ದೆರೆಗಳಿಂದ ಚಿತ್ತಸರೋವರದಲ್ಲಿ ಕೆಸರೆದ್ದಿದೆ. ಬಗ್ಗಡವಾದ ಈ ಚಿತ್ತದ ನಿರ್ಮಲತೆಗಾಗಿ ಸ್ತುತ್ಯವಾದ ಗುರುಗಳ ನಾಮಚಿಂತನವು ಕತಕದ ಬೀಜವಾಗಲಿ.

---

* ಶ್ರೀ ಚಿದ್ಬೋಧಭಾರತೀಸ್ವಾಮಿಗಳು ಶ್ರೀ ವಿದ್ಯಾರಣ್ಯರಿಂದ ಸನ್ಮಾನಿತರಾದದ್ದು ಮಾಘ ಬಹುಳ ಅಮಾವಾಸ್ಯೆಯಾದ್ದರಿಂದ ಈ ಸಿಂಹಾಸನಾರೋಹಣೋತ್ಸವವು ಅದರ ಸ್ಮಾರಕವೆಂದು ಉತ್ಪ್ರೇಕ್ಷೆ ಮಾಡಿದೆ.

§ ಕತಕ = ನೀರನ್ನು ಶುದ್ಧಮಾಡುವ ಬೀಜ. ನಾಮಧಾತು. ಆಚಾರಾರ್ಥೇ ಕ್ವಿಪ್

(ಮಾಲಿನೀವೃತ್ತಮ್)

ವ್ಯಜಯತ ಗುರುಮಾಲಾ ರಾಮಚಂದ್ರಾರ್ಯಪೀಠೇ
ಸಿತಸುರಭಿಯಶಃಶ್ರೀಶೋಭಮಾನಾ ಪುರಾಣೀ ।
ಸ್ಮೃತಿಪಥಮುಪನೀತಾ ಕ್ಷಾಲಿತಾಶೇಷಪಾಪಾ
ಪರಿಹೃತಭವತಾಪಾ ನಾಮಮಾಲೇವ ವಿಷ್ಣೋಃ ॥ ೯೬

ಇತಿ ಶ್ರೀ ಗುರುಕೃಪಾತರಂಗಿಣ್ಯಾಂ
ದ್ವಿತೀಯಸ್ತರಂಗಃ

ಶ್ರೀಮದ್ರಾಮಚಂದ್ರಾಪುರದ ರಘೂತ್ತಮ ಪೀಠದ ಪ್ರಾಚೀನವಾದ ಗುರುವರ್ಯರ ಈ ಪರಂಪರೆಯು ಶುಭ್ರವೂ ಸುಂದರವೂ ಆದ ಯಶೋಲಕ್ಷ್ಮಿಯಿಂದ ಕಂಗೋಳಿಸುತ್ತಾ ಸ್ಮರಣಮಾತ್ರದಿಂದ ಭಕ್ತರಾದ ಶಿಷ್ಯರ ಎಲ್ಲಾ ಪಾಪಗಳನ್ನೂ ಹೋಗಲಾಡಿಸುವ, ಸಂಸಾರದ ತಾಪವನ್ನು ಹೋಗಲಾಡಿಸಿ ಜರಾಮರಣರಹಿತವಾದ ಅಪವರ್ಗವನ್ನು ಕೊಡುವ ಶ್ರೀ ವಿಷ್ಣುವಿನ ದಿವ್ಯ ಸಹಸ್ರನಾಮಾವಳಿಯಂತೆ ಸರ್ವೋತ್ಕರ್ಷದಿಂದ ವಿರಾಜಿಸಿತು.

ಇಲ್ಲಿಗೆ ಶ್ರೀ ಗುರುಕೃಪಾತರಂಗಿಣಿಯಲ್ಲಿ
ಎರಡನೆಯ ತರಂಗ

## ಅಥ ತೃತೀಯಸ್ತರಂಗಃ

### (ಪಂಚಚಾಮರವೃತ್ತಮ್)

ಸಾಗರಾಂಬರಾಮನೋಜ್ಞಸಹ್ಯಶೈಲಸಾನುಷು
ಬ್ರಾಹ್ಮಣಾ ಹಿ ಹವ್ಯಕಾ ಇತಿ ಶ್ರುತಾ ವಸಂತಿ ಯೇ ।
ಸಾಗರೋಪಕಂಠವಾಸಿಸಜ್ಜನೇಷು ತೇಷ್ವಯಂ
ಮಾಗಲೂಗಣೇಶಭಟ್ಟನಾಮಕಃ ಸುಧೀರಭೂತ್ ॥ ೧

ಸುಂದರವಾದ ಕನ್ನಡನಾಡಿನ ಪಶ್ಚಿಮ ಘಟ್ಟವೇ ಸಹ್ಯಾದ್ರಿಯ ತಪ್ಪಲು ಪ್ರದೇಶ. ಆ ಸ್ಥಳದಲ್ಲಿ ಬ್ರಾಹ್ಮಣ ವರ್ಗದವರಲ್ಲಿ ಪ್ರಸಿದ್ಧರಾದ ಯಾವ ಹವ್ಯಕರು ವಾಸಿಸುತ್ತಿರುವರೋ ಅವರಲ್ಲಿ ಕೆಲವು ಸಜ್ಜನರು ಸಾಗರ ತಾಲ್ಲೂಕಿನ ಕರೂರು ಸೀಮೆಯಲ್ಲಿಯೂ ಇದ್ದಾರೆ. ಇವರೊಳಗೆ "ಮಾಗಲು" ಎಂಬ ಹಳ್ಳಿಯಲ್ಲಿ ವಾಸಿಸುತ್ತಿದ್ದ ದಿವಂಗತ ವೇದಮೂರ್ತಿ ಗಣೇಶ ಭಟ್ಟರು ಒಳ್ಳೆಯ ವೈದಿಕ ವಿದ್ವಾಂಸರಾಗಿದ್ದರು.

ಶಾಸ್ತ್ರಸಂಪ್ರದಾಯಶುದ್ಧವೈದಿಕಾನುರಾಗಿಣೀ
ಮಂತ್ರವರ್ಣಬೋಧಿತಾಧಿದೇವತಾಪ್ರಶಂಸಿನೀ ।
ಸಪ್ತತಂತುವೀತಿಹೋತ್ರವೇದಿಕಾವಿಹಾರಿಣೀ
ಯಸ್ಯ ಚಾಸ್ಯಮಂದಿರೇ ನನರ್ತ ವೇದಭಾರತೀ ॥ ೨

ಮಾಗಲು ಗಣೇಶ ಭಟ್ಟರ ಮುಖದಲ್ಲಿ ವೇದ ಸರಸ್ವತಿಯು ಯಾವಾಗಲೂ ನರ್ತನಗೈಯುತ್ತಿದ್ದಳು. ಇವಳಿಗೆ ಶಾಸ್ತ್ರ ಸಂಪ್ರದಾಯದಂತೆ ವೇದಾಧ್ಯಯನ ಮಾಡಿದ ಆಚಾರ ಶೀಲರಾದ ವೈದಿಕರ ಮೇಲೆ ಅಪಾರ ಪ್ರೇಮ, (ವಾತ್ಸಲ್ಯ) ಇವಳು ಯಾಗಾದಿ ಅನುಷ್ಠಾನಕ್ಕೇ ಕಾರಣೀಭೂತವಾದ ದ್ರವ್ಯ ದೇವತೆಗಳನ್ನು ಪ್ರಕಾಶಪಡಿಸುವ ಮಂತ್ರನಿಷ್ಠವಾದ ದೇವತೆಯನ್ನು ಬೋಧಿಸುತ್ತಿರುವಳು. ಈ ವೇದ ಸರಸ್ವತಿಗೆ ಅಗ್ನಿಷ್ಟೋಮ ರಾಜಸೂಯ ವಾಜಪೇಯ ಮುಂತಾದ ಯಾಗಗಳಲ್ಲಿ ಪ್ರಸಿದ್ಧವಾದ ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿ ಎಂಬ ಅಗ್ನಿಗಳ ಮಧ್ಯದಲ್ಲಿರುವ ವೇದಿಕೆಯೇ ವಿಹಾರ ಭೂಮಿ.* ಇಂತಹ ಘನತೆಯ ವೇದ ವಿದ್ಯೆಯಲ್ಲಿ ಗಣೇಶ ಭಟ್ಟರು ಪಾರಂಗತರಾಗಿದ್ದರು.

---

* ಅನುಬಂಧವನ್ನು ನೋಡಿ.

ವೈದ್ಯಕಪ್ರಸಿದ್ಧಚೂರ್ಣಮೂಲಿಕಾಚಿಕಿತ್ಸಿಕಾ
ಜ್ಯೌತಿಷೋದ್ಭವಾ ಮತಿಶ್ಚ ಮಂತ್ರಶಾಸ್ತ್ರನೈಪುಣೀ ।
ಸರ್ವರೋಗಹಾರಿಣೀ ಚ ಯಾ ಪರೋಪಕಾರಿಣೀ
ಸಾ ತತಾನ ದಿಕ್ತಟೇಷು ಯಸ್ಯ ಕೀರ್ತಿವಲ್ಲರೀವ ॥ ೩

ಗಣೇಶ ಭಟ್ಟರಿಗೆ ಆಯುರ್ವೇದದಲ್ಲಿ ಅಪಾರ ಪರಿಶ್ರಮವಿತ್ತು. ವೈದ್ಯದಲ್ಲಿ ಪ್ರಸಿದ್ಧವಾದ ಚೂರ್ಣ ಗುಟಿಕೆ, ಮೂಲಿಕೆಗಳನ್ನು ಪ್ರಯೋಗಿಸಿ ಚಿಕಿತ್ಸೆ ಮಾಡಿ ಸರ್ವ ರೋಗಗಳನ್ನು ನಿವಾರಿಸುವ ಜಾಣ್ಮೆ, ಜ್ಯೌತಿಷ ಶಾಸ್ತ್ರದಲ್ಲಿ ಅಸಾಧಾರಣವಾದ ಪ್ರತಿಭೆ ಮತ್ತು ವೈದಿಕ ತಾಂತ್ರಿಕಮಂತ್ರ ಪುರಶ್ಚರಣೆಯಲ್ಲಿ ಸ್ವಾನುಭವಪೂರ್ಣವಾದ ಸಿದ್ಧಿ—ಇವು ಅವರಿಗೆ ಸಹಜವಾಗಿದ್ದವು. ಆದುದರಿಂದ ಸರ್ವರಿಗೂ ಇವರಿಂದ ಉಪಕಾರವೇ ಆಗುತ್ತಿತ್ತು. ಪರರ ಹಿತಕ್ಕಾಗಿಯೇ ಇವರ ವಿದ್ಯೆಯು ಉಪಯೋಗವಾಗುತ್ತಿದ್ದುದರಿಂದ ಇವರ ವಿದ್ಯಾಸಂಬಂಧವಾದ ಕೀರ್ತಿಯು ಬಳ್ಳಿಯು ದಿಕ್ಕು ದಿಕ್ಕಿಗೂ ಹರಡಿದ್ದಿತು.

ಚಂಡಿಕಾಮಹಾಗಣೇಶಮಂತ್ರಜಾಪಸಿದ್ಧಿಮಾನ್
ಪೂಗವಾಟಿಕಾನುಬದ್ಧಯಾಜ್ಞಿಕೋಪವೃತ್ತಿಮಾನ್ ।
ಪಂಚವಕ್ತ್ರಪೂಜನಾಪ್ರಪಂಚಹರ್ಷಿತಾತ್ಮವಾನ್
ಯಸ್ತ್ವಲುಬ್ಧಕೋಽಭವಚ್ಚ ಲಬ್ಧವರ್ಣಶೇಖರಃ ॥ ೪

ವೇದ ಪಂಡಿತ ಶ್ರೇಷ್ಠರಾದ ಭಟ್ಟರಿಗೆ ಚಂಡಿಕಾ ಮಹಾಗಣಪತಿ ದೇವತೆಗಳ ಮಹಾಮಂತ್ರಗಳು ಜಪಪುರಶ್ಚರಣಾದಿಗಳಿಂದ ಸಿದ್ಧಿಯಾಗಿ ಸ್ವಾಧೀನವಾಗಿದ್ದವು. ಪಿತ್ರಾರ್ಜಿತ ಆಸ್ತಿಯಾದ ಸ್ವಲ್ಪ ಪ್ರಮಾಣದ ಅಡಿಕೆ ತೋಟವು ಅವರ ದೊಡ್ಡ ಕುಟುಂಬವನ್ನು ಪೋಷಿಸುವಷ್ಟು ಆದಾಯವನ್ನು ಕೊಡುತ್ತಿರಲಿಲ್ಲ. ಆದುದರಿಂದ ಅವರು ಮದುವೆ, ಮುಂಜಿ, ಶಾಂತಿ, ಪೌಷ್ಟಿಕ ಕಾರ್ಯಗಳ ಪೌರೋಹಿತ್ಯಕ್ಕಾಗಿ ಶಿಷ್ಯರ ಮನೆಗಳಿಗೆ ಯಾವಾಗಲೂ ಹೋಗುತ್ತಿದ್ದರು. ಪಂಚವಕ್ತ್ರ ಪರಮೇಶ್ವರನು ಇವರಿಗೆ ಇಷ್ಟದೇವತೆ. ಶಿವಪೂಜೆಯೆಂದರೆ ಇವರಿಗೆ ತುಂಬಾ ಪ್ರೀತಿ. ಶಿವಪೂಜಾ ವಿಸ್ತಾರದ ಸಂಭ್ರಮದಲ್ಲಿ ಇವರು ಸಂತುಷ್ಟರು ಮತ್ತು ಉದಾರಿಗಳು

ಧೌತವಸ್ತ್ರಧಾರಕಸ್ತ್ರಿಪುಂಡ್ರಶೋಭಿಫಾಲಕಃ
ಸೋತ್ತರೀಯಭೂಷಿತಾಂಸಲಂಬಿತೋಪವೀತಕಃ ।
ಪಂಚಯಜ್ಞಶೀಲವಾನ್ ಸದರ್ಭಪಂಚಶಾಖವಾನ್
ಗೀಷ್ಪತೇಃ ಸಮೋ ಬಭೂವ ಕೋಽಪಿ ವೇದಪೂರುಷಃ ॥ ೫

ಗಣೇಶ ಭಟ್ಟರು ಗೃಹಸ್ಥಾಶ್ರಮಕ್ಕೆ ವಿಹಿತವಾದ ಸಂಧ್ಯಾವಂದನ, ಬ್ರಹ್ಮಯಜ್ಞ, ಔಪಾಸನ, ದೇವರ್ಷಿ ಪಿತೃತರ್ಪಣ, ದೇವತಾರ್ಚನ, ವೈಶ್ವದೇವ, ಬಲಿಹರಣ, ಅತಿಥಿಪೂಜನ ಮುಂತಾದವುಗಳ ಅನುಷ್ಠಾನದಲ್ಲಿ ನಿತ್ಯವೂ ಶ್ರದ್ಧೆಯುಳ್ಳವರು. ಅವರು ಉಟ್ಟಿರುವ ಮಡಿಯಾದ ಅಂಚುಳ್ಳ ಪಂಚಕಚ್ಚೆ ಹಾಕಿದ ಎಂಟು ಮೊಳದ ಬಿಳಿಯ ಪಂಚೆ. ಜನಿವಾರದ ಹೊದಿಕೆಯು ಅಂಚುಳ್ಳ ಬಿಳಿಯ ಉತ್ತರೀಯವು, ಎಡ ಹೆಗಲು ಮೇಲೆ ಇರುವ ಯಜ್ಞೋಪವೀತ, ದರ್ಭೆಯ ಪವಿತ್ರವಿರುವ ಅನಾಮಿಕೆಯ ಹಸ್ತ, ಇವುಗಳಿಂದ ಅವರು ಬೃಹಸ್ಪತ್ಯಾಚಾರ್ಯರಿಗೆ ಸರಿಮಿಗಿಲಾಗಿ ಅಪೂರ್ವ ವೇದ ಪುರುಷರಾಗಿ ಇದ್ದರು

ಶ್ರೀರಿವ ಪ್ರಫುಲ್ಲವಕ್ತ್ರಲೋಚನಾ ಪತಿವ್ರತಾ
ಹ್ರೀಮತೀ ಶುಚಿಸ್ಮಿತಾ ಬಭೂವ ಯಸ್ಯ ಗೇಹಿನೀ ।
ಸತ್ಕುಲಪ್ರಸೂತಿಕಾ ಚ ಸರ್ವಮಂಗಲಾಲಯಾ
ಮೂಕದಾನಪಾವನಾಧಿದೇವತಾಭಿಧಾನಿಕಾ ॥ ೬

ಹಾಗಲೂ ಗಣೇಶ ಭಟ್ಟರಿಗೆ ಸೌಭಾಗ್ಯವತಿ ಮೂಕಮ್ಮನೆಂಬ ಸಹಧರ್ಮಿಣಿಯಾದ ಪಂಡಿತೆಯೊಬ್ಬರಿದ್ದರು. ಪತಿವ್ರತಾಶೀಲವತಿಯಾದ ಅವರದು ಸಹಜ ನಾಚಿಕೆಯ ಸ್ವಭಾವ. ಲಕ್ಷ್ಮೀದೇವಿಯಂತೆ ಅರಳಿದ ತಾವರೆಗಣ್ಣುಳ್ಳ ಮೂಕಮ್ಮನವರ ಶುಭ್ರವಾದ ಕಿರುನಗೆ ಅವರ ಚೊಕ್ಕಮನಸ್ಸಿನ ಕುರುಹು. ಸದ್ವಂಶದಲ್ಲಿ ಹುಟ್ಟಿದ ಅವರು ಸರ್ವರ ಸರ್ವವಿಧವಾದ ಕಲ್ಯಾಣಗಳಿಗೂ ಆಶ್ರಯರಾಗಿದ್ದರು.

ಮೈಥಿಲೀವ ಯಾ ಸ್ವಭರ್ತುರಂತರಂಗವೇದಿನೀ
ಪುತ್ರರತ್ನಶಾಲಿನೀ ಪ್ರಹಾಸಪೂರ್ವವಾದಿನೀ ।
ಯಾ ಚ ಧರ್ಮಸಾಧನೈಕತತ್ಪರಾ ಪತೇಃ ಸತಾ-
ಮಾತಿಥೇಯತರ್ಪಣಾಖಿಲಾಭಿವ್ಯಂಜಿತಾ ॥ ೭

ಸೀತೆಯಂತೆ ಅವರಿಗೆ ತಮ್ಮ ಪತಿಯ ಅಂತರಂಗ ಗೊತ್ತಿತ್ತು. ಉತ್ತಮ ಪುತ್ರರನ್ನು ಪಡೆದ ಮೂಕಮ್ಮನವರು ಭೂದೇವಿಯಂತೆ ಅತಿಶಯವಾದ ತಾಳ್ಮೆಯುಳ್ಳವರು. ಧರ್ಮಕಾರ್ಯದಲ್ಲಿ ಅವರು ಪತಿಗೆ ಸಹಕಾರ ನೀಡುತ್ತಿದ್ದರು. ಸಜ್ಜನರಿಗ ಸಮ್ಮತರಾದ ಅವರ ಹೃದಯವು ಬಹಳ ಸರಳವಾದದ್ದು. ಮನೆಗೆ ಬಂದ ಅತಿಥಿಗಳಿಗೆ ಚೆನ್ನಾಗಿ ಉಪಚರಿಸಿ ಊಟಬಡಿಸಿ ತೃಪ್ತಿಯನ್ನುಂಟು ಮಾಡುವುದು ಅವರಿಗೆ ಸಹಜ ಗುಣ. ಹೀಗೆ ಆ ದ್ವಿಜಪತ್ನಿಯು ಶೋಭಿಸುತ್ತಿದ್ದಳು.

ದೇವತಾಗುರುದ್ವಿಜಾತಿಪೂಜನಾನುರಾಗಿಣೀ
ಶೋಕದಗ್ಧಲೋಕಚಿತ್ತಶಾಂತಿಪೂರವಾಹಿನೀ ।
ಪೂರ್ವಭಾಷಿಣೀ ಪುರಾಣವೃತ್ತಗೀತಗಾಯಿನೀ
ಸಾ ನಿರಸ್ತಕೈತವಾ ರರಾಜ ತಸ್ಯ ಭಾಮಿನೀ ॥ ೮

ಮೂಕಮ್ಮನವರಿಗೆ ದೇವತಾರಾಧನೆ, ಗುರುಪಾದುಕಾಪೂಜೆ, ಬ್ರಾಹ್ಮಣ ಸಂತರ್ಪಣೆಗಳಲ್ಲಿ ತುಂಬಾ ಅಕ್ಕರೆ. ಸಂಸಾರದ ಬಗೆಬಗೆಯ ಕಷ್ಟಗಳಿಗೆ ಸಿಕ್ಕಿ ಶೋಕತಾಪಗಳಿಂದ ಕಂಗೆಟ್ಟ ಲೋಗಗರ ಬೆಂದ ಹೃದಯದ ಮೇಲೆ ಮೂಕಮ್ಮನವರ ಸಮಾಧಾನದ ಮಾತುಗಳು ಶಾಂತಿಯ ಹೊಳೆಯಾಗಿದ್ದವು. ಯಾರನ್ನಾದರೂ ಕಂಡೊಡನೆಯೇ ಅವರೇ ಮೊದಲು ಮಾತನಾಡಿಸುವರು. ಅವರು ಹಿಂದಿನ ಪೌರಾಣಿಕ ಮತ್ತು ಐತಿಹಾಸಿಕ ಹಾಡುಗಳನ್ನು ಹಾಡುತ್ತಿದ್ದರು. ಅವರಿಗೆ ಕಪಟ ಗುಣವಿರಲಿಲ್ಲ. ಹೀಗಿರುವ ಸೌಭಾಗ್ಯವತೀ ಮೂಕಮ್ಮನವರು ಯಾವಾಗಲೂ ಗಣೇಶಭಟ್ಟರ ಧರ್ಮಪತ್ನಿಯಾಗಿ ಶೋಭಿಸಿದರು.

ಚಕ್ರವಾಕದಂಪತೀ ಇವೈಕಮತ್ಯಶಾಲಿನೌ
ಜೀವಿತೋರ್ಮಿಸಂಪ್ಲವೈಕತಾನವೃತ್ತಿಭಾಗಿನೌ ।
ತಾವುಭಾವರಾಜತಾಂ ಸತಾಂ ಮತೌ ಸುದಂಪತೀ
ಯಾವವಿಂದತಾಂ ಸುತಂಚ ರಾಘವೇಂದ್ರಭಾರತೀಮ್ ॥ ೯

ಗಂಡು ಹೆಣ್ಣು ಚಕ್ರವಕ್ಕಿಗಳು ಒಂದಕ್ಕೊಂದು ಹೊಂದಾಣಿಕೆಯೊಡನೆ ಪ್ರೀತಿಯಿಂದ ಇರುವಂತೆ ಈ ದಂಪತಿಗಳು ಅನ್ಯೋನ್ಯವಾಗಿ ಅನುರಾಗಗೊಂಡು ಐಕಮತ್ಯವನ್ನು ಹೊಂದಿದ್ದರು. ಜೀವನವೆಂಬುವ ದೊಡ್ಡ ಕಡಲು ಚಣಚಣಕ್ಕೂ ಮೇಲೆ ಮೇಲೆ ಎರಗಿಬರುವ ಆಪತ್ತುಗಳೇ ಅಲೆಗಳು. (ಸಮುದ್ರದ ಆಚೆಯ ದಡವನ್ನು ಸೇರುವುದಕ್ಕಾಗಿ ಸಂಸಾರದ ನೌಕೆಯಲ್ಲಿ ಕೂತು ಪ್ರಯಾಣ ಹೊರಟ ದಂಪತಿಗಳಿಗೆ ತಮ್ಮ ಗುರಿ ಸಾಧಿಸುವ ವಿಷಯದಲ್ಲಿ ಅನ್ಯೋನ್ಯವಾದ ಐಕಮತ್ಯವೂ ಏಕಾಗ್ರತೆಯೂ ಅತ್ಯವಶ್ಯಕ) ಪ್ರಕೃತ, ಸಂಸಾರದ ನೌಕೆಯಲ್ಲಿ ಕೂತು ಜೀವನದ ಸಮುದ್ರವನ್ನು ದಾಟಹೊರಟ ಯಾವ ದಂಪತಿಗಳಿಗೆ ತಮ್ಮ ಗುರಿಮುಟ್ಟುವಲ್ಲಿ ಅನ್ಯೋನ್ಯವಾಗಿ ಏಕಾಗ್ರತೆಯೂ ಐಕಮತ್ಯವೂ ಇದ್ದಿತೋ ಆ ಸತಿಪತಿಗಳಾದ ಮೂಕಮ್ಮ ಗಣೇಶಭಟ್ಟರಿಗೆ ಶ್ರೀ ರಾಘವೇಂದ್ರಭಾರತೀಸ್ವಾಮಿಗಳು ಪೂರ್ವಾಶ್ರಮದಲ್ಲಿ ಮಕ್ಕಳಾಗಿದ್ದರು.

ಶೋಭನೇ ಮುಹೂರ್ತಕೇ ಹ್ಯಸೂತ ಸೂನುಮುತ್ತಮಂ
ಮೂಕನಾಮಿಕಾಂಬಿಕಾ ಮಹಾರ್ಘಸಂಪದಾಂ ನಿಧಿಮ್ ।
ದ್ಯೌರಿವ ದ್ವಿಜಾಧಿನಾಥಮಿಂದುಮೋಷಧೀಶ್ವರಂ
ತೇನ ತೌ ನನಂದತುಃ ಪುಣ್ಯಶಾಲಿ ವಿಪ್ರದಂಪತೀ ॥ ೧೦

ಸೌಭಾಗ್ಯವತಿ ಮೂಕಾಂಬಿಕಾಮ್ಮನವರು, ಅಂತರಿಕ್ಷವು ನಕ್ಷತ್ರಾಧಿಪತಿಯೂ ಓಷಧೀಶ್ವರನೂ ಆದ ಸೋಮನನ್ನು ಪಡೆಯುವಂತೆ, ಅತ್ಯಂತ ಶ್ರೇಷ್ಠವಾದ ಅಧ್ಯಾತ್ಮ ಸಂಪತ್ತಿನ ನಿಧಿಯಾದ ಪುತ್ರರತ್ನವನ್ನು ಸುಮುಹೂರ್ತದಲ್ಲಿ ಹಡೆದರು ಆ ಕುಮಾರ ನಿಂದ ಆ ಬ್ರಾಹ್ಮಣ ದಂಪತಿಗಳು ಬಹುಕಾಲ ಸಂತಸಗೊಂಡರು

**ಈಶ್ವರಪ್ರಸಾದಲಬ್ಧಜನ್ಮನಸ್ತದಾ ಶಿಶೋ-**
**ರ್ಬ್ರಹ್ಮಸಂಪ್ರದಾಯವಿತ್ಪಿತಾ ಸ ಕರ್ಮಠಃ ಸುಧೀಃ ।**
**ಜಾತಕರ್ಮ ಶಾಸ್ತ್ರತಶ್ಚಕಾರ ಚೇಶ್ವರಾಂಶಿನೋ**
**ಮಂಗಳಾಭಿಶಂಸಕಂ ಸುನಾಮಧೇಯಮಾತನೋತ್ ॥** ೧೧

ಬ್ರಾಹ್ಮಣಕುಲದ ಸಂಪ್ರದಾಯವನ್ನು ಬಲ್ಲ ಕರ್ಮನಿಷ್ಠರೂ ವಿದ್ವಾಂಸರೂ ಆದ ಮಾಗಲೂ ಗಣೇಶಭಟ್ಟರು ಈಶ್ವರಾನುಗ್ರಹದಿಂದ ಜನ್ಮತಾಳಿದ ಆ ಮಗು ವಿಗೆ ಶಾಸ್ತ್ರಕ್ಕೆ ಅನುಸಾರವಾಗಿ ಜಾತಕರ್ಮಸಂಸ್ಕಾರವನ್ನು ಮಾಡಿದರು. ಬಳಿಕ ಅವರು ಈಶ್ವರಾಂಶ ಸಂಭೂತನಾದ ಆ ಕುಮಾರನಿಗೆ ಮಂಗಳಾರ್ಥಬೋಧಕವಾದ ಒಳ್ಳೆಯ ಹೆಸರನ್ನು ಇಟ್ಟರು

**ಮಾನವಸ್ಮೃತಿಪ್ರಣೀತಕಾಲ ಆಗತೇ ದ್ವಿಜಃ**
**ಪುತ್ರಕಸ್ಯ ತಸ್ಯ ಚೋಪನಾಯನಂ ಚಕಾರ ಸಃ ।**
**ಸೋಪನೀತಮೇನಮಾಪ ವೈದಿಕೀ ಸರಸ್ವತೀ**
**ಸಾ ಪಿತುರ್ಯಥೋತ್ಪಲಂ ದ್ವಿಜಾಧಿಪಸ್ಯ ಕೌಮುದೀ ॥** ೧೨

ಮಾನವಧರ್ಮ ಶಾಸ್ತ್ರದಲ್ಲಿ ಹೇಳಿದಂತೆ ಉಪನಯನಕ್ಕೆ ಯೋಗ್ಯವಾದ ವಯಸ್ಸು ಬರುತ್ತಿರುವಾಗಲೇ ತಂದೆ ಗಣೇಶ ಭಟ್ಟರು ಆ ಮಗನಿಗೆ ವಿಧಿವತ್ತಾಗಿ ಉಪನಯನ ಸಂಸ್ಕಾರವನ್ನು ನೆರವೇರಿಸಿದರು. ತಂದೆಯ ವೇದವಿದ್ಯೆಯು ಉಪ ನೀತನಾದ ಈ ವಟುವಿನ ಬಳಿಗ, ಚಂದ್ರನ ಬೆಳ್ದಿಂಗಳು ಕನ್ನೈದಿಲೆಯನ್ನು ತಲಪು ವಂತೆ ಬಂದು ಸೇರಿತು.

**ಯಾಜನಾದಿಕರ್ಮಣಿ ಪ್ರವಾಸಮಾಸ್ಥಿತಃ ಸದಾ**
**ಗ್ರಾಮಮಾತ್ಮನಾಽನಯತ್ಕುಮಾರಮಪ್ಯಸೌ ಪಿತಾ ।**
**ಬಾಲಬೋಧಿನೀಂ ಸಕೋಶಶಬ್ದರೂಪಮಾಲಿಕಾಂ**
**ಬ್ರಾಹ್ಮಣಂ ತ್ವಪಾಠಯಚ್ಚ ಕಾರಕಾದಿಕಂ ತದಾ ॥** ೧೩

ಪೌರೋಹಿತ್ಯದ ಬಗ್ಗೆ ಯಾವಾಗಲೂ ಸಂಚಾರದಲ್ಲಿ ಇರುವ ತಂದೆ ಗಣೇಶ ಭಟ್ಟರು ತಮ್ಮ ಜೊತೆಗೆ ಮಗನನ್ನು ಹಳ್ಳಿಗೆ ಕರೆದೊಯ್ಯುತ್ತಿದ್ದರು. ಪೌರೋಹಿತ್ಯ

ಮುಗಿದೊಡನೆ ಅವಕಾಶ ಸಿಕ್ಕಿದಾಗ ಶಿಷ್ಯರ ಮನೆಯಲ್ಲಿಯೇ ತಮ್ಮ ಕುಮಾರನಿಗೆ ಸಂಸ್ಕೃತ ಬಾಲಬೋಧೆ, ಅಮರಕೋಶ, ಶಬ್ದರೂಪಾವಳಿ ಇವುಗಳಲ್ಲಿ ಪಾಠ ಹೇಳಿದರು. ಮತ್ತು ವೇದ ಭಾಗದಲ್ಲಿ ಬ್ರಾಹ್ಮಣ ಕಾರಕಾದಿಗಳನ್ನು ಸಹ ವಟುವಿಗೆ ಕಲಿಸಿದರು.

**ತಂಜಪೂರುಮಂಡಲೇ ಕವೇರಜಾನದೀತಟೇ**
**ಪಲ್ಲಿಕಾ ಚಕಾಸ್ತ್ಯಹಾರಮಾಂಗುಡೀತಿ ಶೋಭಿನೀ ।**
**ಕುಂಭಕೋಣನಾಮಕಸ್ಥಲಾತ್ ಸಮೀಪವರ್ತಿನೀ**
**ಸಾ ಸಮಸ್ತವೇದಪಾರಿವಿಪ್ರವೃಂದವಾಸಭೂಃ ॥** ೧೪

ತಮಿಳುನಾಡಿಗೆ ಸೇರಿದ ತಂಜಾವೂರು ಪರಿಸರಪ್ರದೇಶ ವೇದಾಧ್ಯಯನಕ್ಕೆ ಅನುಕೂಲವಾದ ಸನ್ನಿವೇಶವುಳ್ಳದ್ದು ಕಾವೇರಿಯ ತೀರದಲ್ಲಿ 'ಅಹರಮಾಂಗುಡಿ' ಎಂಬೊಂದು ಹಳ್ಳಿ. ಇದು ಆಯ್ಯಂಪೇಟೆಗೆ ಹತ್ತಿರ ಅಹರಮಾಂಗುಡಿಯು ಕೃಷ್ಣ ಯಜುರ್ವೇದದ ಅಧ್ಯಯನಕ್ಕೆ ಪವಿತ್ರವಾದ ಪ್ರಸಿದ್ಧವಾದ ಕ್ಷೇತ್ರ ಕುಂಭಕೋಣ ದಿಂದಲೂ ಈ ಹಳ್ಳಿ ಹತ್ತಿರ ವೇದ ಘನಪಾಠಿಗಳಾದ ಬ್ರಾಹ್ಮಣ ಶ್ರೇಣಿಯು ಇಲ್ಲಿ ವಿಶೇಷವಾಗಿ ನೆಲಸಿದೆ.

**ಪ್ರೌಢವೇದಶಿಕ್ಷಣಾರ್ಥಮುಕ್ಷಣೋ ಬಹುಕ್ರಿಯಾ-**
**ವಿಘ್ನಿತೋ ದ್ವಿಜಾಗ್ರಣೀರ್ಗುರೋಃ ಕುಲಂ ಗವೇಷಯನ್ ।**
**ಆಜಗಾಮ ತೇನ ನಮ್ರವೃತ್ತಿನಾ ತನೂಭುವಾ**
**ವೈದಿಕಸ್ಥಲೀಂ ಗಣೇಶಭಟ್ಟ ಏಷ ತಾಂ ಪುನಃ ॥** ೧೫

ಪುಣೆಯಲ್ಲಿ ಮಗನಿಗೆ ವೇದದ ಪ್ರೌಢ ಪಾಠವನ್ನು ಆರಂಭಿಸಿದ ಶ್ರೋತ್ರೀಯ ಗಣೇಶ ಭಟ್ಟರಿಗೆ ಅನಿವಾರ್ಯವಾದ ಹಲವಾರು ಕೆಲಸಗಳ ನಿರ್ವಹಣೆಯಿಂದ ವಿಘ್ನ ವುಂಟಾಯಿತು. ಪರಸ್ಥಳದಲ್ಲಿ ಹುಡುಗನನ್ನು ಬಿಟ್ಟು ವೇದ ಕಲಿಸಲು ಏರ್ಪಡಿಸು ವುದೇ ಒಳ್ಳೆಯದೆಂದು ಅನ್ನಿಸಿತು. ತಾವೇ ಸ್ವತಃ ಬ್ರಹ್ಮಚರ್ಯಾಶ್ರಮದಲ್ಲಿ ಅಧ್ಯಯನ ಮಾಡಿದ ತಂಜಾವೂರಿನ ಹತ್ತಿರದ ಹಳ್ಳಿಯ ಕಡೆ ಕುಮಾರನನ್ನು ಗುರುಕುಲದಲ್ಲಿ ಬಿಡಬೇಕೆಂದು ಸಂಕಲ್ಪಿಸಿದರು. ವಿನಯಸ್ವಭಾವದ ಮಗನನ್ನು ಕರೆದುಕೊಂಡು ಶ್ರೀ ಗಣೇಶ ಭಟ್ಟರು ತಮಿಳುನಾಡಿಗೆ ಬಂದರು. ಗುರುಕುಲವನ್ನು ಹುಡುಕುತ್ತಾ ಹಿಂದೆ ಹೇಳಿದ ವೈದಿಕರ ನೆಲೆವೀಡಾದ ಅಹರಮಾಂಗುಡಿ ಅಗ್ರಹಾರಕ್ಕೆ ಬಂದರು.

**ವೇದಪಾರಶಾಲಿಕಾಮುಪೇತ್ಯ ತತ್ರ ಪಾಠಕೈಃ**
ಸಂಗತಃ ಸ್ವಮಾತ್ಮಜಂ ನ್ಯವೇಶಯತ್ತದಾಶ್ರಯೇ ।
**ಕಂಚಿದತ್ರ ಕಾಲಮಧ್ಯಗೀಷ್ಟ ಯೋಜುಷೀಮಯಂ**
ತೈತ್ತಿರೀಯಸಂಹಿತಾಂ ತತೋ **ರುಜಾ ನ್ಯವರ್ತತ** ॥ ೧೬

ಬಳಿಕ ಮಾಗಲೂ ಗಣೇಶಭಟ್ಟರು ಅಲ್ಲಿರುವ ವೇದಪಾಠಶಾಲೆಗೆ ಬಂದು ವೇದ ಪಾಠ ಹೇಳುವ ಆಚಾರ್ಯರನ್ನು ಕಂಡು ಮಾತನಾಡಿದರು. ಬಳಿಕ ತಮ್ಮ ತನಯನನ್ನು ಪಾಠಶಾಲೆಗೆ ಸೇರಿಸಿದರು ಮಾತ್ರ ಅವನನ್ನು ಆಚಾರ್ಯರ ವಶಕ್ಕೆ ಒಪ್ಪಿಸಿದರು ಬಳಿಕ ಊರಿಗೆ ತಾವು ಬಂದರು ಈ ಬಾಲಕನು ಕೆಲವು ಕಾಲ ಪಾಠಶಾಲೆಯಲ್ಲಿ ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯನ್ನು ಓದಿದನು. ಬಳಿಕ ಅಲ್ಲಿಯ ಹವಾಗುಣ ತನ್ನ ಮೈಗೆ ಒಗ್ಗದಿರಲು ರೋಗಕ್ಕೆ ಗುರಿಯಾದ ಕುಮಾರನು ಅಭ್ಯಾಸವನ್ನು ಅಲ್ಲಿಗೇ ನಿಲ್ಲಿಸಿ ತನ್ನ ಊರಿಗೆ ಹಿಂದಿರುಗಿದನು

* ಭಾರತೀಯಧರ್ಮಮೂಲವೇದಶಾಸ್ತ್ರಪೋಷಕೃ-
 ತ್ಸೂರ್ಯಕೃಷ್ಣರಾಜವಂಶಕೀರ್ತಿವೈಜಯಂತಿಕಾ ।
ನಿರ್ಜರಸ್ವರಸ್ವತೀಪ್ರಸಾದ§ಪಾಠಶಾಲಿಕಾ
 ಯತ್ರ ವೇದಶಾಸ್ತ್ರವಿಜ್ಞಪೋಷಿಕಾ ಜಯತ್ಯಹೋ ॥ ೧೭

ಮೈಸೂರು ರಾಜಧಾನಿಯಲ್ಲಿ ಸರಸ್ವತೀ ಪ್ರಾಸಾದವೆಂಬ ಸಂಸ್ಕೃತ ಮಹಾ ಪಾಠಶಾಲೆಯು ಭಾರತೀಯ ಸನಾತನ ಧರ್ಮದ ಪೋಷಕರಾದ ಮೈಸೂರು ಮಹಾ ರಾಜರಾದ ನಾಲ್ಮಡಿಕೃಷ್ಣರಾಜ ಒಡೆಯರ್‌ರವರ ವಂಶದ ರಾಜರ ಮನೆತನವಾದ ಯದುವಂಶದ ಕೀರ್ತಿಪತಾಕೆಯೋ ಎಂಬಂತೆ ಸರ್ವವಿಧವಾದ ಉತ್ಕರ್ಷದಿಂದ ಕಂಗೊಳಿಸುತ್ತಿದೆ.

ತನ್ಮಹೀಸುರಾಭಿಧಂ ಪುರಂ ನೃಪಾಧಿವಾಸಿತಂ
 ನಾಭ್ಯನಂದದೇಷ ಮತ್ತಮಪ್ರಮತ್ತಧೀರಿಹ ।
ಅಂತಿಕೇ ಚ ತಸ್ಯ ಕಾಲಕೂಟಕಾಂತಿಲಾಂಛನಂ
 ಶ್ರೀಗಲೇಶಸನ್ನಿಧಿಶ್ಚಕಾಸ್ತಿ ಕಾಪಿ ವಲ್ಲಿಕಾ ॥ ೧೮

ಊರಿಗೆ ಬಂದ ಶ್ರೀ ಗಣೇಶ ಭಟ್ಟರ ಮಗನಿಗೆ ಆರೋಗ್ಯವುಂಟಾದ ಬಳಿಕ ತನ್ನ ವೇದಾಧ್ಯಯನವನ್ನು ಮುಂದುವರಿಸುವ ಇಚ್ಛೆ ಉತ್ಕಟವಾಯಿತು ಮೈಸೂರಿನಲ್ಲಿ ಮಹಾರಾಜರು ಏರ್ಪಡಿಸಿರುವ ಶಾಲೆಯನ್ನು ಸೇರಲು ಅವನಿಗೆ ಇಚ್ಛೆಯುಂಟಾಗ ಲಿಲ್ಲ. ಏಕೆಂದರೆ ಏಕಾಂತದಲ್ಲಿ ಪ್ರೀತಿಯುಳ್ಳ ಅವನಿಗೆ ರಾಜರು ವಾಸವಾಗಿರುವ ವಿವಿಧ ವಿಲಾಸದ ತೌರುಮನೆಯಾದ ಪಟ್ಟಣದ ವಾಸವು ಅಧ್ಯಾತ್ಮದಲ್ಲಿ ಎಚ್ಚರವಾದ ಧೀಮಂತ ವ್ಯಕ್ತಿಗೆ ವಿಷಯಸುಖದಲ್ಲಿ ಮತ್ತನಾದವನ ಗೆಳೆತನ ಹಿಡಿಸದಿರುವಂತೆ ಹಿಡಿಸಲಿಲ್ಲ. ಆ ಮೈಸೂರು ಪಟ್ಟಣದ ಹತ್ತಿರ ಶ್ರೀಕಂಠೇಶ್ವರ ಸ್ವಾಮಿಯು ನೆಲೆಸಿ

---

* ಛಂದಸ್ಸಿಗಾಗಿ "ಪ್ರಾಸಾದ" ಎಂಬುದನ್ನು ಪ್ರಸಾದ ಎಂದು ಹೇಳಿದೆ.

§ ಅನುಬಂಧವನ್ನು ನೋಡಿ

ರುವ ಪ್ರಶಾಂತವಾದ ಹಳ್ಳಿಯೊಂದಿದೆ. ಆಗ ನಂಜನಗೂಡು* (ಶ್ರೀಕಂಠ ಎಂಬ ಹೆಸರು ಶಿವನಿಗೆ ಬಂದದ್ದು ಆತನು ಕಾಲಕೂಟ ವಿಷಪಾನ ಮಾಡಿದಾಗ ಆ ವಿಷದ ಕಪ್ಪುಕಲೆ ಕೊರಳಲ್ಲಿ ಗುರುತಾಯಿತು. ಅದಕ್ಕೆ ಶ್ರೀ ಎಂದು ಹೇಳುವರು. ಶ್ರೀ ಕಂಠದಲ್ಲಿ ಇರುವುದರಿಂದ ಸ್ವಾಮಿ ಶ್ರೀಕಂಠನಾದ.)

ಯತ್ರ ಶೃಂಗಗಿರ್ಯಧೀಶಪೀಠಿಕೇಂದ್ರಪೋಷಿತಾ
ವಿಪ್ರಸಂಪ್ರದಾಯಶುದ್ಧವೇದಪಾಠಶಾಲಿಕಾ ।
ಛಾತ್ರಕೈಶ್ಚ ಪಾಠಕೂಟಭೋಜಿಭೃಂಗವೃತ್ತಿಭಿ-
ರ್ದೂರತಃ ಸಮಾಗತೈರಧಿಷ್ಠಿತಾ ವ್ಯಜೃಂಭತ ॥ ೧೯

ಅಲ್ಲಿ ದಕ್ಷಿಣಾಮ್ನಾಯದ ಶ್ರೀಶಾರದಾ ಪೀಠದ ಜಗದ್ಗುರು ಶಂಕರಾಚಾರ್ಯ ಶೃಂಗೇರಿ ಮಠದ ಗುರುಪರಂಪರೆಯಿಂದ ಪೋಷಿತವಾದ ಬ್ರಾಹ್ಮಣ ಸಂಪ್ರದಾಯ ಪರಿಶುದ್ಧವಾದ ವೇದಪಾಠಶಾಲೆಯೊಂದಿದೆ. ವೇದಾಧ್ಯಯನಕ್ಕಾಗಿ ದೂರ ದೂರ ಪ್ರದೇಶಗಳಿಂದ ಬಂದಿರುವ ವಿದ್ಯಾರ್ಥಿಗಳಲ್ಲಿ ಕೆಲವರು ವಾರಾನ್ನ ಭೋಜಿಗಳೂ ಕೆಲವರು ಮಾಧೂಕರೀ ವೃತ್ತಿಯವರೂ (ಭಿಕ್ಷಾನ್ನ ಭೋಜಿಗಳೂ) ಆಗಿದ್ದರು. ಇಂತಹ ವಿದ್ಯಾರ್ಥಿಗಳಿಂದ ಆ ವೇದಪಾಠಶಾಲೆಯು ಸಮೃದ್ಧವಾಗಿತ್ತು.

ಏತದೀಯಶಾಲಿಕಾ ಋತಂಭರಾ§ ಜನಶ್ರುತಿಃ
ಕರ್ಣಮೂಲಮಾಗತಾಽಸ್ಯ ಪಲ್ಲಿವಾಸಿನೋ ವಟೋಃ ।
ತೂರ್ಣಮಸ್ಯ ಚಿತ್ತವೃತ್ತಿರ್ನಿಸರ್ಗಸಂಯುಙ್ಕ್ಷ ತ-
ನ್ನಂಜಿನೇತಿ ಶಬ್ದಪೂರ್ವಗೂಢನಾಮಪಲ್ಲಿಕಾಮ್ ॥ ೨೦

ಈ ಪಾಠಶಾಲೆಯು ಸತ್ಯವಾದ ವೃತ್ತಾಂತವು ಹಳ್ಳಿಯಲ್ಲಿ ವಾಸಿಸುತ್ತಿರುವ ಆ ಬಾಲಕನ ಕಿವಿಗೆ ಬಿತ್ತು. ಬಳಿಕ ಅವನಿಗೆ ತನ್ನ ವೇದಾಧ್ಯಯನವನ್ನು ಮುಂದುವರಿಸಲು ನಂಜನಗೂಡಿಗೆ ಹೋಗಬೇಕೆಂಬ ಹಂಬಲ ಹೆಚ್ಚಾಯಿತು. ಸರಿ, ತಾನಾಗಿಯೇ ಹಳ್ಳಿಯಿಂದ ಹೊರಟು ನಂಜನಗೂಡಿಗೆ ಬಂದುಬಿಟ್ಟನು.

ತತ್ರ ವೇದಶಾಲಿಕಾಮುಪೇತ್ಯ ಬಾಲಕಃ ಸ್ವಯಂ
ಗೋತ್ರನಾಮಪೂರ್ವಿ ವದನ್ ಗುರೋಃ ಪದೇ ಯಥಾವಿಧಿ ।
ಪ್ರಾಣಮತ್ ಕೃಪಾಲುರೇಷ ಚಾಶಿಷಾಽಭ್ಯನಂದಯತ್
ಭೃಂಗವೃತ್ತಿಮಭ್ಯುಪೇತ್ಯ ಚಾತ್ಮನಾ ಸ ಚಾರಮತ್ ॥ ೨೧

* ದೇವಾಸುರರು ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಕಡೆದ ಕಥೆ ಪುರಾಣದಲ್ಲಿ ಪ್ರಸಿದ್ಧವಾಗಿದೆಯಷ್ಟೆ. ಸಮುದ್ರವನ್ನು ಕಡೆಯುವಾಗ ಮೊದಲು ಹುಟ್ಟಿದುದು ಕಾಲಕೂಟವಿಷ. ಜಗತ್ತಿನ ಹಿತಕ್ಕಾಗಿ ಶಂಕರನು ಆ ವಿಷವನ್ನು ಭಕ್ಷಿಸಿದ. ಬಳಿಕ ಶಿವನಿಗೆ ನೀಲಕಂಠ ಶ್ರೀಕಂಠ ಎಂಬ ಹೆಸರಾಯಿತು. ಧೃತಂ ಕಂಠೇ ವಿಷಂ ಘೋರಂ ತತಃ ಶ್ರೀಕಂಠತಾಮಿಯಾತ್. § ಋತಂಭರಾ = ಸತ್ಯವನ್ನು ಕಾಪಾಡುವ

ಬಳಿಕ ವಿದ್ಯಾರ್ಥಿಯಾದ ಆ ಬಾಲಕನು ಪಾಠಶಾಲೆಯನ್ನು ಸಮೀಪಿಸಿ ಶಾಲೆಯ ಒಳಹೊಕ್ಕನು. ಆಗ ಅಲ್ಲಿ ಗುರುಗಳು ವಿದ್ಯಾರ್ಥಿಗಳಿಗೆ ವೇದಪಾಠವನ್ನು ನಡೆಸುತ್ತಿದ್ದರು. ಗುರುಗಳನ್ನು ಕಂಡು ಈ ವಿದ್ಯಾರ್ಥಿಯು ಸಂಪ್ರದಾಯದಂತೆ ಅವರಿಗೆ ತನ್ನ ಹೆಸರು ಗೋತ್ರಗಳನ್ನು ಉಚ್ಚರಿಸಿ ಅಭಿವಾದನಗೈದನು. ಎರಗಿದ ಶಿಷ್ಯನಿಗೆ ಗುರುಗಳು ಹರಸಿದರು. ದಯಾಳುಗಳಾದ ಗುರುಗಳ ಸಮ್ಮತಿಯಂತೆ ಹುಡುಗನು ಶಾಲೆಗೆ ದಾಖಲಾದನು. ನಿತ್ಯವೂ ಮಾಧುಕರೀ ವೃತ್ತಿಯನ್ನು ಹಿಡಿದು ನಿಷ್ಠೆಯಿಂದ ವೇದವನ್ನು ಕಲಿಯತೊಡಗಿದನು ಇಲ್ಲಿನ ಸನ್ನಿವೇಶಗಳಿಗೆ ಮಾರುಹೋದ ಕುಮಾರನು ಮನಸ್ಸಿನಲ್ಲಿಯೇ ತನ್ನಷ್ಟಕ್ಕೆ ಹಿಗ್ಗಿಹೋದನು.

**ಸೋಮಪೀಥಿಪ್ರಧುರ್ಯೈರ್ವೈದಿಕಾಗ್ರಯಾಯಿನಾಂ**
**ವೇದಪಾಠಿಪಂಡಿತೇಷು ಶಿಷ್ಯವೃತ್ತಿಮಾದದತ್ ।**
**ತೈತ್ತಿರೀಯಸಂಹಿತಾಂ ಪದಕ್ರಮಾದ್ಯುಪಸ್ಕೃತಾಂ**
**ಯಾಜುಷೀಂ ಸಚಾಧ್ಯಗೀಷ್ಟ ಬ್ರಹ್ಮಚರ್ಯನಿಷ್ಠಯಾ ॥** ೨೨

ನಂಜನಗೂಡು ಅಗ್ರಹಾರ ಅಲ್ಲಿ ಆಗ ಶ್ರೋತ್ರೀಯರಾದ ಬ್ರಾಹ್ಮಣರ ಸಂಖ್ಯೆ ಹೆಚ್ಚಾಗಿದ್ದಿತು ಅಲ್ಲಿನ ಬ್ರಾಹ್ಮಣವರ್ಗದಲ್ಲಿ ಕೆಲವರು ವಂಶಪರಂಪರೆಯಿಂದ ಸೋಮಯಾಜಿಗಳೆಂದು ಖ್ಯಾತಿ ಪಡೆದಿದ್ದರು. ಮತ್ತೆ ಕೆಲವರು ಸಲಕ್ಷಣವಾದ ವೇದ ವಿದ್ಯೆಯಲ್ಲಿ ಪಾರಂಗತರಾಗಿ ಘನಪಾಠಿಗಳೆಂದು ಪ್ರಸಿದ್ಧರಾಗಿದ್ದರು ಮತ್ತು ಕರ್ಮಠರಾದ ಪಂಡಿತರೂ ಇದ್ದರು ಹೊಸ ವಿದ್ಯಾರ್ಥಿ ಬಾಲಕನು ಮೇಲೆ ನಿರೂಪಿಸಿದ ಘನಪಾಠಿ, ಸೋಮಯಾಜಿ ಮುಂತಾದ ವೇದ ಪಂಡಿತರ ಸನ್ನಿಧಿಯಲ್ಲಿ ಶಿಷ್ಯವೃತ್ತಿಯನ್ನು ಆರಂಭಿಸಿದನು. ಬ್ರಹ್ಮಚರ್ಯದ ನಿಯಮಗಳನ್ನು ಪಾಲಿಸಿಕೊಂಡು ಬಂದ ಶ್ರೀ ಮಾಗಲೂ ಗಣೇಶ ಭಟ್ಟರ ಪುತ್ರನು ನಿಷ್ಠೆಯಿಂದ ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯನ್ನು ಓದಿದನು. ಮತ್ತು ಪದ ಕ್ರಮಾದಿಗಳನ್ನೂ ಅಭ್ಯಾಸ ಮಾಡಿದನು

**ಕೇನ ವಾ ಮಹತ್ಪದಂ ಪ್ರಸಾಧಯೇನ್ನರಃ ಸ್ವಯಂ**
**ಯೇನ ಸರ್ವಲೋಕಗಾನತೀತ್ಯ ಶಾಂತಿಮೃಚ್ಛತಿ ।**
**ಭೋಗಭೂಮಿಕಾ ತ್ವಿಯಂ ಹಿ ಬಂಧನಾಯ ಕಲ್ಪತೇ**
**ತ್ಯಾಗ ಏವ ಯತ್ಪದೋಪಲಬ್ಧಿಹೇತುತಾಮಿಯಾತ್ ॥** ೨೩

ಈ ಬಾಲಕನು ತಾನು ವಿದ್ಯಾರ್ಥಿಯಾದಾಗ ಆಗಾಗ್ಗೆ ಅಂತರ್ಮುಖನಾಗಿ ಆಲೋಚನಾಪರನಾಗುತ್ತಿದ್ದನು. ಒಮ್ಮೆ ಏಕಾಂತದಲ್ಲಿ ಕೂತಿದ್ದ ಬಾಲಕನ ಮನಸ್ಸಿಗೆ ಹೀಗೆ ಅನ್ನಿಸಿತು ಏನೆಂದರೆ : ಮಾನವನು ಯಾವ ಸಾಧನೆಯಿಂದ ಅಧ್ಯಾತ್ಮದಲ್ಲಿ

ಮಹತ್ತರವಾದ ಅಲೌಕಿಕ ಸ್ಥಾನವನ್ನು ಸಾಧಿಸಬಲ್ಲನು ? ಯಾವ ಮಹತ್ತರವಾದ ವಸ್ತುವಿನ ಪ್ರಾಪ್ತಿಯಿಂದ ತಾನು ಸರ್ವರಿಗೂ ಮಿಗಿಲಾಗಿ ಶಾಶ್ವತ ಶಾಂತಿಯನ್ನು ಪಡೆಯುವನೋ ಆ ಬ್ರಹ್ಮವಸ್ತುವನ್ನು ತಿಳಿದುಕೊಳ್ಳುವುದೇ ಮನುಷ್ಯಜನ್ಮದ ಗುರಿ. ಐಹಿಕ ಭೋಗಗಳು ಬಂಧನಕ್ಕೆ ಕಾರಣ ಆದುದರಿಂದ ಸಾಂಸಾರಿಕ ವಿಷಯ ಸುಖಗಳನ್ನು ತ್ಯಜಿಸುವುದೇ ಒಳ್ಳೆಯದು. ತ್ಯಾಗದಿಂದ ಮುಕ್ತಿಯು ಲಭಿಸುವುದು

**ಕೇವಲಂ ನಿರಂಜನಂ ನಿರಾಕುಲಂ ನಿರೀಹಕಂ**
**ಜನ್ಮಮೃತ್ಯುನಾಶಕಂ ಭವಾರ್ಣವಸ್ಯ ತಾರಕಮ್ ।**
**ನಿತ್ಯಶುದ್ಧಬುದ್ಧಮುಕ್ತಮಾನುಭಾವಿಕಂ ಪರಂ**
**ತತ್ಪದಂ ನಿಜಸ್ವರೂಪಮಾಪ್ನುಯಾಮಹಂ ಕಥಮ್ ॥ ೨೪**

ಸಚ್ಚಿದಾನಂದರೂಪವಾದ ಬ್ರಹ್ಮವೇ ಸತ್ಯ. ಜಗತ್ತು ಮಿಥ್ಯ, ಜೀವವು ಬ್ರಹ್ಮವೇ. ಅದು ಬ್ರಹ್ಮಕ್ಕಿಂತ ಬೇರೆಯದಲ್ಲ. ಆದರೂ ಔಪಾಧಿಕ ಬ್ರಹ್ಮವು ಅದ್ವಿತೀಯ ಸಂಗರಹಿತ ಶೋಕಾದಿಗಳು ಅದಕ್ಕೆ ಇಲ್ಲ ಆದು ಅಪೇಕ್ಷಾರಹಿತ. ಉಪಾಸನಾರ್ಥವಾಗಿ ಸಗುಣವಾದ ಬ್ರಹ್ಮವು ಉಪಾಸಕರಿಗೆ ಪುನರ್ಜನ್ಮ ಮರಣಾದಿ ಗಳನ್ನು ನಾಶಪಡಿಸುವುದು. ಅದು ಅನಾದ್ಯವಿದ್ಯಾಪ್ರವಾಹವೂ ಸತತ ಪರಿವರ್ತನ ಶೀಲವೂ ಆದ ಜಗತ್ತೆಂಬ ಕಡಲನ್ನು ದಾಟಿಸುವ ನೌಕಾಸ್ಥಾನ. ಬ್ರಹ್ಮವು ಶಾಶ್ವತ ಮತ್ತು ದೋಷರಹಿತ. ಅದು ಜ್ಞಾನರೂಪ ಮತ್ತು ಸ್ವಾನುಭವೈಕವೇದ್ಯ. ನೋಡು ವವರಿಗೆ ಬಂಧವಿರುವಂತೆ ಕಂಡರೂ ತಾನು ಮಾತ್ರ ಬಂಧರಹಿತ. ಅದು ಅತ್ಯಂತ ಶ್ರೇಷ್ಠವಾದುದು. ಆ ಬ್ರಹ್ಮವು ತನ್ನದೇ ಆದ ರೂಪ ಅದು ತನಗಿಂತ ಬೇರೆಯಂ ದಲ್ಲ. ಇಂತಹ ಬ್ರಹ್ಮವನ್ನು ತಿಳಿದು ಅದರ ಸ್ವರೂಪವನ್ನು ನಾನು ಯಾವಾಗ ಪಡೆದೇನು ?

**ಇತ್ಥಮಾತ್ಮನಿಷ್ಠವೃತ್ತಿಭಾವನಾತರಂಗಿಣೀ**
**ರಿಂಖತಿ ಸ್ಮ ತಸ್ಯ ಜಾತು ಚಿತ್ತಭೂಮಿಕಾಂಗಣೇ ।**
**ಭಾವನಾ ಚ ಸಾಂಕುರಾ ಲತೇವ ಪಲ್ಲವೋಲ್ಲಸ-**
**ದ್ವಷ್ಮಭೂಷ್ಣುರಸ್ಯ ಸಾ ವಸಂತಕಾಲಮೈಕ್ಷತ ॥ ೨೫**

ಹೀಗೆ ಅಧ್ಯಾತ್ಮಜ್ಞಾನಿಗಳ ಅಂತರಂಗದಿಂದ ಚಿಮ್ಮುವಂತಹ ಭಾವನಾಮಯ ವಾದ ಹೊಳೆಯು ಒಮ್ಮೆ ಆ ಬಾಲಕ ವಿದ್ಯಾರ್ಥಿಯ ಹೃದಯ ರಂಗಸ್ಥಳದಲ್ಲಿ ಕುಣಿಯುತ್ತಿತ್ತು. ಆ ಭಾವನೆಯೇ ಹೊಸ ಮೊಳಕೆವೊಡೆದು ಬಳ್ಳಿಯಂತೆ ಚಿಗು ರೊಡೆದು ಮೈದುಂಬಿಕೊಳ್ಳಲು ಅನುಕೂಲವಾದ ವಸಂತ ಋತುವಿನ ನಿರೀಕ್ಷೆಯಲ್ಲಿ ಇದ್ದಿತು.

**ರಾಮನಾಮದಿವ್ಯಮಂತ್ರಜಿಂತಸತ್ಪ್ರಭಾವನಿತ್**
**ತತ್ತದಾಶ್ರಮೋಕ್ತಧರ್ಮದೇಶಿಕಃ ಸದಾಜನ ।**
**ಶಿಷ್ಯವೃಂದಯಾಜ್ಞಯಾ ಬಹಿಃಪುರಂ ಕೃಪಾನಿಧೀ**
**ರಾಮಚಂದ್ರಭಾರತೀ ಯತಿಃ ಸುಧೀಃ ಪ್ರತಸ್ಥಿವಾನ್ ॥** ೨೬

ಇತ್ತ **ಶ್ರೀಮದ್ರಾಮಚಂದ್ರಾಪುರದ** ಪೀಠಾಧೀಶ್ವರರಾದ **ಶ್ರೀಮದ್ರಾಮ**ಚಂದ್ರಭಾರತೀಸ್ವಾಮಿಗಳವರು ಒಂದುಸಲ ತಮ್ಮ ಸಂಪ್ರದಾಯದಂತೆ ಸಂಚಾರ ಕೈಗೊಂಡರು. ಶಿಷ್ಯರು ತಮ್ಮಲ್ಲಿಗೆ ದಯಮಾಡಿ ಬರಬೇಕೆಂದು ಪ್ರಾರ್ಥಿಸಿಕೊಂಡಿದ್ದರು. ಶ್ರೀಮದಾಚಾರ್ಯಪಾದರು ಶಿಷ್ಯರಿಗೆ ಆ ಯಾ ವರ್ಣಾಶ್ರಮೋಚಿತವಾದ ಧರ್ಮವನ್ನು ಉಪದೇಶ ಮಾಡುತ್ತಿದ್ದರು. ಮಾತ್ರ ಅವರು ತಮ್ಮ ಉಪಾಸ್ಯ ದೇವತೆಯಾದ ಶ್ರೀಮದ್ರಾಮನಾಮಗಳೆಂಬ ದಿವ್ಯಮಂತ್ರಗಳ ನತತ ಪುರಶ್ಚರಣೆಯ ಮಹಿಮೆಯನ್ನು ಬಲ್ಲವರಾಗಿದ್ದರು.

**ಆದ್ಯಶಂಕರಪ್ರಣೀತಶಾಸ್ತ್ರತತ್ತ್ವವಾಕ್ಸುಧಾ–**
**ಮಾರ್ತಬಂಧುರಾಪ್ತಶಿಷ್ಯಮಂಡಲಾನಿ ಪಾಯಯನ್ ।**
**ಯೋಜಯಂಶ್ಚ ಗೇಹಿನಃ ಸನಾತನಸತ್ರಿಯಾ ಗೃಹಾನ್**
**ಸಂಚಚಾರ ರಾಮಚಂದ್ರಭಾರತೀ ಸುಭಾರತೀ ॥** ೨೭

**ಆರ್ತ** ಬಂಧುಗಳಾದ ಅವರು ತಮ್ಮ ಮೇಲೆ ನಂಬಿಕೆಯಿಟ್ಟಿರುವ **ಶಿಷ್ಯಸಮು**ದಾಯಕ್ಕೆ ಶ್ರೀಮಚ್ಛಂಕರ ಭಗವತ್ಪಾದರ ಅದ್ವೈತ ವೇದಾಂತದ ತತ್ತ್ವವನ್ನು ಬೋಧಿಸುವ ವಾಕ್ಸುಧೆಯನ್ನು ಕುಡಿಸಿ ತೃಪ್ತಿಗೊಳಿಸಿದರು. ಮತ್ತು ಗೃಹಸ್ಥರನ್ನು ಸನಾತನ ಧರ್ಮಸಂಪತ್ತಿನೊಡನೆ ಸೇರಿಸುತ್ತಾ ಗ್ರಾಮದಿಂದ ಗ್ರಾಮಕ್ಕೆ ಸಂಚರಿಸುತ್ತಿದ್ದರು. ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳು ಒಳ್ಳೆಯ ಮಾತುಗಾರರು. ಅವರು **ಶಿಷ್ಯ**ರನ್ನು ಕುರಿತು ಹೀಗೆ ಬೋಧಿಸತೊಡಗಿದರು:

**ದೇಶಕಾಲವೈಪರೀತ್ಯಧರ್ಮಮಾಶ್ರಿತಾ ಜನಾಃ**
**ಸ್ವಸ್ವಧರ್ಮಲೋಪಜಾತದುಷ್ಫಲಾನ್ಯುಪಾಸತೇ ।**
**ಸ್ವಧರ್ಮನೋ ನಿಜಾಭಿಲಾಷಪೂರಕೇ ಗುರೌ ಸ್ಥಿತೇ**
**ದುರ್ಗ್ರಹಾದುಪಾಶ್ರಯಂತಿ ನೀಚಪ್ಯೈವತಂ ಪರಮ್ ॥** ೨೮

"ಶಿಷ್ಯರಿರಾ! ಇಂದಿನ ಜನರು ದೇಶ ಕಾಲಗಳಿಂದ ಶ್ರುತಿ ಸ್ಮೃತಿಗಳಿಗೆ ವಿರುದ್ಧವಾದ ನಡವಳಿಕೆಯನ್ನು ಹೊಂದಿರುವರು. ಅವರು ತಮ್ಮ ತಮ್ಮ ವರ್ಣಾಶ್ರಮಗಳಿಗೆ ಅನುಗುಣವಾದ ಆಚಾರ ವ್ಯವಹಾರಗಳನ್ನು ಕೈಬಿಡುತ್ತಿದ್ದಾರೆ. ಸ್ವಧರ್ಮಾಚರಣೆಯ **ಲೋಪದಿಂದ** ಈಶ್ವರಪ್ರಕೋಪವುಂಟಾಗಿ ಅದರಿಂದ ಆಗುವ ಅನರ್ಥಗಳನ್ನು

ಪರಿಗಣಿಸದೇ ಇದ್ದಾರೆ ತಮ್ಮ ಇಷ್ಟಾರ್ಥಗಳನ್ನು ತುಂಬುವ ಕಲ್ಪವೃಕ್ಷಸ್ಥಾನೀಯ-ನಾದ ಗುರುವು ಸಮೀಪದಲ್ಲಿ ಇರುವಾಗ, ಇವರು ದುರ್ಬುದ್ಧಿಯಿಂದ ಗುರುವನ್ನು ಉಪೇಕ್ಷಿಸಿ ಬೇರೆ ನೀಚವಾದ ದೇವತೆಯನ್ನು ತಮ್ಮ ಇಷ್ಟಸಿದ್ಧಿಗಾಗಿ ಆಶ್ರಯಿಸು-ತ್ತಿದ್ದಾರೆ.

**ದ್ರುಮಾಲಯಾಃ ಫಲಾಶಿನಶ್ಚ ಜೀರ್ಣಚೀವರಾಂಬರಾ**
**ನಿರಾಕುಲಾ ನಿರಾಶಿಷಃ ಪರೋಪಕಾರಿಣಃ ಸದಾ ।**
**ಅಶೇಷಶಿಷ್ಯಶೋಕನಾಶಹೇತವೋ ಭ್ರಮಂತಿ ಯೇ**
**ಪರಾತ್ಪರೈಕದೃಷ್ಟಯಸ್ತ ಏವ ದೇಶಿಕಾಃ ಸತಾಮ್ ॥** ೨೯

ಯಾರು ಸಾಂಸಾರಿಕ ದುಃಖರಹಿತರೂ ನಿಃಸ್ವಾರ್ಥಿಗಳೂ ಆಗಿ ಪರಹಿತಕ್ಕಾಗಿಯೇ ಸಂಚರಿಸುತ್ತಾ ಸಮಸ್ತ ಶಿಷ್ಯರ ಸಂತಾಪಗಳನ್ನು ನಿವಾರಿಸಲು ಕಾರಣೀಭೂತರಾಗಿದ್ದಾರೆಯೋ, ಯಾರು ವೈರಾಗ್ಯಶಾಲಿಗಳೂ ಜ್ಞಾನಿಗಳೂ ಆಗಿ, ದೇಹಾಭಿಮಾನ ತೊರೆದು ಹಣ್ಣು ಹಂಪಲುಗಳನ್ನು ತಿನ್ನುತ್ತಾ ಮರಗಳ ಅಡಿಯಲ್ಲಿಯೇ ವಿಶ್ರಮಿಸುತ್ತಾ, ನಾರುಡೆಯುಟ್ಟು ಸಂನ್ಯಾಸಿಗಳಾಗಿದ್ದಾರೆಯೋ ಅವರ ದೃಷ್ಟಿ ಪರಬ್ರಹ್ಮ ವಸ್ತುವಿನಲ್ಲಿ ಅಚಲ, ಅಂತಹ ಬ್ರಹ್ಮಜ್ಞಾನಿಗಳೇ ಅಧ್ಯಾತ್ಮದ ಉಪದೇಶಕ್ಕೆ ಅರ್ಹರಾದವರು, ಅವರೇ ಸಜ್ಜನರೊಳಗೆ ಆಚಾರ್ಯರು ಅಥವಾ ಗುರುಗಳೆಂದು ಹೇಳಿಸಿಕೊಳ್ಳಲು ಅರ್ಹರು.

**ಪುತ್ರಕಾಶ್ಚಿರಂತನೋ ಗುರುಃ ಸದಾ ನಿಷೇವ್ಯತಾಂ**
**ಸ್ವರ್ಣಪುಷ್ಪಿತಾ ಮಹೀ ಫಲೇಗ್ರಹಿಃ ಪ್ರಚೀಯತಾಮ್ ।**
**ಏವಮಾಂತರಂಗಿಕೈರ್ವಚೋಭಿರಾಶ್ರಿತಾನಸೌ-**
**ನಾಶಶಂಸ ಆತ್ಮವಿಚ್ಛ್ರೀ ರಾಮಚಂದ್ರಭಾರತೀ ॥** ೩೦

ಮಕ್ಕಳೇ! ಶಾಶ್ವತನೂ ತತ್ತ್ವೋಪದೇಶನೂ ಜಗದ್ಗುರುವೂ ಆದ ಪರಮಾತ್ಮ-ನಿಗೆ ಶರಣುಹೋಗಿ ಚಿನ್ನದ ಹೂ ಬೆಳೆಯುವ ಫಲಪ್ರದವಾದ ಭೂಮಿಯನ್ನು ಬಿತ್ತಿರಿ ಅನಾಯಾಸವಾಗಿ ಬಂಗಾರದ ಸಮೃದ್ಧವಾದ ಬೆಳೆಯನ್ನು ಪಡೆದು ಸುಖವಾಗಿರಿ." ಹೀಗೆ ಅಧ್ಯಾತ್ಮಜ್ಞಾನಿಗಳಾದ ರಾಮಚಂದ್ರಭಾರತೀಸ್ವಾಮಿಗಳು ಅಂತರಂಗವನ್ನು ಮುಟ್ಟುವ ಹಿತೋಕ್ತಿಗಳಿಂದ ಶಿಷ್ಯರಿಗೆ ಶುಭವನ್ನು ಹಾರೈಸಿದರು.

**ಇತ್ಥಮಾತ್ಮಮಾಧುರೀಧುರೀಣವಾಕ್ಯಧೋರಣೀಂ**
**ದೇಶಿಕಾನನಾದ್ವಿನಿಸ್ಸೃತಾಂ ಸುರಾಪಗಾಸಖೀಮ್ ।**
**ತಾಂ ನಿಪೀಯ ಶಿಷ್ಯಮಂಡಲೀ ಸುಧಾಪ್ಲುತೇವ ಸಾ**
**ಪೂತಮಾನಸಾ ಬಭೂವ ಮೋದನಿರ್ಭರಾ ತದಾ ॥** ೩೧

ಗುರುಗಳ ಬಾಯಿಂದ ಹೊರಟ ಆ ಮಾತುಗಳು ಚಾಂದ್ರೊರೆಯು ತೊರೆಯಂತೆ ಪರಮಪವಿತ್ರವೂ ಕಲ್ಲುಸಕ್ಕರೆಯಂತೆ ಅತ್ಯಂತ ಮಧುರವೂ ಆಗಿದ್ದವು ಅಲ್ಲಿ ನೆರೆದಿದ್ದ ಶಿಷ್ಯಸ್ತೋಮವು ಆಚಾರ್ಯರ ನವಿಮಾತುಗಳನ್ನು ಕುಡಿದು ಸಂತೋಷಭರಿತವಾಯಿತು. ಅಮೃತದ ಹೊಳೆಯಲ್ಲಿ ಮಿಂದವರಂತೆ ಅವರ ಮನಸ್ಸು ಅತ್ಯಂತ ಪರಿಶುದ್ಧವಾಯಿತು

ಗ್ರಾಮಸೀಮವಾಸಿಶಿಷ್ಯಮಂಡಲೀಚರಂ ಗುರುಂ
ತಂ ನಿಶಮ್ಯ ತತ್ಪದಾಬ್ಜಯುಗ್ಮದರ್ಶನೋತ್ಸುಕಃ ।
ಮಾಗಲೂಗಣೇಶಭಟ್ಟ ಏಷ ವೈದಿಕಾಗ್ರಣೀ–
ರಾಜಗಾಮ ಸೂನುನಾ ಸಹಾಸ್ಯ ಸನ್ನಿಧಿಂ ತದಾ ॥ ೩೨

ಶ್ರೀಮದ್ರಾಮಚಂದ್ರಾಪುರದ ಸ್ವಾಮಿಗಳಾದ ಶ್ರೀರಾಮಚಂದ್ರಭಾರತೀಗಳು ಗ್ರಾಮಸೀಮೆಗಳಲ್ಲಿ ವಾಸಿಸುತ್ತಿದ್ದ ತಮ್ಮ ಶಿಷ್ಯಮಂಡಲಿಯ ಕೋರಿಕೆಯಂತೆ ಸಂಚಾರದಲ್ಲಿರುವ ಸುದ್ದಿ ವೈದಿಕ ಶಿರೋಮಣಿ ಮಾಗಲೂ ಗಣೇಶ ಭಟ್ಟರ ಕಿವಿಗೆ ಬಿತ್ತು. ಬಳಿಕ ಭಟ್ಟರು ಶ್ರೀಮದಾಚಾರ್ಯರ ಸಂದರ್ಶನಕ್ಕೆ ಎಳಸಿದರು. ಪಾಠಶಾಲೆಗೆ ರಜೆಯಿದ್ದದ್ದರಿಂದ ವಿದ್ಯಾರ್ಥಿಯಾದ ತಮ್ಮ ಮಗನೂ ಊರಿಗೆ ಬಂದಿದ್ದರಿಂದ ಅವರು ಆ ಮಗನನ್ನು ಕರೆದುಕೊಂಡು ಗುರುಸನ್ನಿಧಿಗೆ ಬಂದರು

ಅಭ್ಯನಂದತ ದ್ವಿಜಃ ಸ ಭಕ್ತಿಭಾವಭಂಗುರಃ
ಪಾದಪಂಕಜಂ ಗುರೋಸ್ಸಪುತ್ರಕೋ ಯಥಾವಿಧಿ ।
ಆತ್ಮಜೇ ಸಸಂಜ ತಸ್ಯ ಪೂರ್ವಪುಣ್ಯವಲ್ಲರೀ
ರಾಮಚಂದ್ರಸದ್ಗುರೋಸ್ತದಾಕಟಾಕ್ಷಧೋರಣೀ ॥ ೩೩

ಭಕ್ತಿವಿನಮ್ರರೂ ಬ್ರಾಹ್ಮಣೋತ್ತಮರೂ ಆದ ಶ್ರೀ ಭಟ್ಟರು ಶ್ರೀಗುರುಗಳ ಪಾದಾರವಿಂದಗಳಿಗೆ ವಿಧಿವತ್ತಾಗಿ ಅಭಿವಂದಿಸಿದರು ತಂದೆಯವರ ಜೊತೆಗೆ ಹುಡುಗನೂ ಕೂಡ ನಮಸ್ಕರಿಸಿದನು. ಆಗ ಶ್ರೀಗಣೇಶ ಭಟ್ಟರ ಮಗನ ಪೂರ್ವಜನ್ಮದ ಪುಣ್ಯದ ಬಳ್ಳಿಯೋ ಆಗಿರುವ ಶ್ರೀರಾಮಚಂದ್ರಭಾರತೀಗಳ ಕಟಾಕ್ಷಶ್ರೇಣಿಯು ಆ ಹುಡುಗನ ಮೇಲೆ ಬಿದ್ದಿತು

ಆವಿರಾಸ ಶಿಷ್ಯವೃಂದಕರ್ಣಾನಾಂ ಫಲೋನ್ಮುಖೀ
ಬಾಲಕೇಽತ್ರ ಶಿಷ್ಯತಾಪರಿಗ್ರಹಾನುಕೂಲಿನೀ ।
ಶಾಂಕರೀ ಕೃಪೇವ ತತ್ರ ಚಿತ್ತವೃತ್ತಿರೈಶ್ವರೀ
ತಾವತೈವ ರಾಮಚಂದ್ರಭಾರತೀಗುರೋರ್ಹೃದಿ ॥ ೩೪

ಆ ಕೂಡಲೇ ಈ ಬಾಲಕನ ವಿಷಯದಲ್ಲಿ ಸಮಸ್ತಶಿಷ್ಯವೃಂದದ ಪೂರ್ವಜನ್ಮದ ಸತ್ಕರ್ಮಗಳ ಫಲೋನ್ಮುಖವೂ, ತಮ್ಮ ಪೀಠದ ಉತ್ತರಾಧಿಕಾರಿ ಶಿಷ್ಯಪರಿಗ್ರಹಕ್ಕೆ ಅನುಕೂಲವೂ ಆದ ಈಶ್ವರೀಯ ಸಂಕಲ್ಪವೊಂದು ಶ್ರೀಮದ್ಭಗವತ್ಪಾದಶಂಕರಾಚಾರ್ಯರ ಕೃಪೆಯಂತೆ ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳ ಹೃದಯದಲ್ಲಿ ಹೊರಹೊಮ್ಮಿತು.

**ಗಚ್ಛತಾಪ್ಯನೇಹಸಾಂ ಶತೇನ ವೈಕೃತಂ ತನೌ**
**ಪ್ರಾಪ್ಯ ಲೋಕಧರ್ಮವಿಜ್ಞರಾಧಿರಾಜಶಾಸಿತಮ್ ।**
**ನಾಶಕತ್ ಸ ನಿತ್ಯಕರ್ಮಪೂಜನಾದ್ಯುಪಾಸಿತುಂ**
**ಸೇವಕೈಃ ಕೃತಕ್ರಿಯೋಸ್ಯಧೀಕ್ಷಿತುಂ ಗುಣಾನಪಿ ॥** ೩೫

ಕೆಲವು ದಿನಗಳು ಕಳೆದ ಬಳಿಕ ಲೋಕಧರ್ಮವನ್ನು ತಿಳಿದ ಶ್ರೀರಾಮಚಂದ್ರಭಾರತೀಗಳು ತಮ್ಮ ಶರೀರದಲ್ಲಿ ಮುಪ್ಪಿನ ಅರಸನ ಶಾಸನದ ಫಲವಾದ ನೆರೆ, ಸುಕ್ಕು ಮೊದಲಾದ ದೈಹಿಕ ವಿಕಾರವನ್ನು ಹೊಂದಿದರು. ನಿತ್ಯವೂ ಆಚರಿಸಬೇಕಾದ ತ್ರಿಕಾಲಸ್ನಾನ, ಪೂಜೆ, ಭಿಕ್ಷೆ ಮುಂತಾದವುಗಳನ್ನು ಸುಲಭವಾಗಿ ನಿರ್ವಹಿಸಲು ಆಗುತ್ತಿರಲಿಲ್ಲ. ಅನುಕ್ರಮವಾಗಿ ಮೈ ಶಕ್ತಿಗುಂದಿತು. ಹೆಚ್ಚೇನು! ಆಳುಗಳು ಮಠದ ಕೆಲಸಗಳನ್ನು ಹೇಗೆ ನಿರ್ವಹಿಸಿದರೆಂಬುದನ್ನು ಪರಿಶೀಲಿಸಲೂ ಅವರಿಗೆ ಆಗುತ್ತಿರಲಿಲ್ಲ.

**ಏತದೀಯಪೀಠಿಕೋಪವೇಷ್ಟೃಭಿಃ ಪುರಾತನೈಃ**
**ಸ್ವೋತ್ತರಾಧಿಕಾರಯೋಗ್ಯಶಿಷ್ಯಸಂಗ್ರಹಃ ಪುರಾ ।**
**ವಾರ್ಧಕೇ ಕೃತೋ ಯಥಾ ಪರಂಪರಾನುವೃತ್ತಯೇ**
**ತಾದೃಶಂ ಪುಮಾಂಸಮದ್ಯ ಕಂ ಪುನರ್ಲಭಾಮಹೈ ॥** ೩೬

ಒಂದಾನೊಂದು ದಿನ ಶ್ರೀರಾಮಚಂದ್ರಭಾರತೀಗಳು ತಮ್ಮ ಮನಸ್ಸಿನಲ್ಲಿ ಹೀಗೆ ಭಾವಿಸಿದರು. ಏನೆಂದರೆ, ಈ ಮಠದ ಹಿಂದಿನ ವ್ಯಾಖ್ಯಾನ ಪೀಠಾಧಿಪತಿಗಳಾದ ನಮ್ಮ ಹಿರಿಯ ಗುರುಗಳು ತಮ್ಮ ಅವಿಚ್ಛಿನ್ನ ಶಿಷ್ಯ ಪರಂಪರೆಯನ್ನು ರಕ್ಷಿಸುವುದಕ್ಕಾಗಿ ತಮಗೆ ಮುಪ್ಪು ಆಡಸಿರಲು ಉತ್ತರಾಧಿಕಾರ ಪೀಠಕ್ಕೆ ಅರ್ಹರಾದ ಶಿಷ್ಯರನ್ನು ಸ್ವೀಕರಿಸಿದ್ದರು ಈಗ ನಮಗೂ ವಾರ್ಧಕ್ಯವುಂಟಾಗಿದೆ. ನಮ್ಮ ಅನಂತರ ಈ ಪೀಠಕ್ಕೆ ಅರ್ಹರಾದ ಶಿಷ್ಯರೊಬ್ಬರು ಬೇಕು. ಅಂತಹ ಗುಣಶಾಲಿಯಾದ ಯಾವ ಪುರುಷನನ್ನು ಪಡೆಯೋಣ !

**ಅಸ್ಮದಪ್ಯನಂತರಂ ತದತ್ರ ಭದ್ರಪೀಠಿಕಾಂ**
**ಶಾಂತಿದಾಂತಿಕಾಂತಿಮಾನ್ ಜಿತೇಂದ್ರಿಯಃ ಕುಶಾಗ್ರಧೀಃ ।**
**ಕಃ ಪುಮಾನಲಂಕರೋತು ಶಿಷ್ಯ ಇತ್ಯಚಿಂತಯ-**
**ದ್ರಾಮಚಂದ್ರಭಾರತೀ ಕದಾಚಿದಾತ್ಮನಿ ಸ್ವಯಮ್ ॥** ೩೭

ಸೂಕ್ಷ್ಮ ಬುದ್ಧಿಯುಳ್ಳವನೂ ಶಾಂತಿ, ದಮ, ಕಾಂತಿ, ಮೊದಲಾದ ಗುಣಗಳುಳ್ಳ ಯಾವ ಶಿಷ್ಯನು ನಮ್ಮ ಬಳಿಕ ಈ ಮಠದಲ್ಲಿ ವ್ಯಾಖ್ಯಾನ ಪೀಠವನ್ನು ಅಲಂಕರಿಸಲಿ ಎಂದು ಮತ್ತೊಮ್ಮೆ ಶ್ರೀರಾಮಚಂದ್ರಭಾರತೀಗಳು ತಮ್ಮ ಮನಸ್ಸಿನಲ್ಲಿ ಭಾವಿಸಿದರು

**ಆಜುಹಾವ ಸರ್ವಶಿಷ್ಯಮಂಡಲೀಧುರಂಧರಾನ್**
**ದೇಶಿಕೋತ್ತಮಸ್ತತಸ್ಸ್ವಮಾಶಯಂ ನ್ಯರೂಪಯತ್ ॥**
**ರಾಮಚಂದ್ರಪೀಠಿಕಾಧಿರೋಹಣಾರ್ಹಲಕ್ಷಣಂ**
**ಯೂಯಮುಸ್ಯ ಮಾರ್ಗಯಧ್ವಮರ್ಭಕಂ ಶುಭಾಸ್ಪದಮ್ ॥** ೩೮

ಅನಂತರ ಆಚಾರ್ಯರು ಎಲ್ಲಾ ಸೀಮೆಯ ಶಿಷ್ಯಪ್ರಮುಖರನ್ನು ಕರೆಸಿ ಸಭೆ ಸೇರಿಸಿದರು. ಅವರಿಗೆ ತಮ್ಮ ಮನೋಗತವಾದ ಆಶಯವನ್ನು ವಿವರಿಸಿದರು "ಶ್ರೀರಾಮಚಂದ್ರಾಪುರದ ಗುರು ಪೀಠಕ್ಕೆ ತಕ್ಕ ಅರ್ಹತೆಯುಳ್ಳ ಸಂನ್ಯಾಸಯೋಗದ ಮಂಗಳಮಯ ಶಿಷ್ಯನನ್ನು ಸ್ವೀಕರಿಸುವ ಸಲುವಾಗಿ ಒಬ್ಬ ಹುಡುಗನನ್ನು ಹುಡುಕಿ ತನ್ನಿರಿ" ಎಂದು ಅಪ್ಪಣೆಯಿತ್ತರು

**ಸಭಾಸದಸ್ತದಾಜ್ಞಯಾ ಮಹಾಜನಾ ಹಿತೈಷಿಣೋ**
**ವಿಚೇತುಮಿಷ್ಟಲಕ್ಷಣಂ ಪ್ರತಸ್ಥಿರೇ ದಿಶಾಂ ತಟಮ್ ।**
**ಅಥಾಗ್ರಹಾರಪಲ್ಲಿತೀರ್ಥಸೀಮವಾಸಿನಾಂ ಕುಲೇ**
**ದ್ವಿಜನ್ಮನಾಂ ಬಹುಶ್ರುತಾ ವಿಚೇರುರಗ್ರಗಾ ಅಮೀ ॥** ೩೯

ಅನಂತರ ಅಂದಿನ ಸಭೆಯಲ್ಲಿ ಹಾಜರಿದ್ದ ಮಠದ ಹಿತೈಷಿಗಳಾದ ಸೀಮೆಯ ಪ್ರಮುಖರು ಗುರುಗಳ ಅಪ್ಪಣೆಯ ಮೇರೆಗೆ ಮಠದ ಉತ್ತರಾಧಿಕಾರಕ್ಕೆ ತಕ್ಕ ಲಕ್ಷಣವುಳ್ಳ ಹುಡುಗನನ್ನು ಹುಡುಕುವುದಕ್ಕಾಗಿ ದಿಕ್ಕು ದಿಕ್ಕಿಗೆ ಹೋದರು. ವಿದ್ಯಾವಂತರಾದ ಈ ಪ್ರಮುಖರು ಅಗ್ರಹಾರ, ಹಳ್ಳಿ, ತೀರ್ಥಕ್ಷೇತ್ರ, ಸೀಮೆ ಮುಂತಾದ ಕಡೆ ವಾಸಿಸುತ್ತಿರುವ ಹವ್ಯಕ ಬ್ರಾಹ್ಮಣರ ನಿವಾಸಸ್ಥಾನದಲ್ಲಿ ಸಂಚರಿಸಿದರು.

**ಆನಯಂಶ್ಚ ಸಪ್ತಜನ್ಮಪತ್ರಿಕಾ ದ್ವಿಜನ್ಮನಾಂ**
**ಬ್ರಹ್ಮಚಾರಿಣಾಮಮೀ ಗುರೋರ್ನಿದೇಶವರ್ತಿನಃ ।**
**ಜ್ಯೌತಿಷಜ್ಞಪುಂಗವಾ ಇಮಾಶ್ಚ ಪದ್ಯಶೀಲಯನ್**
**ಯದ್ವಿರಜ್ಯ ಚಾಶ್ರಮಂ ತುರೀಯಮಾಪ್ತುಮಿಚ್ಛತಿ ॥** ೪೦

ಗುರುಗಳಿಗೆ ವಿಧೇಯರಾದ ಇವರು ಸೀಮೆಗಳಲ್ಲಿ ಸಂಚರಿಸಿ ಏಳು ಬ್ರಾಹ್ಮಣ ವಟುಗಳ ಜಾತಕಗಳನ್ನು ಸಂಪಾದಿಸಿ ತಂದರು ಜ್ಯೋತಿಷ ವಿದ್ವಾಂಸರು ಈ ಜಾತಕಗಳಲ್ಲಿ ಯಾವ ಜಾತಕದಲ್ಲಿನ ನವಗ್ರಹಗಳ ಸ್ಥಿತಿ ಸಂನ್ಯಾಸಯೋಗಕಾರಕವಾಗಿದೆ ಎಂಬುದನ್ನು ಕುರಿತು ಪರಿಶೀಲಿಸಿದರು.

**ತಾಸು ಸಪ್ತಸು ಪ್ರಸಿದ್ಧಪಂಡಿತಾಭಿನಂದಿತಾ**
**ಸರ್ವಸಂಗಭಂಗಹೇತುಭಿಕ್ಷುಯೋಗಶಂಸಿಕಾ ।**
**ಜನ್ಮಪತ್ರಿಕಾ ತನೂಭುವೋ ಗಣೇಶಶರ್ಮಣೋ**
**ಹ್ಯತ್ಯಶೇತ ಯೋಗಿರಾಜಲಕ್ಷಣಗ್ರಹಾಂಚಿತಾ ॥** ೪೧

ಆರಿಸಿ ತಂದ ಆ ಏಳುವಟುಗಳ ಜನ್ಮಪತ್ರಿಕೆಗಳೊಳಗೆ ಮಾಗಲೂ ಗಣೇಶ ಭಟ್ಟರ ಕುಮಾರನ ಜಾತಕದಲ್ಲಿ ಸರ್ವಸಂಗ ಪರಿತ್ಯಾಗದ ಸಂನ್ಯಾಸಯೋಗ ಸ್ಫುಟವಾಗಿತ್ತು. ನವಗ್ರಹಗಳ ಸ್ಥಿತಿಯು ಜಾತಕನ ಪರಮಹಂಸಪರಿವ್ರಾಡ್ ಲಕ್ಷಣದ ಯೋಗವನ್ನು ವ್ಯಕ್ತಪಡಿಸುತ್ತಿತ್ತು. ಇತರ ಜಾತಕಗಳಿಗಿಂತ ಇದೊಂದೇ ಪ್ರಥಮ ಶ್ರೇಣಿಯದಾದುದರಿಂದ ಜ್ಯೋತಿಷ ವಿದ್ವಾಂಸರ ಮಚ್ಚಿಗೆ ಪಡೆಯಿತು.

**ಶಿಷ್ಯಮಂಡಲೀ ಪ್ರಮೋದನಿರ್ಭರಾ ಸಸಂಭ್ರಮಾ**
**ರಾಮಚಂದ್ರಪೀಠಿಕಾರ್ಹಮುತ್ತರಾಧಿಕಾರಿಣಾಮ್ ।**
**ಸ್ಥಾನಮಸ್ಯಯುಕ್ತರೂಪಮಿತ್ಯಸಂಶಯಂ ಗತಾ**
**ಸಂನ್ಯವೇದಯಚ್ಚ ರಾಮಚಂದ್ರಯೋಗಿಸನ್ನಿಧೌ ॥** ೪೨

ಮಠಕ್ಕೆ ಉತ್ತರಾಧಿಕಾರಿ ಶಿಷ್ಯನನ್ನು ಆರಿಸುವುದಕ್ಕಾಗಿ ರಚಿತವಾದ ಶಿಷ್ಯಮಂಡಲಿಯು ತಾನು ಸಂಗ್ರಹಿಸಿದ ಜಾತಕಗಳಲ್ಲಿ ಮಾಗಲೂ ಗಣೇಶ ಭಟ್ಟರ ಪುತ್ರನ ಜಾತಕ ವಿದ್ವಾಂಸರ ಮಚ್ಚಿಗೆ ಪಡೆದಿರುವುದನ್ನು ತಿಳಿದು ಹರ್ಷಗೊಂಡಿತು. ಗುರುಪೀಠದ ಉತ್ತರಾಧಿಕಾರಿಸ್ಥಾನ ಆ ಹುಡುಗನಿಗೆ ಯೋಗ್ಯವಾಗಿರುವುದೆಂದು ನಿಶ್ಚಯಿಸಿತು. ತಮ್ಮ ಸಮಿತಿಯ ಅಭಿಪ್ರಾಯವನ್ನು ಸಂಭ್ರಮದೊಡನೆ ಗುರುವರ್ಯ ಶ್ರೀರಾಮಚಂದ್ರಭಾರತೀಗಳ ಸನ್ನಿಧಿಯಲ್ಲಿ ಬಿನ್ನವಿಸಿಕೊಂಡಿತು.

**ಜನ್ಮಪತ್ರಸಪ್ತಕೇ ಪ್ರಶೋಧಿತೇ ತದದ್ವಯಾ**
**ಮಾಗಲೂಗಣೇಶಭಟ್ಟಶರ್ಮಣಃ ಸುತಸ್ಯ ಸಾ ।**
**ಪತ್ರಿಕಾ ವಿಶಿಷ್ಯತೇ ಹಿ ಮಸ್ಕರೀಂದ್ರಲಕ್ಷಣಾ**
**ಶ್ರೂಯತಾಂ ಗುರೋ ಭವಾನ್ ಪ್ರಮಾಣಮಿತ್ಯತಃ ಪರಮ್ ॥**

ಗುರುಗಳೇ ! ಗುರುಪೀಠದಲ್ಲಿ ಕೂರಲು ಅರ್ಹನಾದ **ಶಿಷ್ಯನೊಬ್ಬ**ನನ್ನು ಚುನಾಯಿಸಲು ಏಳುವಟುಗಳ ಜಾತಕಗಳನ್ನು ಪರಿಶೀಲಿಸಿದೆವು. ಅವುಗಳಲ್ಲಿ ಮಾಗಲೂ ಗಣೇಶಭಟ್ಟರ ಪುತ್ರನ ಜನ್ಮಪತ್ರಿಕೆಯು ಯೋಗಿ ಲಕ್ಷಣಲಕ್ಷಿತವಾಗಿ ಪ್ರಥಮ ಶ್ರೇಣಿಯದಾಗಿ ಉತ್ತಮವಾದುದೆಂದು ವಿದ್ವಾಂಸರ ಪರಿಶೀಲನೆಯಿಂದ ಸ್ಫುಟವಾಯಿತು ಆದುದರಿಂದ ಶ್ರೀ ಮಾಗಲೂ ಗಣೇಶಭಟ್ಟರ ಕುಮಾರನೇ ಮರೀಯ ಪೀಠದಲ್ಲಿ ಕೂರಲು ಯೋಗ್ಯನಾದವನೆಂದು ನಮ್ಮ ಅಭಿಪ್ರಾಯ. ತಾವು ಪ್ರತ್ಯಕ್ಷತಃ ವರಾಂಬರಿಸಬೇಕು ಎಂಬುದೇ ಆ ಬಿನ್ನಹದ ಒಕ್ಕಣಿಕೆ.

**ಚೂತಶಾಖಿಕಾನಿಷಣ್ಣಕೋಕಿಲಸ್ವನಾಂಚಿತಃ**
**ಚಾರುಚಂದ್ರಿಕಾವದಾತಕಾನನಾರ್ಣವಾಂಚಲಃ ।**
**ಕೇಶವಾರ್ಚನಾನುಕೂಲಸಾತ್ತ್ವಿಕಾನುರಂಜಕಃ**
**ಕೋಽಪಿ ಕಾಲ ಆಜಗಾಮ ಮಾಧವೀಮನೋಹರಃ ॥** ೪೪

ಅನಂತರ ಲೋಕದಲ್ಲಿ ವಸಂತ ಋತುವಿನ ಉದಯವಾಯಿತು. ಆಗ ಮಾವಿನ ಸೆಳೆಗೊಂಬಿನ ಮೇಲೆ ಕೂತಿರುವ ಕೋಗಿಲೆಯ ಇಂಚರ. ಚೆಲುವಾದ ಬೆಳ್ದಿಂಗಳಿಂದ ಬೆಳ್ಳಗೆ ತೋರುವ ಅರಣ್ಯಪಂಕ್ತಿಯ ತುದಿ ಮತ್ತು ಕಡಲ ಅಂಚು. ಕೇಶವಾರಾಧನೆಗೆ ಅನುಕೂಲವಾದ ಸಾತ್ವಿಕವಾತಾವರಣ. ಇವುಗಳಿಂದ ಆ ವಸಂತ ಸಮಯವು ಶೋಭಿಸಿತು.

**ಆದಿಶದ್ಯತೀಶ್ವರಃ ಪ್ರದಾಯ ಪತ್ರಮಾತ್ಮವಿ–**
**ದ್ರೌಪ್ಯಪಟ್ಟಶೋಭಿವೇತ್ರದಂಡಿನಂ ಕುಮಾರಕಮ್ ।**
**ಗಚ್ಛ ಸೌಮ್ಯ ಮಾಗಲೂಗಣೇಶಭಟ್ಟಮಂದಿರಂ**
**ಯಚ್ಛ ಪತ್ರಮಸ್ಮದೀಯಮಸ್ತು ಸರ್ವಮಂಗಳಮ್ ॥** ೪೫

ಇಂತಹ ವಸಂತ ಋತುವಿನಲ್ಲೊಂದು ದಿವಸ ಕೈಯಿಂದ ಬೆಳ್ಳಿಯ ಟೊಪ್ಪಿಗೆ ಯಿರುವ ಬೆತ್ತದ ಕೋಲನ್ನು ಹಿಡಿದಿದ್ದ ಬ್ರಹ್ಮಚಾರಿಯಾದ ಮಠದ ಹರಿಕಾರನನ್ನು ಕುರಿತು ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳು ಅವನ ಕೈಗೆ ರಾಯಸದ ಪತ್ರ ವನ್ನು ಕೊಟ್ಟು, "ಎಲೈ ! ಸೌಮ್ಯ ! ಮಾಗಲೂ ಗಣೇಶಭಟ್ಟರ ಮನೆಗೆ ಹೋಗು. ನಮ್ಮ ನಿರೂಪವನ್ನು ಅವರಿಗೆ ಕೊಡು. ಸರ್ವರಿಗೂ ಮಂಗಳವಾಗಲಿ" ಎಂದು ಹರಸಿ ಹೇಳಿದರು. ರಾಯಸದವನು ಗುರುಗಳ ಆದೇಶದಂತೆ ಹೊರಟುಹೋದನು.

**ಭಾವುಕಾರ್ಥಶಾಸನಂ ನಿಜೇಪ್ಸಿತಾರ್ಥಶಂಸನಂ**
**ಭೂತಭಾವಿಪುಣ್ಯಕರ್ಮಸತ್ಫಲಾನುಮಾಪಕಮ್ ।**
**ಮೋಪಚಾಲನಾಶನಂ ಚ ತನ್ನಿದೇಶನಂ ಗುರೋ–**
**ಸ್ತಾವುಭಾವವಾಪ್ಯ ವಿಪ್ರದಂಪತೀ ನನಂದತುಃ ॥** ೪೬

ಮಾಗಲೂ ಶ್ರೀ ಗಣೇಶ ಭಟ್ಟ ಮತ್ತು ಶ್ರೀಮತಿ ಮೂಕಾಂಬಿಕಮ್ಮನವರು ಎಂಬ ಆ ಇಬ್ಬರು ಬ್ರಾಹ್ಮಣ ದಂಪತಿಗಳು ಶ್ರೀಮಠದ ಗುರುಗಳ ರಾಯಸವನ್ನು ಪಡೆದು ಸಂತೋಷಿಸಿದರು. ಆ ರಾಯಸದಲ್ಲಿ ಒಕ್ಕಣೆಯು ಮಂಗಲಾತ್ಮಕವಾದ ಅರ್ಥವನ್ನು ವಿಧಿಸುವುದೂ ಆ ದಂಪತಿಗಳ ಇಷ್ಟಾರ್ಥ ಬೋಧಕವೂ ತಮ್ಮ ಹಿಂದಿನ ಜನ್ಮದ ಮತ್ತು ಮುಂದಿನ ಜೀವಿತಕಾಲದ ಸತ್ಕರ್ಮಗಳ ಫಲೋದಯದ ಅನುಮಾಪಕವೂ, ಪುತ್ರ ಮಿತ್ರಾದಿಗಳ ಮೇಲಿರುವ ಮೋಹವನ್ನು ಹೋಗಲಾಡಿಸುವುದೂ ಆಗಿದ್ದಿತು.

**ಫುಲ್ಲಲೋಚನೌ ತದರ್ಥಬೋಧವಿಸ್ಮಿತಾಂತರೌ**
**ಪೂರ್ವಜನ್ಮಭಾಗಧೇಯಭೋಜನಾತಿಧೀಕೃತೌ ।**
**ತೌ ನಿಜಾರ್ಭಕಾಂತರಂಗವೇದಿನೌ ತನೂಭುವ-**
**ಸ್ತಸ್ಯ ಭಿಕ್ಷುತಾಗ್ರಹೇ ಸ್ವಸಮ್ಮತಿಂ ವಿತೇನತುಃ ॥** ೪೭

ಆ ರಾಯಸದ ಆಶಯವನ್ನು ತಿಳಿದ ಆ ದಂಪತಿಗಳಿಬ್ಬರ ಮನಸ್ಸು ಅಚ್ಚರಿಗೊಂಡಿತು. ಅವರ ಕಣ್ಣುಗಳು ಅರಳಿದುವು. ತಮ್ಮ ಮಗನು ಸರ್ವಸಂಗಪರಿತ್ಯಾಗಿಯಾಗಿ ಅಧ್ಯಾತ್ಮ ಜ್ಞಾನಿಯಾಗುವ ಯೋಗ ಹೊಂದಿರುವುದನ್ನು ತಿಳಿದು ತಮ್ಮ ಪೂರ್ವಜನ್ಮದ ಅದೃಷ್ಟ ವಿಶೇಷದ ಫಲವು ಅನುಭವಗೋಚರವಾಯಿತೆಂದು ಅವರಿಗೆ ಮನವರಿಕೆಯಾಯಿತು. ತಮ್ಮ ಕುಮಾರನ ಅಂತರಂಗವನ್ನು ತಿಳಿದಿರುವ ಆ ತಂದೆ ತಾಯಿಗಳು ಅವನಿಗೆ ಸಂನ್ಯಾಸವಾಗುವ ವಿಷಯದಲ್ಲಿ ತಮ್ಮ ಒಪ್ಪಿಗೆಯಿತ್ತರು.

**ಮಾಸ ಆಗತೇ ತತಃ ಸ ಮಾಧವೇ ಯತೀಶ್ವರಃ**
**ಶಿಷ್ಯಸಂಗ್ರಹೋತ್ಸವಸ್ಯ ಕಾರ್ಯಸಿದ್ಧಿಹೇತವೇ ।**
**ಆಪ್ತಮೌಲಮಂತ್ರಿಭಿಶ್ಚ ಸೂಕ್ಷ್ಮಕಾರ್ಯದರ್ಶಿಭಿಃ**
**ಸ್ವಾಮಿಭಕ್ತಿಸಂಯುತೈರುಪಹ್ವರೇಽಭ್ಯಚಿಂತಯತ್ ॥** ೪೮

ಅನಂತರ ವೈಶಾಖಮಾಸವು ಬಂದ ಕೂಡಲೇ ರಾಮಚಂದ್ರಾಪುರದ ಗುರುವರ್ಯರಾದ ರಾಮಚಂದ್ರಭಾರತೀಗಳು ಮಠದ ಉತ್ತರಾಧಿಕಾರಿ ಶಿಷ್ಯಪರಿಗ್ರಹೋತ್ಸವದ ಕಾರ್ಯನಿರ್ವಹಣೆಗಾಗಿ ಸೀಮೆಯ ಸಭ್ಯಗೃಹಸ್ಥರ ಸಭೆ ಸೇರಿಸಿದರು. ಆ ಸಭೆಯಲ್ಲಿ ಮಠದ ಹಿತೈಷಿಗಳೂ ವಂಶಪರಂಪರೆಯಿಂದ ಬಂದ ಮಠೀಯ ಸಚಿವರೂ ಸಲಹೆಗಾರರೂ ಸೂಕ್ಷ್ಮಕಾರ್ಯವಿಚಕ್ಷಣರೂ ಸ್ವಾಮಿಭಕ್ತಿಪರಾಯಣರೂ ಆದ ಸದಸ್ಯರಿದ್ದರು. ಗುರುಗಳು ಏಕಾಂತದಲ್ಲಿ ಅವರೊಡನೆ ಸಮಾಲೋಚಿಸಿದರು. ಸಭೆಯ ತೀರ್ಮಾನ ಹೀಗಿತ್ತು–

ಪಾರ್ಥಿವಸ್ಯ ವತ್ಸರಸ್ಯ ಮಾಸಿ ಮಾಧವೇ ಸಿತೇ
ಸಪ್ತಮೀ ತಿಥೌ ಚ ಶುಕ್ರವಾಸರೇ ಶಿವಂಕರೇ ।
ಶಿಷ್ಯಮಾತ್ಮನಃ ಪದೇ ಹ್ಯನುಗ್ರಹೀಷ್ಯತೇ ಗುರೂ
ರಾಮಚಂದಿರೇ ಪುರೇಽತ್ರ ರಾಮಚಂದ್ರಭಾರತೀ ॥ ೪೯

ಏಷಮಂಶ್ಚ ಮಾಧವೇ ಸಿತೇ ದಶಮ್ಯುಪಸ್ಥಿತೇ
ಸೋಮವಾಸರೇ ಶುಭೇ ಮುಹೂರ್ತಕೇಽರುಣೋದಯೇ ।
ಯೋಗಪಟ್ಟಬಂಧನಾದಿಕಂ ವಿಧಿಸ್ಥಿತಂ ಗುರೋ-
ಶ್ಚಾತುರಾಹ್ನಿಕೋತ್ಸವೋಽಸ್ತು ಸಂಸದೀತಿ ನಿಶ್ಚಿತಮ್ ॥ ೫೦

ಸ್ವಸ್ತಿ "ಶ್ರೀಶಾಲಿವಾಹನಶಕ ೧೮೬೭ನೆಯ ಪಾರ್ಥಿವ ಸಂವತ್ಸರದ ವೈಶಾಖ ಮಾಸದ ಶುಕ್ಲ ಸಪ್ತಮೀ ಶುಕ್ರವಾರ (ಕ್ರಿಸ್ತಶಕ ೧೮-೫-೧೯೪೫) ಶುಭಕರವಾದ ಮುಹೂರ್ತದಲ್ಲಿ ಜಗದ್ಗುರು ಶಂಕರಾಚಾರ್ಯ ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮದ್ರಾಮಚಂದ್ರಾಪುರಸ್ಥಿತ ಶ್ರೀರಾಮಚಂದ್ರ ಭಾರತೀಸ್ವಾಮಿಗಳವರು ಶಿವಮೊಗ್ಗಾ ಜಿಲ್ಲೆಯ ಹೊಸನಗರ ತಾಲ್ಲೂಕಿಗೆ ಸೇರಿದ ಶ್ರೀಮದ್ರಾಮಚಂದ್ರಾಪುರದಲ್ಲಿ ತಮ್ಮ ಉತ್ತರಾಧಿಕಾರಿಯಾಗುವ ನೂತನ ಶಿಷ್ಯನಿಗೆ ಸಂನ್ಯಾಸಾಶ್ರಮಂದ ದೀಕ್ಷೆಯಿಂತ್ತು ಮಹಾವಾಕ್ಯೋಪದೇಶ ಮಾಡಿ ಅನುಗ್ರಹಿಸುವರು. ಇದೇ ವರ್ಷದ ವೈಶಾಖ ಶುಕ್ಲ ದಶಮೀ ಸೋಮವಾರ ತಾರೀಖು (೨೧-೫-೧೯೪೫) ಪ್ರಾತಃಕಾಲ ಶುಭಮುಹೂರ್ತದಲ್ಲಿ ತಮ್ಮಿಂದ ಅನುಗ್ರಹೀತನಾದ ಹೊಸಶಿಷ್ಯನಿಗೆ ಯೋಗಪಟ್ಟಾಭಿಷೇಕವನ್ನು ವಿಧಿವತ್ತಾಗಿ ಮಾಡಬೇಕೆಂದು ಇದ್ದಾರೆ. ಆದುದರಿಂದ ಈ ಶಿಷ್ಯಪರಿಗ್ರಹ ಮಹೋತ್ಸವವು ಅತ್ಯಂತ ವೈಭವದಿಂದ ನಾಲ್ಕು ದಿವಸ ಪರ್ಯಂತ ನಡೆಯಲಿ. ಗುರುಗಳ ಅಪ್ಪಣೆಯನ್ನು ಎಲ್ಲರೂ ಪಾಲಿಸಬೇಕು" ಎಂದು.

ನಿಶ್ಚಿತಸ್ಯ ತನ್ಮಹೋತ್ಸವಸ್ಯ ಯಚ್ಚಿಕೀರ್ಷಿತಂ
ಕರ್ಮಜಾತಮನ್ವಶಾದ್ಗುರುಸ್ಸ ಶಿಷ್ಯಮಂಡಲೀಮ್ ।
ಅನ್ವಮಂಸ್ತ ತತ್ಪ್ರಯುಕ್ತಕಾರ್ಯಗೌರವಂ ಚ ಸಾ
ಶ್ರೇಯಸೇ ಮಹೀಯಸಾಂ ವಚೋಹ್ಯಲಂ ಸ್ವನುಷ್ಠಿತಮ್ ॥ ೫೧

ಹೀಗೆ ಶಿಷ್ಯಪರಿಗ್ರಹೋತ್ಸವದ ನಿಶ್ಚಿತ ದಿವಸಗಳಿಗಿಂತ ಮುಂಚಿತವಾಗಿ ಅವಶ್ಯ ಮಾಡಬೇಕೆಂದಿದ್ದ ಸಕಲಕಾರ್ಯಗಳ ನಿರ್ವಹಣೆಯಬಗ್ಗೆ ಗುರುಗಳು ಶಿಷ್ಯಮಂಡಲಿಗೆ ಆದೇಶವಿತ್ತರು. ಆ ಶಿಷ್ಯಮಂಡಲಿಯೂ ಕೂಡ ಶ್ರೀಮದಾಚಾರ್ಯರಿಂದ ಪ್ರೇರಿತವಾದ ಗುರುತರವಾದ ಕಾರ್ಯದ ಹೊಣೆಯನ್ನು ಹೊರಲು ಸಮ್ಮತಿಸಿತು. ಮಹಾತ್ಮರು ಆಜ್ಞಾಪಿಸಿದುದನ್ನು ಚೆನ್ನಾಗಿ ನಿರ್ವಹಿಸುವುದು ಒಳ್ಳೆಯದಕ್ಕೆ ಅಲ್ಲವೇ !

ಕರ್ಮಕಾರಿಣಃ ಸ್ವಕೃತ್ಯಲಬ್ಧಕೀರ್ತಯಸ್ತತಃ
ಸ್ವಾಮಿಭಕ್ತಿತತ್ಪರಾ ಯಶೋಽಭಿಲಾಷಿಣೋಽಮಲಾಃ ।
ರಾಮಚಂದಿರೇ ಪುರೇ ಮರಾಲಯೋ ಪ್ರಸಾಧನಾ–
ನ್ಯಾರಭಂತ ಭಿತ್ತಿವೇದಿಕಾಂಗಣಾದಿಷು ಕ್ರಮಾತ್ ॥ ೫೨

ಬಳಿಕ ಶ್ರೀಮದ್ರಾಮಚಂದ್ರಾಪುರದಲ್ಲಿ ಮೇಲೆಹೇಳಿದ ಉತ್ಸವದ ಪೂರ್ವಾಂಗವಾದ ಮಠಾಲಯದ ಗೋಡೆ, ಜಗುಲಿ, ಅಂಗಳ ಮುಂತಾದವುಗಳಿಗೆ ಸುಣ್ಣ, ಬಣ್ಣ, ಸಾರಣೆ, ಚಪ್ಪರ, ತೋರಣ ಮುಂತಾದ ಅಲಂಕಾರದ ಕಾರ್ಯಗಳು ತೊಡಗಿದವು, ಈ ಕಾರ್ಯಗಳಲ್ಲಿ ನಿಯೋಜಿತರಾದ ಕೆಲಸಗಾರರು ತಮ್ಮ ತಮ್ಮ ಕೆಲಸದಲ್ಲಿ ಕೀರ್ತಿಗಳಿಸಿದವರು. ಸ್ವಾಮಿಭಕ್ತಿ ಪರಾಯಣರು. ನಿರ್ಮಲ ಮನಸ್ಸಿನವರು. ತಮ್ಮ ಕಾರ್ಯಕೌಶಲವನ್ನು ಹತ್ತು ಮಂದಿ ನೋಡಿ ಮೆಚ್ಚಲಿ ಎಂಬ ಆಸೆಯುಳ್ಳವರು ಬರಿಯ ಸಂಬಳದ ಹಣಕ್ಕಾಗಿಯೇ ಕೆಲಸಮಾಡುವ ಮನೋಭಾವವನ್ನು ಹೊಂದಿದವರಲ್ಲ. ಅವರೆಲ್ಲರೂ ತಮ್ಮ ಕೆಲಸದಲ್ಲಿ ಚೆನ್ನಾಗಿ ಅನುಭವವಿದ್ದವರೂ ಆಗಿದ್ದರು.

ಕಲ್ಪಿತಾಶ್ಚ ಮಂಟಪೋಪಕಾರ್ಯತೋರಣಾಸ್ತತ–
ಶ್ಚೂರ್ಣಲೇಪಚಿತ್ರಲೇಖನಾದಯಃ ಕಲಾತ್ಮಕಾಃ ।
ಹೈಮರೌಪ್ಯಪೀಠಭಾಜನಾದಯಃ ಪರಿಷ್ಕೃತಾ
ಭೇಜಿರೇ ವಸಂತಬಾಲಭಾನುದೀಧಿತಿಚ್ಛಟಾಮ್ ॥ ೫೩

ಮಂಟಪ ಕಟ್ಟುವುದು, ಗುಡಾರ ಹಾಕುವುದು, ತೋರಣ ಹಾಕುವುದು, ಗೋಡೆಗಳಿಗೆ ಸುಣ್ಣ ಹಚ್ಚುವುದು, ಚಿತ್ರ ಬರೆಯುವುದು ಮುಂತಾದ ಕಲಾಮಯವಾದ ಕೆಲಸಗಳು ಏರ್ಪಟ್ಟವು. ಬಳಿಕ ಮರದ ಬೆಳ್ಳಿ ಬಂಗಾರದ ಪೀಠೋಪಕರಣಗಳು ಪರಿಷ್ಕೃತವಾದವು. ಪೂಜಾಸಾಮಗ್ರಿಗಳಾದ ಬೆಳ್ಳಿ ಬಂಗಾರದ ಚೆಂಬು, ಹರಿವಾಣ, ಪಂಚಪಾತ್ರೆ, ದೀಪದ ಕಂಬ, ಆರತಿ ಮುಂತಾದವುಗಳು ಚೆನ್ನಾಗಿ ತೊಳೆಯಲ್ಪಟ್ಟು ಸಂಸ್ಕಾರಗೊಂಡವು. ಇವು ವಸಂತಋತುವಿನ ಬೆಳಗಿನ ಎಳೆಯ ನೇಸರಿನ ಕಾಂತಿಸ್ತೋಮವನ್ನು ಹೊಂದಿದ್ದವು.

ಚೂತಪಲ್ಲವೋಪಕ್ಲೃಪ್ತತೋರಣಸ್ರಗಂಚಿತಂ
ವನ್ಯಪುಷ್ಪಗುಚ್ಛಹಾರಭೂಷಿತಪ್ರತೋಲಿಕಮ್ ।
ಇಷ್ಟಕಾಘನೋಪನದ್ಧನವ್ಯವೇದಿಕಾಯುತಂ
ಬದ್ಧನೀಚಿಕಾಪ್ರಕಾಂಡಶೋಭಿಯಜ್ಞವಾಟಿಕಮ್ ॥ ೫೪

ಶ್ರೀರಾಮಚಂದ್ರಾಪುರದ ಮಠದ ಹೊರ ಅಂಗಳ ಚೆನ್ನಾಗಿ ಶೋಭಿಸಿತು. ಪ್ರಾಕಾರದ ಬೀದಿಯ ಚೌಕವೂ ಅಲಂಕೃತವಾಯಿತು. ಹೊರಗಣ ಅಂಗಳದಲ್ಲಿ ಹಾಕಿದ್ದ ಮಾವಿನ ತಳಿರತೋರಣಗಳು ಚೆಂದಗಾಣಿಸಿದವು. ಮಠದ ಪ್ರಾಕಾರದ ಹೊರಗೆ ಬೀದಿಯ ಇಕ್ಕೆಲಗಳಲ್ಲಿಯೂ ತೋರಣಗಳಲ್ಲಿನ ಕಾಡ ಹೂಗಳಾದ ಗಿರಿ ಮಲ್ಲಿಗೆ ಮುಂತಾದವುಗಳ ಕುಚ್ಚುಗಳು ಸುಂದರವಾಗಿದ್ದವು. ಅಂಗಳದಲ್ಲಿ ಸುಟ್ಟ ಗಟ್ಟಿ ಇಟ್ಟಿಗೆಗಳಿಂದ ಕಟ್ಟಿದ ವೇದಿಕೆಯು ಕಣ್ಮನಗಳನ್ನು ಸೆಳೆಯುತ್ತಿದ್ದಿತು. ಯಾಗ ಶಾಲೆಯೂ ಸಿದ್ಧವಾಯಿತು. ಗೊನೆಬಿಟ್ಟ ಬಾಳೆಯ ಕಂಬಗಳಿಂದ ಸಿಂಗರಗೊಂಡ ಯಜ್ಞವಾಟವು ಹೃದಯಂಗಮವಾಯಿತು.

ವ್ರೀಹಿಗುಚ್ಛಪೂಗಪುಷ್ಪಮಾಲಿಕೋಪರಂಜಿತಂ
ಪಾಂಡರೇಕ್ಷುದಂಡಶೋಭಿದೇವತಾಗೃಹಾಂತರಮ್ ।
ಹಂಸಸಾರಸಾದಿಪಕ್ಷಿಕೂಜನೋಪಜೃಂಭಿತಂ
ಫುಲ್ಲಪದ್ಮಷಂಡರಮ್ಯನಿರ್ಮಲೋದದೀರ್ಘಿಕಮ್ ॥ ೫೫

ಅಲ್ಲಿ ಒಳಗಿನ ಅಂಗಳದಲ್ಲಿರುವ ದೇವತಾಲಯಗಳು ಭತ್ತದ ತೆನೆ, ಅಡಿಕೆ ಸಿಂಗಾರಗಳ ತೋರಣದ ಸರಗಳಿಂದ ರಮ್ಯವಾಗಿದ್ದವು. ಮತ್ತು ಅವು ಹೊರ ಬಾಗಿಲಿಗೆ ಕಟ್ಟಿದ ರಸದಾಳೆಬಿಳಿಕಬ್ಬುಗಳಿಂದ ಅಲಂಕೃತವಾಗಿದ್ದವು. ಅಲ್ಲಿರುವ ಅರಳಿದ ತಾವರೆ ಗುಂಪಿನ ತಿಳಿಗೊಳಗಳಲ್ಲಿ ಅಂಚೆ, ನೀರು ಹಕ್ಕಿ ಮುಂತಾದ ಪಕ್ಷಿಗಳ ಕೊರಳಿಂದ ಹೊರಹೊಮ್ಮುವ ಇಂಚರವು ಅಭಿವೃದ್ಧಿ ಹೊಂದುತ್ತಿತ್ತು.

ಸ್ನಾನಘಟ್ಟಮಂಟಪೈಃ ಶರಾವತೀಪ್ರತೀರಗೈಃ
ಸ್ವಾದುಪೇಯತೋಯವಾಹಿನಿರ್ಝರಪ್ರಣಾಲಕೈಃ ।
ದೀಪ್ರದೀಪಪಂಙ್ತಿಭಿಶ್ಚ ಸರ್ವದಾ ದಿನಾಯಿತೈಃ
ಬಾಹ್ಯಚತ್ವರಂ ಮಠಸ್ಯ ದಿದ್ಯುತೇತರಾಂ ಶುಭಮ್ ॥ ೫೬

ಶರಾವತೀನದೀದಂಡೆಯ ಮೇಲಿರುವ ಸ್ನಾನ ಘಟ್ಟದ ಮಂಟಪಗಳಿಂದಲೂ ಸವಿಯೂ ಶುಚಿಯೂ ಆದ ಕುಡಿಯಲು ಅರ್ಹವಾದ ಅಬ್ಬಿನೀರಿನ ನಳಗಳಿಂದಲೂ ಯಾವಾಗಲೂ ಹಗಲಿನಂತಿರುವ ಪ್ರಕಾಶಮಾನವಾದ ದೀಪದ ಸಾಲುಗಳಿಂದಲೂ ಮಠದ ಪ್ರಾಕಾರದ ಹೊರಗಣ ಮಂಗಳಕರವಾದ ಬಯಲು ಅತಿಶಯವಾಗಿ ಶೋಭಿಸುತ್ತಿತ್ತು.

ವ್ಯಾಘ್ರಕೃತ್ತಿಸಂಸ್ತೃತೈರ್ಮಹಾರ್ಹಸಿಂಹವಿಷ್ಟರೈ-
ಶ್ಛತ್ರಚಾಮರಾದಿಭಿಶ್ಚ ರಾಜತೈಃ ಪರಿಚ್ಛದೈಃ ।
ಆಸ್ತೃತೈರ್ಮಹಾಕುಥೈರ್ವಿಶಂಕಟಂ ಮನೋಹರಂ
ರಾಮಚಂದಿರೇ ಪುರೇ ಮಠಾಂಗಣಂ ವ್ಯರಾಜತ ॥ ೫೭

ಹುಲಿದೊಗಲಿನ ಮೆತ್ತನೆಯ ಆಸನವಿರುವ ಭದ್ರಾಸನ, ಆನೆಯ ದಂತದಲ್ಲಿ ಕೆತ್ತಿದ ಅಮೂಲ್ಯ ಸಿಂಹಾಸನ, ಬಿಳಿಯ ಮುತ್ತಿನ ಸತ್ತಿಗೆ, ಚವರಿ, ಬೆಳ್ಳಿಕಟ್ಟಿದ ದಂಡ, ಬೆಳ್ಳಿಯ ಕರಂಡ, ಹಾಸಿದ ಅಗಲವಾದ ರತ್ನಗಂಬಳಿ, ಇವುಗಳಿಂದ ಶ್ರೀಮದ್ರಾಮಚಂದ್ರಾಪುರದ ಮಠದ ವಿಶಾಲವೂ ಮನೋಹರವೂ ಆದ ಅಂಗಳವು ವಿಶೇಷವಾಗಿ ಶೋಭಿಸಿತು.

**ಶ್ವೇತಕೃಷ್ಣಪಿಂಗಲೈರ್ಮದೋದ್ಧತೈರ್ಮಹೋನ್ನತೈಃ**
**ಕಂಠಘಂಟಿಕಾಧರೈರ್ಮಹಾವೃಷೈರ್ನಿವೇಶಿತಃ ।**
**ಕಾಮಧುಕ್ಸಹೋದರೈಃ ಪಯಸ್ವಿನೀಕದಂಬಕೈಃ**
**ವತ್ಸವಾಟಸಂಗತೋ ಗವಾಲಯೋ ವ್ಯರೋಚತ ॥** ೫೮

ಅಂಗಳದ ಪಕ್ಕದಲ್ಲಿಯೇ ಮಠದ ಗೋಶಾಲೆ. ಅಲ್ಲಿ ಬಿಳಿ, ಕಪ್ಪು, ಕಂದು, ಹಳದಿ ಬಣ್ಣದ ಎತ್ತರವಾದ ದಷ್ಟ ಪುಷ್ಟವಾದ ದೊಡ್ಡ ಎತ್ತುಗಳನ್ನು ಕಟ್ಟಿದ್ದರು. ಅವುಗಳ ಕೊರಳಿಗೆ ಘಂಟೆ ಸರವಿತ್ತು. ಅವು ಚೆನಾಗಿ ಕೊಬ್ಬಿದ್ದುವು. ಅಲ್ಲಿಯೇ ಕಾಮಧೇನುವಿಗೆ ಸರಿಮಿಗಿಲಾದ ಹಾಲುಕೊಡುವ ಅನೇಕ ಆಕಳುಗಳೂ ಇದ್ದವು. ಅಲ್ಲಿಯೇ ಕರುಗಳ ಪುಟ್ಟಕೊಟ್ಟಿಗೆಯೂ ಇತ್ತು. ಮಠದ ಆ ಗೋಶಾಲೆ ಅತ್ಯಂತ ರೋಚಕವಾಗಿತ್ತು.

**ಗೋರಸೈಃ ಸುಧೋಪಮೈಃ ಪ್ರಪೂರ್ಣಕುಂಭಕೈಸ್ತತಂ**
**ಪೂತತಂಡುಲಾದಿಪೂರ್ಣಗೋಣಿಕಾಶತಾಶ್ರಿತಮ್ ।**
**ನಿರ್ಮಲಂ ಗವಾಕ್ಷಶೋಭಿ ಚುಲ್ಲಿಕಾಮನೋಹರಂ**
**ಶಸ್ತ್ರಪಾಚಕೈಃ ಪರೀತಮಾಬಭೌ ಮಹಾನಸಮ್ ॥** ೫೯

ಮಠದ ಅಡಿಗೆಮನೆ ನಿರ್ಮಲವಾಗಿತ್ತು. ಕಿಟಕಿಗಳಿಂದ ಗಾಳಿ, ಬೆಳಕು ಧಾರಾಳವಾಗಿ ಬರುವಹಾಗಿತ್ತು. ಅದು ಒಲೆಯ ಸಾಲಿನಿಂದ ಸುಂದರವಾಗಿತ್ತು. ಆ ಮಹಾನಸದ ಒಂದೆಡೆಯಲ್ಲಿ ಸೊದೆಯ ಸವಿಗರೆಯುವ ಆಕಳ ಹಾಲು, ಮೊಸರು, ತುಪ್ಪ ಇವು ತುಂಬಿರುವ ಹಲವು ಕೊಡಗಳಿದ್ದವು. ಮತ್ತೊಂದೆಡೆಯಲ್ಲಿ ಚೆನ್ನಾಗಿ ಕೇರಿ ಹೊಟ್ಟುತವುಡುಗಳನ್ನು ತೆಗೆದು ಹಸನುಮಾಡಿ ಗೋಣಿಯ ಚೀಲದಲ್ಲಿ ತುಂಬಿದ ಸಣ್ಣಕ್ಕಿಯ ಹಲವು ಮೂಟೆಗಳು ಇರಿಸಲ್ಪಟ್ಟಿದ್ದವು. ಅಲ್ಲಿ ಅಡಿಗೆಯ ಕೆಲಸದಲ್ಲಿ ಚೆನ್ನಾಗಿ ನುರಿತು ಅನುಭವಿಗಳಾದ ಒಳ್ಳೆಯ ಅಡಿಗೆಯವರೂ ಇದ್ದರು.

**ಪೂರ್ವವಾಸರೇ ತದುತ್ಸವಸ್ಯ ಸಾಯಮುದ್ಭೃತಂ**
**ಬ್ರಹ್ಮಲೋಕಸನ್ನಿಭಂ ಚ ರಾಮಚಂದಿರಂ ಪುರಮ್ ।**
**ಪುಷ್ಯತಿ ಸ್ಮ ಕಾಮಪಿ ಶ್ರಿಯಂ ಹ್ಯನನ್ಯಪೂರ್ವಿಕಾಂ**
**ಮಾಧವೇಽನುರಕ್ತಪಲ್ಲವೋಪಶೋಭಿತೋ ಯಥಾ ॥** ೬೦

ಪಾರ್ಥಿವಸಂವತ್ಸರದ ವೈಶಾಖ ಶುಕ್ಲ ಷಷ್ಠೀ ಗುರುವಾರ ದಿನಾಂಕ ೧೭-೫-೧೯೪೫ ಸಂಜೆಯು ಹೊತ್ತಿಗೆ ಮರುದಿವಸ ನಡೆಯಲಿರುವ ಶಿಷ್ಯಪರಿಗ್ರಹೋತ್ಸವಕ್ಕೆ ಸಂಬಂಧಿಸಿದ ಪೂರ್ವಭಾವಿ ಎಲ್ಲಾ ಸಿದ್ಧತೆಗಳೂ ಆಗಿವೆ. ಬ್ರಾಹ್ಮಣ ಶಿಷ್ಯ ಶ್ರೇಣಿ ಅಸಂಖ್ಯಾತವಾಗಿ ಶ್ರೀರಾಮಚಂದ್ರಾಪುರದಲ್ಲಿ ಸೇರಿತ್ತು. ಅಂದು ಶ್ರೀರಾಮಚಂದ್ರಾಪುರ ಬ್ರಹ್ಮಲೋಕದಂತೆ ಕಂಗೊಳಿಸಿತು. ಶ್ರೀರಾಮಚಂದ್ರಾಪುರದ ಅಂದಿನ ಕಳೆಯೇ ಬೇರೆ. ಅದು ನಸುಗೆಂಪಾದ ಎಳೆ ಚಿಗುರಿನಿಂದ ಶೋಭಿಸುವ ತರುಸ್ತೋಮವುಳ್ಳ ವಸಂತಋತುವಿನಂತೆ ಅಪೂರ್ವಶೋಭೆ ತಳೆದಿತ್ತು. ಕಾಂತಿ ವ್ಯಾಪಿಸುತ್ತಿತ್ತು.

**ಶಿಷ್ಯತಾಪರಿಗ್ರಹಸ್ಯ ಸಿದ್ಧಯೇ ದ್ವಿಜರ್ಷಭಾಃ**
**ಪೂರ್ಣಕುಂಭಪಾಣಯೋ ಗುರೋರ್ನಿದೇಶವರ್ತಿನಃ ।**
**ಧರ್ಮಪೀಠಿಕಾಧಿರೋಹಣಾರ್ಹಮರ್ಹಣಾಸ್ಪದಂ**
**ಬಾಲಕಂ ಮಠೋಪಕಂಠಮಾನಯಂಸ್ತದಾಲಯಾತ್ ॥ ೬೧**

ಮರುದಿವಸ ನಡೆಯಲಿರುವ ಶಿಷ್ಯಪರಿಗ್ರಹದ ಸಿದ್ಧಿಗಾಗಿ ವಟುವನ್ನು ಮುಂಚೆಯೇ ಮಠಕ್ಕೆ ಬರಮಾಡಿಕೊಳ್ಳುವ ಕಾರ್ಯ ಉಳಿದಿತ್ತು. ಗುರುವರ್ಯರ ಅಪ್ಪಣೆಯಂತೆ ನಡೆದುಕೊಳ್ಳುವ ಸ್ವಭಾವವಿರುವ ಬ್ರಾಹ್ಮಣೋತ್ತಮರು ಗುರುಗಳ ಅಪ್ಪಣೆಯ ಪ್ರಕಾರ ಪೂರ್ಣಕುಂಭ ಪಾಣಿಗಳಾಗಿ ಶ್ರೀಮಾಗಲೂ ಗಣೇಶ ಭಟ್ಟರ ನಿವಾಸಕ್ಕೆ ತೆರಳಿದರು. ಧರ್ಮಪೀಠಾರೋಹಣಕ್ಕೆ ತಕ್ಕ ಅರ್ಹತೆಯಿರುವ ಗೌರವಾರ್ಹನೂ ಆದ ವಟುವನ್ನು ಮರೀಯ ಮರ್ಯಾದೆ ಸಹಿತ ಅವರ ಮೊಕ್ಕಾಮಿನಿಂದ ಮಠದ ಬಾಗಿಲಿಗೆ ಕರೆತಂದರು.

**ದ್ವಾರದೇಶಮಾಗತಂ ತಮಭ್ಯುಪೇತ್ಯ ವೈದಿಕಾ**
**ದ್ವಾರಕೇಶ ಇತ್ಯವೇತ್ಯ ಚಾತಿಥೇಯಮಾಹರನ್ ।**
**ಪುಷ್ಪಲಾಜಪೂರಿತಾಂಜಲೀನ್ ಕುಮಾರಿಕಾಜನಾಃ**
**ಸ್ವಾಗತಾರ್ಥಮಸ್ಯ ಮೂರ್ಧ್ನಿ ಮೋದಿತಾ ಅವಾಕಿರನ್ ॥ ೬೨**

ಕುಮಾರನು ಮಠದ ಬಾಗಿಲ ಹತ್ತಿರ ಬಂದೊಡನೆಯೇ ವೈದಿಕರು ಮಂತ್ರ ಘೋಷಪುರಃಸರವಾಗಿ ಎದುರುಗೊಂಡು, ಅಭ್ಯಾಗತನಾದ ವಟುವನ್ನು ವಿಷ್ಣುವೆಂದು ಗೌರವಿಸಿ ಉಪಚರಿಸಿದರು. ಪರಮಾನಂದಭರಿತರಾದ ಕುಮಾರಿಯರೂ ಹೂ ಅರಳುದುಂಬಿದ ಬೊಗಸೆಗಳನ್ನು ಸ್ವಾಗತಾರ್ಥವಾಗಿ, ವಟುವಿನ ತಲೆಯ ಮೇಲೆ ಎರಚಿದರು.

**ವೇದಘೋಷಣಾನುಕಾರಿತೂರ್ಯಘೋಷವರ್ಧಿತೋ**
**ಮತ್ತಕಾಶಿನೀಪ್ರಗೀತಮಂಗಳಾನುವಾದಕಃ ।**
**ರಾಮಚಂದಿರೇ ಪುರೇ ಪುರಾತನೇಽಭವತ್ತದಾ**
**ತುರ್ಯದೀಕ್ಷಣೇ ವೃತಸ್ಯ ಚಾತಿಥೇಯಸಂಭ್ರಮಃ ॥** ೬೩

ಪ್ರಾಚೀನಗುರುಕುಲವಾದ ಆ ಶ್ರೀಮದ್ರಾಮಚಂದ್ರಾಪುರದಲ್ಲಿ ಸಂನ್ಯಾಸ ದೀಕ್ಷೆಗಾಗಿ ಆಹ್ವಾನಿತನಾಗಿ ಬಂದಿರುವ ಮಠದ ಉತ್ತರಾಧಿಕಾರಿಯಾಗಲಿರುವ ಆ ಬ್ರಹ್ಮಚಾರಿಗೆ ಮಾಡಿದ ಸತ್ಕಾರದ ಸಂಭ್ರಮವು ವೇದಘೋಷವನ್ನು ಅನುಸರಿಸಿದ ವಾದ್ಯಘೋಷದಿಂದ ವಿಜೃಂಭಿಸಿತು. ಸುವಾಸಿನಿಯರು ಹಾಡಿದ ಹಾಡಿನ ನುಡಿಯು ಶುಭವನ್ನು ಅನುವಾದಿಸುತ್ತಿತ್ತು.

**ಬಾಲಕಃ ಸ ವೀತಿಹೋತ್ರಕಾಂತಿಕಾಂತ ಆಗತಃ**
**ಸಂಪ್ರದಾಯತಸ್ತತಃ ಸ್ವನಾಮಗೋತ್ರವಾದ್ಯಸೌ ।**
**ರಾಮಚಂದ್ರಪೀಠಿಕೇಶರಾಮಚಂದ್ರಭಾರತೀಂ**
**ಶಂಕರಾರ್ಯರೂಪಿಣಂ ಸಮೇತ್ಯ ಚಾಭ್ಯವಾದಯತ್ ॥** ೬೪

ಅನಂತರ ಅಗ್ನಿಯಂತೆ ತೇಜಸ್ವಿಯಾದ ಆ ಬ್ರಹ್ಮಚಾರಿಯು ಶ್ರೀರಾಮಚಂದ್ರಾಪುರದ ಮಠದ ಒಳಗೆ ಬಂದನು. ಶ್ರೀಮಜ್ಜಗದ್ಗುರು ಶಂಕರಾಚಾರ್ಯರ ಸ್ವರೂಪರೂ ಶ್ರೀರಾಮಚಂದ್ರಾಪುರದ ಮಠಾಧೀಶರೂ ಆದ ಶ್ರೀರಾಮಚಂದ್ರಭಾರತೀಗಳನ್ನು ಸಮೀಪಿಸಿದನು. ಬಳಿಕ ಸತ್ಸಂಪ್ರದಾಯದಂತೆ ಆ ವಟುವು ತನ್ನ ನಾಮ ಗೋತ್ರ ಪ್ರವರಾದಿಗಳನ್ನು ಉಚ್ಚರಿಸಿ ಗುರುಗಳಿಗೆ ಅಭಿವಂದನೆಗೈದನು.

**ಫುಲ್ಲಲೋಚನಃ ಸ ಚ ಪ್ರಸನ್ನಪಂಕಜಾನನ-**
**ಶ್ಚಕ್ಷುಷಾ ಸುಧಾಮುಚಾ ನಿಷಿಚ್ಯ ಬಾಲಕಂ ಗುರುಃ ।**
**ಭಾವಿನಂ ಕ್ರಿಯಾಕಲಾಪಮಸ್ಯ ಚಾವಬೋಧಯನ್**
**ದೀಕ್ಷಣೀಯಮೇನಮುತ್ಸಸರ್ಜ ಕಾರ್ಯಗೌರವಾತ್ ॥** ೬೫

ಅಭಿವಾದನ ಮಾಡಿದ ಬಾಲಕನನ್ನು ನೋಡಿ ಸಂತೋಷದಿಂದ ಗುರುಗಳ ಕಣ್ಣು ಅರಳಿತು. ಮುಖಕಮಲವು ಪ್ರಸನ್ನವಾಯಿತು. ಶ್ರೀರಾಮಚಂದ್ರಭಾರತೀ ಸ್ವಾಮಿಗಳು ಸೂಸುರಿಸುವ ಕಣ್ಣಿನಿಂದ ಬಾಲಕನಿಗೆ ಎರೆದರು. ಅನಂತರ ದೀಕ್ಷಾರ್ಹನಾದ ವಟುವಿಗೆ ಮುಂದೆ ನಡೆಯಬೇಕಾದ ಶಾಸ್ತ್ರೋಕ್ತಕ್ರಿಯಾಕಲಾಪಗಳನ್ನು ತಿಳಿಯ ಹೇಳಿದರು. ಮಾಡಬೇಕಾದ ಕೆಲಸ ಬಹಳವಿದ್ದುದರಿಂದ ಬಾಲಕನನ್ನು ವಿಶ್ರಾಂತಿಗಾಗಿ ಬಿಟ್ಟುಕೊಟ್ಟರು.

**ಮಾಧವೇ ಸಿತೇ ದಲೇ ವಿನಿಶ್ಚಿತೇ ಚ ತದ್ದಿನೇ**
**ಪೂರ್ವದಿಗ್ವಧೂಮುಖಪ್ರಚುಂಬಿನಿ ಪ್ರಭಾಕರೇ ।**
**ರಾಮಚಂದಿರೇ ಪುರೇ ಸಹಸ್ರಶೋ ಮಹಾಜನಾಃ**
**ಕೌತುಕಾತ್ ಸಮಾವಿಶನ್ ಸಭಾಂಗಣೇ ಸ್ವಲಂಕೃತೇ ॥** ೬೬

ಮುಂಚೆಯೇ ನಿಶ್ಚಯಮಾಡಿದ, ಪಾರ್ಥಿವಸಂವತ್ಸರದ ವೈಶಾಖ ಶುಕ್ಲಪಕ್ಷದ ಸಪ್ತಮೀ ಶುಕ್ರವಾರ ಆ ಶಿಷ್ಯಪರಿಗ್ರಹೋತ್ಸವದ ದಿವಸ ಸೂರ್ಯನು ಪೂರ್ವ ದಿಗಂಗನೆಯ ಮುಖಕ್ಕೆ ಮುತ್ತುಕೊಡುತ್ತಿರುವಾಗ (ಬೆಳಿಗ್ಗೆ) ಶ್ರೀರಾಮಚಂದ್ರಾಪುರದ ಮಠದಲ್ಲಿ ತಳಿರುತೋರಣ ಮುಂತಾದವುಗಳಿಂದ ಚೆನ್ನಾಗಿ ಸಿಂಗರಿಸಿದ ಸಭಾಂಗಣದಲ್ಲಿ ಉತ್ಸವ ನೋಡುವ ಹಂಬಲದಿಂದ ಸಾವಿರಾರು ಮಂದಿ ಮಹಾಜನರು ಬಂದು ಸೇರಿದ್ದರು.

**ಸೋಮಯಾಜಿಶಾಸ್ತ್ರವೇದಿಸರ್ವವೇದಪಾರಗೈಃ**
**ಸಂಪ್ರದಾಯವೇದಿಭಿರ್ವಯೋಧಿಕೈಶ್ಚ ಧಾರ್ಮಿಕೈಃ ।**
**ಉತ್ಸವೋತ್ಸುಕೈಃ ಪ್ರಮೋದನಿರ್ಭರೈಃ ಸುನಿರ್ಮಲೈಃ**
**ಮತ್ತಕಾಶಿನೀಜನೈಶ್ಚ ತತ್ಸಭಾಂಗಣಂ ಬಭೌ ॥** ೬೭

ಸೋಮಯಾಜಿಗಳು, ಶಾಸ್ತ್ರಪಂಡಿತರು, ವೇದಾಧ್ಯಯನಪಾರಂಗತರಾದ ಘನಪಾಠಿಗಳು, ಸಂಪ್ರದಾಯವನ್ನು ಬಲ್ಲ ವೃದ್ಧರು. ಧರ್ಮಾಭಿಮಾನಿಗಳು, ಉತ್ಸವ ನೋಡಲು ಹೆಚ್ಚಾದ ಹಂಬಲವುಳ್ಳವರೂ ಸಂತೋಷಭರಿತರೂ ನಿರ್ಮಲಹೃದಯವರೂ ಆದ ಸ್ತ್ರೀಜನರು ಇವರುಗಳಿಂದ ಆಸಭಾಂಗಣವು ಶೋಭಿಸಿತು.

**ಪ್ರಾಡ್ವಿವಾಕಪಾವದೂಕಪುಂಗವೈರ್ಧನೇಶ್ವರೈ–**
**ರಾಜಪೂರುಷೈರುದಂತಹಾರಿಭಿಶ್ಚ ಲೌಕಿಕೈಃ ।**
**ನೈಕದೇಶವಾಸಿಭಿಃ ಸಮಾಗತೈಶ್ಚ ಪಂಡಿತೈಃ**
**ಪ್ರಾಕೃತೈಶ್ಚ ರಾಜತೇ ಸ್ಮ ಸಂಭೃತಂ ಸಭಾಂಗಣಮ್ ॥** ೬೮

ಶ್ರೇಷ್ಠ ನ್ಯಾಯಾಧಿಪತಿಗಳು, ನ್ಯಾಯವಾದಿ ಪ್ರಮುಖರು, ಶ್ರೀಮಂತರಾದ ಸದ್ಗೃಹಸ್ಥರು, ಸರ್ಕಾರದ ಅಧಿಕಾರಿಗಳು, ವಾರ್ತಾಪ್ರತಿನಿಧಿಗಳು ಮತ್ತು ಲೌಕಿಕ ಮಹಾಜನರು, ಭಾರತದಲ್ಲಿರುವ ಬೇರೆ ಬೇರೆ ರಾಜ್ಯಗಳಿಂದ ಬಂದಿರುವ ಪಂಡಿತರು, ಸ್ಥಳೀಯ ಜನರು ಇವರುಗಳಿಂದ ತುಂಬಿದ ಮಠದ ಸಭಾಂಗಣವು ಕಂಗೊಳಿಸಿತು.

**ಪ್ರಾಂಗಣೇಽತ್ರ ಹೃದ್ಯತೂರ್ಯನಿಸ್ವನಾನುಕಾರಿಣೀ**
**ಕೋಕಿಲಾಲಿಕಂಠನಾಲನಿಸ್ಸರತ್ಕುಹೂಸ್ತದಾ ।**
**ವ್ಯಾಕರೋಚ್ಚ ಸಾಮಗಪ್ರಗೀತಸಾಮಕಾಕಲೀಂ**
**ರಾಮಚಂದ್ರಚಂದ್ರಮೌಳಿದೇವತಾಪ್ರಹರ್ಷಿಣೀಮ್ ॥ ೬೯**

ಶ್ರೀಮಠದ ಸುತ್ತುಮುತ್ತಲಿನ ಉಪವನದಲ್ಲಿ ಮಾವಿನ ಸೆಳೆಗೊಂಬಿನ ಮೇಲೆ ಹಿಂಡು ಹಿಂಡಾಗಿ ಕೂತಿರುವ ಕೋಗಿಲೆಗಳ ಕೊರಳುಗಳಿಂದ ಹೊರಹೊಮ್ಮುತ್ತಿದ್ದ ಅವ್ಯಕ್ತ ಮಧುರವಾದ ದನಿಯು ವೈಭವದ ಈ ನಭಾಂಗಣದಲ್ಲಿ ವಾದ್ಯದವರು ಹೃದಯಂಗಮವಾಗಿ ಊದುತ್ತಿರುವ ಮಂಗಳವಾದ್ಯದ ಇಂಚರವನ್ನು ಅನುಕರಿಸು ತ್ತಿತ್ತು. ಮತ್ತು ಅದು ಆಗ ಶ್ರೀಮಠದ ಪ್ರಧಾನ ದೇವತೆಯಾದ ಶ್ರೀರಾಮಚಂದ್ರ ಚಂದ್ರಮೌಳೀಶ್ವರರ ಅತ್ಯಂತ ಪ್ರೀತಿಗೆ ಕಾರಣವಾದ ಸಾಮಕ ಪಂಡಿತರ ಬಾಯಿಂದ ಉಚ್ಚರಿಸಲ್ಪಟ್ಟ ಸಾಮಗಾಯನದ ಅಸ್ಫುಟ ಮಧುರ ನಾದವನ್ನೂ ವ್ಯಾಖ್ಯಾನಿಸು ತ್ತಿತ್ತು. ಆಗ—

**ಶೋಭನೇ ಮುಹೂರ್ತಕೇ ಸ ಬಾಲಕೋಽಗ್ನಿಸನ್ನಿಭೋ**
**ರಾಮಚಂದ್ರಭಾರತೀಗುರೋಃ ಪದಾರವಿಂದಯೋಃ ।**
**ಮೋಕ್ಷಮಾರ್ಗಬಂಧನಂ ನಿರಸ್ಯ ಚೇಷಣಾತ್ರಯಂ**
**ನಿಸ್ಸ್ಪೃಹಃ ಪ್ರಪತ್ತಿಮಾಪ ಶಿಷ್ಯಧರ್ಮನಿಷ್ಠಯಾ ॥ ೭೦**

ಅಗ್ನಿಯಂತೆ ವರ್ಚಸ್ವಿಯೂ. ಶಮದಮಾದಿಗುಣಗಳುಳ್ಳವನೂ ಆದ ಆ ಬಾಲಕ ಶಿಷ್ಯನು ಮುಕ್ತಿಮಾರ್ಗಕ್ಕೆ ಅಡೆತಡೆಯಾಗಿರುವ ಸಾಂಸಾರಿಕವಾದ ಹೆಣ್ಣು ಮಣ್ಣುಹೊನ್ನುಗಳ ಹಂಬಲವನ್ನು ಬಿಟ್ಟು ನಿಸ್ಪೃಹನಾಗಿ ವೈರಾಗ್ಯಹೊಂದಿ ಶ್ರೀರಾಮಚಂದ್ರಭಾರತೀಸ್ವಾಮಿಗಳ ಅಡಿದಾವರೆಗಳಿಗೆ ಶರಣಾಗತನಾಗಿ ಒಳ್ಳೆಯ ಮುಹೂರ್ತದಲ್ಲಿ ವಿಧಿವತ್ತಾಗಿ ಸಂನ್ಯಾಸವನ್ನು ಸ್ವೀಕರಿಸಿದನು.

**ಅರ್ಣವರ್ತುದಿಕ್ಸುಧಾಂಶುಸಂಖ್ಯಯಾಂಕಿತೇ ಶುಭೇ**
**ಶಾಲಿವಾಹನೇ ಶಕೇಽಥ ಪಾರ್ಥಿವಸ್ಯ ವತ್ಸರೇ ।**
**ಮಾಧವೇ ಸಿತೇ ಚ ಸಪ್ತಮೀ ತಿಥೌ ಭೃಗೋರ್ದಿನೇ**
**ತತ್ತ್ವಮಸ್ಯುಪಾದಿಶದ್ಗುರುಸ್ತುರೀಯದೀಕ್ಷಿತಮ್ ॥ ೭೧**

ಶಾಲಿವಾಹನಶಕ ಒಂದು ಸಾವಿರದ ಎಂಟುನೂರ ಅರವತ್ತೇಳನೆಯ ಪಾರ್ಥಿವ ಸಂವತ್ಸರದ ವೈಶಾಖಶುಕ್ಲ ಸಪ್ತಮೀ ಶುಕ್ರವಾರ ಆ ಸಂನ್ಯಸ್ತನಾದ ಕುಮಾರನಿಗೆ ಶ್ರೀರಾಮಚಂದ್ರಭಾರತೀಸ್ವಾಮಿಗಳು "ತತ್ತ್ವಮಸಿ" ಎಂಬ ಮಹಾ ವಾಕ್ಯವನ್ನು ಉಪದೇಶಿಸಿದರು.

ಸ್ವೀಚಕಾರ ಬಾಲಕಶ್ಚತುರ್ಥಮಾಶ್ರಮಂ ಗುರೋಃ
ಸರ್ವಕರ್ಮಬಂಧಮಾಶು ಸೋऽತ್ಯಜದ್ಯಥಾವಿಧಿ ।
"ಸೋऽಹಮಸ್ಮಿತಾ"ಮುಪೇತ್ಯ ನಿರ್ಮಲೋऽಥ ನಿಶ್ಚಲಃ
ಸದ್ಗುರೋಃ ಪದಾನತೋ ವ್ಯರಾಜತಾದ್ವಯಾತ್ಮಧೀಃ ॥ ೭೨

ಸದ್ಗುರುಗಳ ಪಾದಗಳಿಗೆ ಎರಗಿದ ಆ ಬಾಲಕನು ಶ್ರೀರಾಮಚಂದ್ರಭಾರತೀ ಸ್ವಾಮಿಗಳಿಂದ ವಿಧಿವತ್ತಾಗಿ ಯತ್ಯಾಶ್ರಮವನ್ನು ಸ್ವೀಕರಿಸಿದನು. ರಾಗದ್ವೇಷಾದಿಗಳಿಲ್ಲದ ನಿರ್ಮಲಾಂತಃಕರಣನೂ ನಿಶ್ಚಲ ಬುದ್ಧಿಯುಳ್ಳವನೂ ಆದ ಆ ಯತಿಯು ಆ ಸಚ್ಚಿದಾನಂದರೂಪವಾದ ಬ್ರಹ್ಮವೇ ತಾನಾಗಿರುವೆನು ಎಂಬ ಭಾವವನ್ನು ಹೊಂದಿ ಅದ್ವೈತಾನುಭವಿಯಾಗಿ ಅತಿಶಯವಾಗಿ ಶೋಭಿಸಿದನು.

* ಆಶ್ರಮಾದಥಾದಿಮಾಚ್ಚ ತುರ್ಯಧರ್ಮಮಾಶ್ರಿತೋ
ಭಾನುಮಾನಿವ ಪ್ರಕಾಶಮೂರ್ತಿಮಾನಭೂದಯಮ್ ।
ನಿರ್ಮಮಃ ಕುಶಾಗ್ರಧೀರ್ಗುರೂಪದಿಷ್ಟತತ್ತ್ವಮ-
ಸ್ಯಾದಿವಾಕ್ಯಗರ್ಭಿತಾರ್ಥಚಿಂತನಾಂಚಿತೋऽಭವತ್ ॥ ೭೩

ಬ್ರಹ್ಮಚರ್ಯಾಶ್ರಮದಿಂದ ಯತ್ಯಾಶ್ರಮವನ್ನು ಸ್ವೀಕರಿಸಿದ ಆ ವಟುವು ಸೂರ್ಯನಂತೆ ಪ್ರಕಾಶಿಸಿದನು. ನಾನು, ನನ್ನದು ಎಂಬ ದೇಹಾದ್ಯಭಿಮಾನವನ್ನು ತೊರೆದಿರುವ, ಸೂಕ್ಷ್ಮಮತಿಯಾದ ಈ ಸಂನ್ಯಸ್ತ ಬಾಲಕನು ಗುರುಗಳು ಉಪದೇಶಿಸಿದ "ತತ್ತ್ವಮಸಿ" "ಅಹಂಬ್ರಹ್ಮಾಸ್ಮಿ" ಮುಂತಾದ ಮಹಾವಾಕ್ಯಗಳ ರಹಸ್ಯಾರ್ಥ ಚಿಂತನದಿಂದ ಕಂಗೊಳಿಸಿದನು.

ಚೀನಚೀವರೇಣ ಸಂವೃತಾಂಗಯಷ್ಟಿಕೋ ಯತಿಃ
ಶೋಣಶೋಚಿಷಾಭಿಷಿಕ್ತಸಾಂಧ್ಯಮೇಘಸನ್ನಿಭಃ ।
ಭಸ್ಮನಾ ಕೃತತ್ರಿಪುಂಡ್ರಶೋಭನಃ ಸ ನೂತ್ನಯಾ
ತುರ್ಯದೀಕ್ಷಯಾ ಬಭಾವಪೂರ್ವತೇಜಸಾ ಯುವಾ ॥ ೭೪

ಮೃದುವಾದ ಎಳಗೆಂಪಿನ ಕಾವಿಯುಡುಗೆಯಿಂದ ಮುಚ್ಚಿದ ಮೈಯುಳ್ಳ ಆತನು ಅರುಣಕಾಂತಿಯಿಂದ ಮಿಂದ ಸಂಜೆಯ ಮೋಡದಂತೆ ಹೊಳೆಯುತ್ತಿದ್ದನು. ಹಣೆಯಲ್ಲಿ ಮೂರೆಳೆಯವಿಭೂತಿಯನ್ನು ಧರಿಸಿರುವ ಆ ತರುಣ ಕುಮಾರನು ನವ್ಯ ಸಂನ್ಯಾಸದೀಕ್ಷೆಯಿಂದ ಅಪೂರ್ವತೇಜಸ್ಸಿನಿಂದ ಮೆರೆದನು.

---

* ಜೀವಬ್ರಹ್ಮರಿಗೆ ಅಭೇದವನ್ನು ಬೋಧಿಸುವ ಉಪನಿಷದ್ವಾಕ್ಯಗಳಿಗೆ ಮಹಾವಾಕ್ಯವೆನ್ನುವರು. ಇವು ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ, ಪ್ರಜ್ಞಾನಂ ಬ್ರಹ್ಮ, ಅಯಮಾತ್ಮಾ ಬ್ರಹ್ಮ ಮುಂತಾದವುಗಳು.

ವೈಣವಂ ಚ ದಂಡಮಾದಧಾನಮಾಶ್ರಮೋಚಿತಂ
ನೂತನಂ ತ್ರಿವಿಕ್ರಮಂ ಕಮಂಡಲುದ್ವಿತೀಯಕಮ್ ।
ಧರ್ಮದಂಡಧಾರಿಣಂ ನಿಯಂತುಮುತ್ಪಥಂ ಜನಂ
ಮನ್ಯತೇ ಸ್ಮ ಸದ್ಗುರುಂ ಸಮಸ್ತಭಕ್ತಮಂಡಲಮ್ ॥ ೭೫

ಸಂನ್ಯಾಸಾಶ್ರಮವಿಹಿತವಾದ ವೇಣುದಂಡ ಕಮಂಡಲುಗಳನ್ನು ಧರಿಸಿರುವ ನೂತನಸದ್ಗುರುವರ್ಯರನ್ನು ಅಲ್ಲಿ ನೆರೆದಿದ್ದ ಸಮಸ್ತಭಕ್ತಮಂಡಲಿಯು ಅಧಾರ್ಮಿಕ ಜನತೆಯನ್ನು ನಿಯಂತ್ರಿಸುವುದಕ್ಕಾಗಿ ಧರ್ಮದಂಡಧಾರಿಯಾದ ನೂತನ ತ್ರಿವಿಕ್ರಮಮೂರ್ತಿಯೆಂದು ತಿಳಿಯಿತು.

ಮಾಧವೇ ಸಿತೇ ದಶಮ್ಯುಪೇತಸೋಮವಾಸರೇ
ರಾಮಚಂದಿರೇ ಪುರೇ ಮರಾಂಗಣೇಽರುಣೋದಯೇ ।
ಯೋಗಪಟ್ಟಬಂಧನಾದಿಶಿಷ್ಟಕಾರ್ಯಮೀಕ್ಷಿತುಂ
ತತ್ಪರೇ ಸಮಾಗತಾ ಪ್ರಜಾತತಿಃ ಪ್ರಮೋದಿತಾ ॥ ೭೬

ಪಾರ್ಥಿವ ಸಂವತ್ಸರದ ವೈಶಾಖಶುಕ್ಲ ದಶಮೀ ಸೋಮವಾರ ಬೆಳಿಗ್ಗೆ ಅರುಣೋದಯವಾಗುತ್ತಿರುವಾಗಲೇ ಶ್ರೀರಾಮಚಂದ್ರಾಪುರದ ಶ್ರೀಮಠದ ಸಭಾಂ-ಗಣದಲ್ಲಿ ನೆರೆದಿದ್ದ ಸಂತುಷ್ಟರಾದ ಜನತೆಯು ಉತ್ಸವಾಂಗವಾದ ಯೋಗ ಪಟ್ಟಾಭಿಷೇಕ ಮುಂತಾದ ಅವಶಿಷ್ಟವಾದ ಉತ್ತರಾಂಗಕಾರ್ಯವನ್ನು ವೀಕ್ಷಿಸಲು ತವಕಪಡುತ್ತಿತ್ತು.

ಸ್ವರ್ಣರತ್ನಮೌಕ್ತಿಕೋಲ್ಲಸತ್ಕಿರೀಟಧಾರಕಃ
ಸ್ಫಾಟಿಕಾಕ್ಷಮಾಲಿಕಾವಿರಾಜಮಾನಕಂಧರಃ ।
ರಾಮಚಂದ್ರಭಾರತೀಕರಾಂಬುಜೋದ್ಭವಸ್ತತಃ
ಸೋಽಯಮಾರುರೋಹ ತಚ್ಚ ಭದ್ರವಿಷ್ಟರಂ ಮಹತ್ ॥ ೭೭

ವೈಶಾಖ ಶುದ್ಧ ದಶಮೀ ಸೋಮವಾರ ಬೆಳಿಗ್ಗೆ ಸುಮುಹೂರ್ತದಲ್ಲಿ ನೂತನ ಗುರುಗಳಿಗೆ ಯೋಗ ಪಟ್ಟ ನಡೆಯುವುದಿತ್ತು. ಯೋಗ ಪಟ್ಟದ ವಿಧಿಯಂತೆ ಪೂರ್ವಾಂಗವಾದ ಪ್ರಾತಃಕಾಲದ ಅನುಷ್ಠಾನ ಮುಗಿದಮೇಲೆ ಸಭಾಂಗಣದಲ್ಲಿ ಅಂದಿನ ಕಾರ್ಯ ಆರಂಭವಾಯಿತು. ಶ್ರೀಮದ್ರಾಮಚಂದ್ರಾಪುರದ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀಮದ್ರಾಮಚಂದ್ರಭಾರತೀಕರಕಮಲಸಂಜಾತರಾದ ಹೊಸ ಗುರುಗಳಿಗೆ ಪರ್ಯಂಕಶೌಚ ಪ್ರಯೋಗವು ಯಥಾಶಾಸ್ತ್ರವಾಗಿ ನಡೆದಿತ್ತು. ಭಸ್ಮತ್ರಿಪುಂಡ್ರವು ಹಣೆಯಲ್ಲಿ ಶೋಭಿಸುತ್ತಿರಲು ಅವರು ಕಾಷಾಯ ವಸ್ತ್ರಧರಿಸಿ ವೇಣುದಂಡವನ್ನು ಕೈಯಿಂದ ಹಿಡಿದಿದ್ದರು. ವಜ್ರವೈಡೂರ್ಯ ಪುಷ್ಯರಾಗ, ನೀಲಿ

ಮೊದಲಾದ ರತ್ನಗಳಿಂದ ಧಳಧಳಿಸುವ ಮುತ್ತುಪೋಣಿಸಿದ ಬಂಗಾರದ ಕಿರೀಟ ವನ್ನು ತಲೆಗೆ ಧರಿಸಿದ್ದರು ಪಟಿಕದ ಶುಭ್ರವಾದ ಅಕ್ಷಮಾಲಿಕೆಯು ಕೊರಳಲ್ಲಿ ಶೋಭಿಸುತ್ತಿತ್ತು. ಇಂತಹ ವೇಷಭೂಷಣಗಳನ್ನು ಧರಿಸಿದ ಹೊಸ ಸ್ವಾಮಿಗಳು ಶ್ರೀಮಠದ ಹಿಂದಿನ ಅನೇಕ ಗುರುಗಳು ಕುಳಿತಿದ್ದ ಅಮೂಲ್ಯವಾದ ಬೆಳ್ಳಿಯ ಭದ್ರ ಪೀಠವನ್ನು ಹತ್ತಿಕುಳಿತರು.

ಭದ್ರಪೀಠಿಕಾಧಿರೂಢಮಾತ್ಮಶಿಷ್ಯಮಾದರಾದ್–
ಬ್ರಹ್ಮ ಕೇವಲಂ ಚಿದಿತ್ಯವೇತ್ಯ ದೇಶಿಕಃ ಸ್ವಯಮ್ ।
ಗಂಧಪುಷ್ಪಧೂಪದೀಪಿಕಾದಿಭಿಸ್ತಮರ್ಚಯನ್
ವಂದತೇಽಸ್ಮ ರಾಮಚಂದ್ರಭಾರತೀಯತೀಶ್ವರಃ ॥ ೭೮

ಬಳಿಕ ಶ್ರೀಮದ್ರಾಮಚಂದ್ರಭಾರತೀ ಗುರುವರ್ಯರು ಭದ್ರಾಸನದಲ್ಲಿ ಕುಳಿತಿರುವ ತಮ್ಮ ಶಿಷ್ಯನನ್ನು ಅದ್ವಿತೀಯ ಜ್ಞಾನಘನವಾದ ಬ್ರಹ್ಮವಸ್ತುವೆಂದು ಭಾವಿಸಿ ತಾವೇ ಸ್ವತಃ ಗಂಧ ಹೂ ಧೂಪ ದೀಪ ಮುಂತಾದವನ್ನು ಸಮರ್ಪಿಸಿ ಪೂಜಿಸಿ ವಂದಿಸಿದರು.

ಬ್ರಹ್ಮವಾದಿವಾಕ್ಯವೇದಿವೇದವಿಜ್ಞಸನ್ನಿಧೌ
ಜ್ಞಾನಿನಾಮಥಾಗ್ರಣೀಃ ಸ ರಾಮಚಂದ್ರಭಾರತೀ ।
ಯೋಗಪಟ್ಟಮಾಬಬಂಧ ಶಾಸ್ತ್ರತೋಽಭಿಷಿಚ್ಯ ತಂ
ರಾಘವೇಂದ್ರಭಾರತೀತಿ ನಾಮಚಾಕರೋದ್ಗುರುಃ ॥ ೭೯

ಅನಂತರ ಸಭೆಯಲ್ಲಿ ಉಪಸ್ಥಿತರಿದ್ದ ವೇದಾಂತಿಗಳು, ಮೀಮಾಂಸಕರು ವೇದ ವಿದ್ವಾಂಸರು ಮುಂತಾದ ಸಭಾಸದರ ಎದುರಿಗೆ ಶ್ರೀರಾಮಚಂದ್ರಭಾರತೀಸ್ವಾಮಿ ಗಳು ತಮ್ಮ ಹೊಸ ಶಿಷ್ಯನಿಗೆ ಪುರುಷಸೂಕ್ತ ಮಂತ್ರಗಳಿಂದ ಶಂಖದಿಂದ ಅಭಿಷೇಕ ಮಾಡಿ, ಪೂಜಿಸಿ, ವಂದಿಸಿ ಯೋಗಪಟ್ಟ ಕಟ್ಟಿದರು. ಅನಂತರ ತಮ್ಮ ಕರಕಮಲ ಸಂಜಾತನಾದ ನೂತನಯತಿಶಿಷ್ಯನಿಗೆ ಶ್ರೀರಾಘವೇಂದ್ರಭಾರತೀ ಎಂದು ನಾಮಕರಣ ಮಾಡಿದರು. ಮತ್ತು ಮುಂದೆ ಹೇಳುವಂತೆ ಉಪದೇಶಿಸಿದರು–

ಸರ್ವಮಾಧಿಕಾರಿಕಂ ಮಠಸ್ಯ ಚಾಸ್ಯ ನಃ ಪದಂ
ಪ್ರಾಪ್ತುಮರ್ಹತಿ ಸ್ಫುಟಂ ಭವಾನಿತಃ ಪರಂ ಯತೇ ।
ಜ್ಯಾಯಸಾಂ ಸತಾಂ ಮತೇ ಸ್ಥಿತೇನ ಭಿಕ್ಷುಣಾ ತ್ವಯಾ
ಚಾರ್ಯಧರ್ಮಪಾಲನೇ ಸದಾ ಮತಿರ್ನಿಯುಜ್ಯತಾಮ್ ॥ ೮೦

ಎಲೈ ! ನಮ್ಮ ಶಿಷ್ಯರಾದಯತಿವರ್ಯರೇ ! ತಾವು ನಮ್ಮ ಅನಂತರ ಈ ಮಠದ ಎಲ್ಲ ಅಧಿಕಾರಸ್ಥಾನವನ್ನು ಹೊಂದಲು ಅರ್ಹತೆ ಪಡೆದಿರುವಿರಿ. ಈ ವ್ಯಾಖ್ಯಾನ

ಪೀಠದಲ್ಲಿ ಮಂಡಿಸುವ ನೀವು ಸಜ್ಜನರಾದ ಹಿರಿಯ ಆಚಾರ್ಯರ ಸಂಪ್ರದಾಯ ಗಳನ್ನು ನಡೆಸಿಕೊಂಡು ಬರಬೇಕು. ಪರಮಹಂಸಪರಿವ್ರಾಜಕರಾದ ನೀವು ಶ್ರೀಮಜ್ಜಗದ್ಗುರುಶಂಕರಾಚಾರ್ಯರು ಬೋಧಿಸಿದ ಅದ್ವೈತ ತತ್ತ್ವಗಳ ಅನುಷ್ಠಾನ ದಲ್ಲಿ ಯಾವಾಗಲೂ ಮನಸ್ಸನ್ನು ನಿಯೋಜಿಸಬೇಕು.

**ಜ್ಞಾನಿನೋಹ್ಯಕಿಂಚನಾಃ ಸದೈವ ಯೋಗಚಿಂತನಾಃ**
**ಭೋಗಿಶಾಯಿನೋ ಹರೇರ್ನಿಯೋಗಭಾಗಿನಃ ಕಿಲ ।**
**ಲೋಕಸಂಗ್ರಹಂ ಪುನಶ್ಚಿಕೀರ್ಷವೋಽದ್ಯ ಯೋಗಿನಃ**
**ಕರ್ಮಣಿ ಸ್ವತಃ ಪ್ರವೃತ್ತಿಮಾಪ್ನುವಂತ್ಯಕಾಮನಾಃ ॥** ೮೧

ಜ್ಞಾನಿಗಳು–ಬಡವರು. ಹಣವು ಅವರಿಗೆ ಏಕೆ ? ಅವರು ಯಾವಾಗಲೂ ಚಿತ್ತವನ್ನು ನಿರೋಧಿಸಿ ಭಗವಂತನನ್ನು ಧ್ಯಾನಿಸುತ್ತಾರೆ. ಅವರು ನಾಗಶಯನನಾದ ನಾರಾಯಣನ ಕಿಂಕರರಲ್ಲವೇ ? ಪರಮಾತ್ಮನ ಆಣತಿಯಾಗಿರುವ ಶ್ರುತಿ ಸ್ಮೃತಿಗಳಲ್ಲಿ ಹೇಳಿದ ಧರ್ಮವನ್ನು ಆಚರಿಸುವುದು ನಮ್ಮ ಅವಶ್ಯ ಕರ್ತವ್ಯ. ಸಂನ್ಯಾಸಿಗಳಿಗೆ ಕರ್ಮಮಾಡಬೇಕಾದುದಿಲ್ಲ. ಆದರೂ ಪ್ರಾರಬ್ಧಕರ್ಮಾಧೀನರಾದ ಅವರು ಲೋಕದ ಉನ್ಮಾರ್ಗಪ್ರವೃತ್ತಿ ನಿವಾರಣೆಗಾಗಿ ಸ್ವತಃ ತನ್ನ ಆಶ್ರಮೋಚಿತವಾದ ಕರ್ಮಗಳನ್ನು ಆಚರಿಸಬೇಕು. ಆದರೆ ತಾನು ಕರ್ಮಜನ್ಯಫಲಾಪೇಕ್ಷೆಯಿಲ್ಲದವನಾಗಿ, ಕರ್ತೃತ್ವದ ಅಭಿನಿವೇಶವಿಲ್ಲದವನಾಗಿಯೂ ಇರಬೇಕು.

**ಈಶ್ವರಪ್ರಸಾದಹೇತುಮಾತ್ಮನೋಽಖಿಲಾಂ ಕ್ರಿಯಾಂ**
**ಪ್ರೀತಯೇ ಹರೇಶ್ಚ ಯೇ ಪ್ರಕುರ್ವತೇ ನಿರಾಮಿಷಾಃ ।**
**ತಾರಯೇಯುರಾಶ್ರಿತಾನ್ ಭವಾಂಬುಧಿಂ ತರಂತಿ ತೇ**
**ವೀತರಾಗಿಣಃ ಪರಾರ್ಥಸಾಧಕಾ ಹಿ ಸರ್ವದಾ ॥** ೮೨

ಕರ್ಮದ ಫಲವನ್ನು ಬಯಸದಿರುವ ಯಾರು ಪರಮೇಶ್ವರನ ಪ್ರಸನ್ನತೆಗೆ ಕಾರಣವಾದ ತಮ್ಮ ಎಲ್ಲ ಕರ್ಮಕಲಾಪಗಳನ್ನೂ ಈಶ್ವರ ಪ್ರೀತಿಗಾಗಿಯೇ ಮಾಡು ವರೋ ಆ ಸಂನ್ಯಾಸಿಗಳು ತಮ್ಮನ್ನು ಆಶ್ರಯಿಸಿದ ಮುಮುಕ್ಷುಭಕ್ತರನ್ನು ಭವ ಸಾಗರದ ಆಚೆದಡಕ್ಕೆ ಮುಟ್ಟಿಸುವರು. ತಾವೂ ಸಂಸಾರ ಸಾಗರವನ್ನು ದಾಟುವರು. (ಅಂದರೆ ಮುಮುಕ್ಷು ಶಿಷ್ಯರಿಗೆ ತತ್ತ್ವೋಪದೇಶಮಾಡಿ ಅವರಿಗೆ ಸ್ವಸ್ವರೂಪಾನುಭವ ವುಂಟಾಗಲು ಸಹಾಯಕರಾಗುವರು. ತಾವೂ ಬ್ರಹ್ಮ ಸಾಕ್ಷಾತ್ಕಾರ ಮಾಡಿ ಧನ್ಯ ರಾಗುವರು ಎಂದು ತಾತ್ಪರ್ಯ.) ವಿರಕ್ತರು ಪರಾರ್ಥಸಾಧಕರಷ್ಟೆ.

**ಬಾದರಾಯಣೀಯಸೂತ್ರಗೂಢಭಾವಬೋಧಕಂ**
**ಜೀವಬ್ರಹ್ಮಣೋರಭೇದತಾತ್ತ್ವಿಕಾನುಭಾವಕಮ್ ।**
**ಶಾಂಕರಂ ಮತಂ ಭವಾನ್ ದಿಶಾಸು ಸಂಪ್ರಚಾರಯನ್**
**ಜೀರ್ಣಧರ್ಮಮಂದಿರಾಣಿ ಚೋದ್ಧರತ್ವನಾರತಮ್ ॥** ೮೩

ಬಾದರಾಯಣವ್ಯಾಸಮಹರ್ಷಿಗಳ ಬ್ರಹ್ಮಮೀಮಾಂಸಾ ಸೂತ್ರಗಳಲ್ಲಿರುವ ರಹಸ್ಯಾರ್ಥವನ್ನು ಬೋಧಿಸುವ, ಜೀವಬ್ರಹ್ಮರಿಗೆ ಅಭೇದಬೋಧಕಶ್ರುತಿಗಳಿಗೂ ಭೇದಬೋಧಕ ಶ್ರುತಿಗಳಿಗೂ ಇರುವ ವೈಧರ್ಮ್ಯವನ್ನು ಹೋಗಲಾಡಿಸಿ, ಅದ್ವೈತದ ವಾಸ್ತವಾರ್ಥವನ್ನು ತಿಳಿಯಪಡಿಸುವುದೂ ಆಗಿರುವ ಶ್ರೀಮಚ್ಛಂಕರ ಭಗವತ್ಪಾದರು ಬೋಧಿಸಿದ ಅದ್ವೈತ ಸಿದ್ಧಾಂತವನ್ನು ದಿಕ್ಕು ದಿಕ್ಕಿಗೂ ಪ್ರಚಾರಮಾಡಿರಿ. ಜೀರ್ಣವಾದ ಸನಾತನ ಧರ್ಮವೆಂಬ ಮಂದಿರವನ್ನು ಉದ್ಧರಿಸಿರಿ. (ಶಿಥಿಲವಾದ ಮಠದ ಕಟ್ಟಡಗಳನ್ನೂ ಹೊಸದಾಗಿ ಕಟ್ಟಿಸಿರಿ. ಜೀರ್ಣೋದ್ಧಾರಮಾಡಿರಿ. ಎಂದೂ ಧ್ವನಿತವಾಗುವುದು.)

**ಇತ್ಯುವಾಚ ರಾಘವೇಂದ್ರಭಾರತೀಂ ಯಥೋಚಿತಂ**
**ರಾಮಚಂದ್ರದಿವ್ಯಪೀಠದೇಶಿಕೋತ್ತಮೋ ಯತಿಃ ।**
**ಲೋಚನಾಂಚಲೋದಿತಾಸ್ರವಾಷ್ಪಕೈರ್ಗುರೂದಿತಂ**
**ಪಾರಿಷದ್ಯಮಾಗಧೈರ್ಜಯಸ್ವನೈರನೂದಿತಮ್ ॥** ೮೪

ಹೀಗೆ ರಾಮಚಂದ್ರಾಪುರದ ರಘೂತ್ತಮಪೀಠಾಧೀಶರಾದ ಶ್ರೀರಾಮಚಂದ್ರಭಾರತೀಸ್ವಾಮಿಗಳು ಕಿರಿಯ ಹೊಸ ಶಿಷ್ಯರಾದ ಶ್ರೀ ರಾಘವೇಂದ್ರಭಾರತೀಗಳನ್ನು ಕುರಿತು ಔಚಿತ್ಯವನ್ನು ಅತಿಕ್ರಮಿಸದೇ ಮಾತನಾಡಿದರು. ಆಗ ಆ ಸಭೆಯಲ್ಲಿ ಉಪಸ್ಥಿತರಿದ್ದ ಸಭ್ಯರು ಮತ್ತು ಸ್ತುತಿಪಾಠಕರು ತಮ್ಮ ತಮ್ಮ ಕಣ್ಣುಗಳ ಅಂಚಿನಿಂದ ಆನಂದ ಬಾಷ್ಪದ ಮಳೆಗರೆಯುತ್ತ ಜಯಜಯಕಾರಗಳಿಂದ ಗುರುಗಳು ಹೇಳಿದುದನ್ನು ಪುನಃ ಉಚ್ಚರಿಸಿದರೋ ಏನೋ ?

**ರಾಘವೇಂದ್ರಭಾರತೀ ತತೋಽವತೀರ್ಯ ಚಾಸನಾತ್**
**ದೇಶಿಕೇಂದ್ರಮಾತ್ಮನೋ ನ್ಯವೇಶಯತ್ತದಾಸನೇ ।**
**ದಂಡವದ್ಯಥಾವಿಧಿ ಪ್ರಣಮ್ಯ ನಮ್ರಕಂಧರೋ**
**ಭದ್ರಪೀಠಮನ್ಯದಧ್ಯತಿಷ್ಠದುತ್ತರೇಣ ತಮ್ ॥** ೮೫

ಅನಂತರ ನೂತನಗುರುಗಳಾದ ಶ್ರೀ ರಾಘವೇಂದ್ರಭಾರತೀಸ್ವಾಮಿಗಳು ಭದ್ರಾಸನದಿಂದ ಕೆಳಗೆ ಇಳಿದರು. ಬಳಿಕ ಆ ಭದ್ರಾಸನದ ಮೇಲೆ ತಮ್ಮ ಗುರುಗಳಾದ ಶ್ರೀರಾಮಚಂದ್ರಭಾರತೀಸ್ವಾಮಿಗಳನ್ನು ಕೂಡಿಸಿದರು. ಗುರುಗಳಿಗೆ ಅತ್ಯಂತ

ವಿನಮ್ರರಾಗಿ ದೀರ್ಘ ದಂಡದಂತೆ ಸಾಷ್ಟಾಂಗಪ್ರಣಾಮ ಮಾಡಿದರು. ಅನಂತರ ಗುರುಗಳ ಎಡಕ್ಕೆ ಇರುವ ಮತ್ತೊಂದು ಪೀಠದಲ್ಲಿ ಕಿರಿಯಸ್ವಾಮಿಗಳು ಮಂಡಿಸಿದರು.

**ಪುಷ್ಪವಂತ*ಸಂನಿಭಾವುಭಾವರಾಜತಾಮಿಮೌ**
**ರಾಮಚಂದ್ರಭಾರತೀ ಚ ರಾಘವೇಂದ್ರಭಾರತೀ ।**
**ಸೋಪಹಾರಪಾಣಯೋ ಗುರೂ ಉಭೌ ಮಹಾಜನಾ**
**ಹರ್ಷನಿರ್ಭರಾಃ ಪ್ರಣೇಮುರಶ್ರುಪೂರ್ಣಲೋಚನಾಃ ॥** ೮೬

ಭದ್ರಪೀಠದಲ್ಲಿ ಕುಳಿತಿರುವ ಈ ಶ್ರೀರಾಮಚಂದ್ರಭಾರತೀಗಳು ಮತ್ತು ಶ್ರೀ ರಾಘವೇಂದ್ರಭಾರತೀಗಳು ಇಬ್ಬರೂ ಸೂರ್ಯ ಚಂದ್ರರಂತೆ ಶೋಭಿಸಿದರು. ಬಳಿಕ ಅಲ್ಲಿ ನೆರೆದಿದ್ದ ಮಹಾಜನರು ಆನಂದಭರಿತರಾಗಿ ಕಣ್ಣುಗಳಿಂದ ಆನಂದಬಾಷ್ಪ ಸುರಿಸುತ್ತಾ ಕಾಣಿಕೆ ಫಲಾದಿಗಳನ್ನು ಒಪ್ಪಿಸಿ ಇಬ್ಬರಿಗೂ ಸಾಷ್ಟಾಂಗ ಪ್ರಣಾಮ ಮಾಡಿದರು.

**ಕೈತವೇತರೈಃ ಕೃಪಾರಸಾಪ್ಲುತೈರಿಪಾಪ್ಲುತೈಃ**
**ಸ್ವಾಮಿನಾಮನುಗ್ರಹಾಭಿಭಾಷಿತೈಃ ಸುಖಾಸ್ಪದೈಃ ।**
**ಪಾರಿಷದ್ಯಮಂಡಲಂ ಭೃಶಂ ತುತೋಷ ಚಾತ್ಮನೋ**
**ಧನ್ಯತಾಮವಿಂದತಾಥ ಚೋಪಸಂಹೃತಾ ಸಭಾ ॥** ೮೭

ಅಂದಿನ ಸಭೆಯಲ್ಲಿ ಉಪಸ್ಥಿತವಾಗಿದ್ದ ಸಮಸ್ತ ಶಿಷ್ಯಮಂಡಲಿಯು ಗುರುವರ್ಯರಾದ ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳವರು ಉಪದೇಶಿಸಿದ ಅವ್ಯಾಜವೂ, ಹಿತಕರವೂ ಆದ ಅನುಗ್ರಹಭಾಷಣವೆಂಬ ಕರುಣಾಮಯವಾದ ಅಮೃತ ಪ್ರವಾಹದಿಂದ ಮಿಂದಿತೋ ಎಂಬಂತೆ ಅತ್ಯಂತ ಹರ್ಷಗೊಂಡಿತು.

**ಚಾತುರಾಹ್ನಿಕೇ ಮಹೇಽತ್ರ ಸಂಪ್ರವೃತ್ತದೇವತಾ–**
**ರಾಧನಾನಿ ಸರ್ವಮಂಗಳಾಪ್ತಿಹೇತವೋಽಭವನ್ ।**
**ಕೇವಲಂ ನ ತಾನಿ ಲೋಕಚಿತ್ತರಂಜಕಾನ್ಯಹೋ**
**ಪೂರ್ವಜನ್ಮಸಂಚಿತಾಖಿಲಾಘಭಂಜಕಾನ್ಯಪಿ ॥** ೮೮

---

* ಪುಷ್ಪವಂತ ಶಬ್ದವು ಅಕಾರಾಂತವೂ ಇದೆ "ರವಿಶಶಿನೌ ಪುಷ್ಪವಂತಾಖ್ಯೌ" ಇತಿ ನಾಮಮಾಲಾ.

ಶ್ರೀಮದ್ರಾಮಚಂದ್ರಾಪುರದಲ್ಲಿ ನಾಲ್ಕು ದಿವಸಗಳೂ ನಡೆದ ಈ ಉತ್ಸವದಲ್ಲಿ ಶ್ರೀಸೀತಾರಾಮಚಂದ್ರ, ಚಂದ್ರಮೌಳೀಶ್ವರ ಮುಂತಾದ ಸಮಸ್ತ ದೇವತೆಗಳ ಶಾಸ್ತ್ರೀಯವಾದ ಆರಾಧನೆಗಳೂ ನಡೆದವು. ಆ ದೇವತಾರಾಧನೆಗಳು ಸಮಸ್ತಶಿಷ್ಯ ಲೋಕದ ಕಲ್ಯಾಣಕ್ಕಾಗಿಯೇ ನಡೆಸಲ್ಪಟ್ಟವು. ಅವು ಕೇವಲಮಹಾಜನರ ಮನೋರಂಜನೆಗಾಗಿಯೇ ಅಲ್ಲ. ಎಲ್ಲ ಭಕ್ತರ ಪೂರ್ವಜನ್ಮದ ಸರ್ವಪಾಪಗಳ ನಿವೃತ್ತಿದಾಗಿಯೂ ಆದವು.

**ರಾಮಚಂದಿರೇ ಮಠೇ ಮಹೋತ್ಸವೇಽತ್ರ ಸಂಗತೋ**
**ಹ್ಯಾತಿಥೇಯಮಾಪ್ತವಾನ್ ಯಥೋಚಿತಂ ಮಹಾಜನಃ ।**
**ವೈದಿಕಾಶ್ಚ ಪಂಡಿತಾಃ ಸುದಕ್ಷಿಣಾದಿಭಿಸ್ತಥಾ**
**ರಾಂಕವೋಪವಸ್ತ್ರಕೈರ್ವಿಶೇಷತಃ ಪುರಸ್ಕೃತಾಃ ॥ ೮೯**

ಶ್ರೀರಾಮಚಂದ್ರಾಪುರದ ಮಠದಲ್ಲಿ ನಡೆದ ಶಿಷ್ಯಪರಿಗ್ರಹೋತ್ಸವದಲ್ಲಿ ನೇರಿದ್ದ ಮಹಾಜನರೆಲ್ಲರೂ ಮೃಷ್ಟಾನ್ನ ಭೋಜನಾದಿಗಳಿಂದ ಸಂತೃಪ್ತಿ ಪಡೆದರು. ವೇದ ವಿದ್ವಾಂಸರಿಗೂ ಶಾಸ್ತ್ರ ಪಂಡಿತರಿಗೂ ವೈದಿಕರಿಗೂ ದಕ್ಷಿಣೆ ಕೊಟ್ಟು ಶಾಲುಹೊದೆಸಿ ಧೋತ್ರಗಳನ್ನು ಇತ್ತು ವಿಶೇಷ ರೀತಿಯಿಂದ ಸಂಮಾನಿಸಿದರು.

**(ಉಪಜಾತಿವೃತ್ತಮ್)**

**ನಿರ್ವರ್ತಿತಃ ಸರ್ವಮನೋಭಿರಾಮೋ ಮಹೋತ್ಸವಃ ಸರ್ವಗವೈಭವೇನ।**
**ವಿನೂತನಂ ದೇಶಿಕಮೇನಮಾಪ್ತ್ವಾ ಸರ್ವೋಽಪಿ–**
**ಸರ್ವೋದಯಮಾತ್ಮನ್ಯೈಚ್ಛತ್ ॥ ೯೦**

ಹೀಗೆ ಶ್ರೀಮಠದಲ್ಲಿ ನಡೆದ ಶಿಷ್ಯಪರಿಗ್ರಹಮಹೋತ್ಸವವು ಎಲ್ಲ ವಿಧವಾದ ವೈಭವದಿಂದ ಎಲ್ಲರ ಮನಸ್ಸನ್ನು ಆಕರ್ಷಿಸುತ್ತಾ ಚೆನ್ನಾಗಿ ನಡೆಯಿತು. ಈ ಸಂದರ್ಭದಲ್ಲಿ ಎಲ್ಲ ಶಿಷ್ಯಮಂಡಲಿಯೂ ಹೊಸಯತಿಗಳಾದ ಆಚಾರ್ಯರನ್ನು ಪಡೆದು, ಅವರೆಲ್ಲರೂ ತಮ್ಮ ತಮ್ಮ ಮನಸ್ಸಿನಲ್ಲಿ ಈ ಆಚಾರ್ಯರಿಂದ ತಮತಮಗೆ ಬೇಕಾದ ಎಲ್ಲ ವಿಧವಾದ ಅಭ್ಯುದಯವನ್ನು ಸಾಧಿಸಲು ಬಯಸಿದರು.

**(ಸ್ರಗ್ಧರಾವೃತ್ತಮ್)**

**ಶಾಂತಾದ್ದಾಂತಾದ್ದಯಾದ್ರಾತ್ ಯತಿಕುಲಮಹಿತಾ–**
**ದ್ರಾಮಚಂದ್ರಾದ್ಯತೀಂದ್ರಾತ್**
**ಪೂರ್ವಾಚಾರ್ಯಾನುಸಾರಿಕ್ರಮವಿಹಿತ–**
**ಪದಾಲ್ಲಬ್ಧಯತ್ಯಾಶ್ರಮಶ್ರೀಃ ।**
**ಭಾರತ್ಯಾಖ್ಯಃ ಪ್ರಸನ್ನಃ ಶಮದಮನಿಲಯೋ–**
**ರಾಘವೇಂದ್ರೋ ಮಹೀಯಾನ್**
**ವ್ಯಾಖ್ಯಾಸಿಂಹಾಸನೇಽಸ್ಮಿನ್ ಜಯತಿ–**
**ಮುನಿವರೋ ರಾಮಚಂದ್ರಾಭಿಧಾನೇ ॥ ೯೧**

## ಇತಿ ಶ್ರೀ ಗುರುಕೃಪಾತರಂಗಿಣ್ಯಾಂ ತೃತೀಯಸ್ತರಂಗಃ

ಶ್ರೀಮಜ್ಜಗದ್ಗುರು ಶಂಕರಾಚಾರ್ಯರ ಜ್ಯೇಷ್ಠ ಶಿಷ್ಯ ಸುರೇಶ್ವರಾಚಾರ್ಯರ ಶಿಷ್ಯ ವಿದ್ಯಾನಂದಾಚಾರ್ಯರ ಅವಿಚ್ಛಿನ್ನ ಪರಂಪರೆಯಿಂದ ಗುರುಪೀಠಕ್ಕೆ ಬಂದಿರುವ, ಶಾಂತರೂ ಜಿತೇಂದ್ರಿಯರೂ ಆದ ಪೂಜ್ಯಶ್ರೀಮದ್ರಾಮಚಂದ್ರಭಾರತೀ ಮಹಾಸ್ವಾಮಿಗಳಿಂದ ಸಂನ್ಯಾಸಾಶ್ರಮಶ್ರೀಯನ್ನು ಪಡೆದಿರುವ, ಶಮದಮಾದಿ ಸದ್ಗುಣ ಸಂಪನ್ನರೂ ಪರಮಪೂಜ್ಯರೂ ಆಚಾರ್ಯವರ್ಯರೂ ಆಗಿರುವ ಶ್ರೀಮದ್ರಾಘವೇಂದ್ರ ಭಾರತೀಸ್ವಾಮಿಗಳು ಶ್ರೀಮದ್ರಾಮಚಂದ್ರಾಪುರದ ರಘೂತ್ತಮಪೀಠದ ವ್ಯಾಖ್ಯಾನ ಸಿಂಹಾಸನದಲ್ಲಿ ಸರ್ವೋತ್ಕರ್ಷದಿಂದ ವಿರಾಜಮಾನರಾಗಿ ಇರುತ್ತಾರೆ.

ಇಲ್ಲಿಗೆ ಶ್ರೀ ಗುರುಕೃಪಾತರಂಗಿಣಿಯಲ್ಲಿ
ಮೂರನೆಯ ತರಂಗ

## ಅಥ ಚತುರ್ದಶಸ್ತರಂಗಃ

### (ಮಾಲಿನೀವೃತ್ತಮ್)

ಅಭಿನವಮಥಶಿಷ್ಯಂ ರಾಘವೇಂದ್ರಾಭಿಧಾನಂ
ಪ್ರತಿದಿವಸಮನುಷ್ಠೇಯಾಂಶ್ಚ ಸಂನ್ಯಾಸಧರ್ಮಾನ್ ।
ಅನುಮನುರಹಸಂ* ಪ್ರಾಶಿಕ್ಷಯಚ್ಛಾತ್ರಭಾರ-
ತ್ಯುಪಪದಕೃತನಾಮಾ ರಾಮಚಂದ್ರೋ ಯತೀಂದ್ರಃ ॥ ೧

ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳು ಶ್ರೀ ರಾಘವೇಂದ್ರಭಾರತೀಸ್ವಾಮಿಗಳನ್ನು ತಮ್ಮ ಉತ್ತರಾಧಿಕಾರಿ ಶಿಷ್ಯರೆಂದು ಪರಿಗ್ರಹಿಸಿದರಷ್ಟೆ. ಅನಂತರ ಶ್ರೀರಾಮಚಂದ್ರಾಪುರದ ಮಠದಲ್ಲಿ ಗುರುಶಿಷ್ಯರಿಬ್ಬರೂ ವಾಸಮಾಡಿದರು. ಗುರುಗಳು ತಮ್ಮ ನೂತನ ಶಿಷ್ಯರಾದ ರಾಘವೇಂದ್ರಭಾರತೀಗಳಿಗೆ ಏಕಾಂತದಲ್ಲಿ ಸಂನ್ಯಾಸಧರ್ಮದ ಸಾಂಪ್ರದಾಯಿಕವಾದ ಅನುಷ್ಠಾನದ ಬಗೆಯನ್ನು ಮಠದಲ್ಲಿ ಅಭ್ಯಾಸ ಮಾಡಿಸಿದರು.

ತದನು ಕಿಲ ಪುರಾಣಾಚಾರ್ಯವರ್ಯೋಪದೇಶ-
ಕ್ರಮಿಕಮತಿನಿಗೂಢಂ ಸಂಪ್ರದಾಯಂ ಮಠೀಯಮ್ ।
ಅಕಥಯದಯಮಸ್ಮೈ ರಾಮಚಂದ್ರೋ ಯತೀಶಃ
ಶ್ರಿತಜನಕಮನೀಯಃ ಶಿಷ್ಯವಾತ್ಸಲ್ಯಸಿಂಧುಃ ॥ ೨

ಬಳಿಕ, ಆಶ್ರಿತಜನರಿಗೆ ಸ್ಪೃಹಣೀಯರೂ, ಶಿಷ್ಯ ವಾತ್ಸಲ್ಯಸಾಗರರೂ ಆಗಿರುವ ಶ್ರೀರಾಮಚಂದ್ರಭಾರತೀಸ್ವಾಮಿಗಳು ಮಠದ ಹಿಂದಿನ ಆಚಾರ್ಯರ ಪರಂಪರೆಯಿಂದ ಬಂದಿರುವ ಸಾಂಪ್ರದಾಯಿಕ ರಹಸ್ಯಗಳನ್ನು ನೂತನ ಶಿಷ್ಯರಿಗೆ ತಿಳಿಸಿಕೊಟ್ಟರು.

ಅವಗತಯತಿಧರ್ಮಸ್ಸೋಽಚಿರಾದ್ದೇಶಿಕೋಕ್ತ್ಯಾ
ಪ್ರಣವಮನುಜಜಾಪ ಧ್ಯಾನಯೋಗಾದವಾಪ ।
ಅವಧೃತತದಭೇದೋ ಬದ್ಧಪದ್ಮಾಸನಸ್ಥೋ
ದಹರಕಮಲಮಧ್ಯಸ್ಥಾಯಿಹಂಸಸ್ಯ ಲೀಲಾಮ್* ॥ 3

---

* ಅನುರಹಸಂ = ಅನುಗತಂರಹಃ = ಏಕಾಂತಃ ಇತ್ಯರ್ಥಃ ಅನ್ವವತಪ್ತಾದ್ರಹಸಃ ಇತ್ಯತ ಃ ಸಮಾಸಾಂತೋ ಅಚ್‌ಪ್ರತ್ಯಯಃ.

* ಲೀಲಾ = ಸೌಂದರ್ಯ



ಜಗದ್ಗುರು ಶ್ರೀ ಶಂಕರಾಚಾರ್ಯ
ಶ್ರೀ ರಾಘವೇಂದ್ರ ಭಾರತೀಮಹಾಸ್ವಾಮಿಗಳು

ಶ್ರೀ ರಾಘವೇಂದ್ರಭಾರತೀಸ್ವಾಮಿಗಳು ಗುರುಗಳ ಉಪದೇಶದಿಂದ ಬಲು ಬೇಗ ಯಂತ್ರ್ಯಾಪ್ರಮುದ ಧರ್ಮಾನುಷ್ಠಾನ ಪ್ರಕಾರಗಳನ್ನು ಕಲಿತರು. ವಿಧಿವತ್ತಾಗಿ ಪ್ರಣವವನ್ನು ಅನುಜಪಿಸಿದರು ತಮ್ಮಲ್ಲಿ ಪ್ರಣವವಾಚ್ಯವಾದ ಬ್ರಹ್ಮವಸ್ತುವಿನ ಅಭೇದವನ್ನು ಶಾಸ್ತ್ರದಿಂದಲೂ ಗುರೂಪದೇಶದಿಂದಲೂ ತಿಳಿದರು. ಮತ್ತು ಅವರು ಧ್ಯಾನಯೋಗದ ಮೂಲಕ ದಹರಾಕಾಶರೂಪವಾದ ಹೃದಯಕಮಲಮಧ್ಯದಲ್ಲಿ ವಾಸಿಸುತ್ತಿರುವ ಹಂಸರೂಪನಾದ ಪರಮಾತ್ಮನ ಸೌಂದರ್ಯಾನುಭವವನ್ನು ಪಡೆದರು.

ಅಸಿತಸುಂದಿರಮಾಲಾಚ್ಛಾದಿತಾಶಾಂತರಾಲಾ
ಮುದಿತಪವನಮಯೂರೋದ್ಗೀರ್ಣಷಡ್ಜಪ್ರಸಾರಾ ।
ಭುಜಗಶಯನನಿದ್ರಾಯೋಗಮುದ್ರಾವಿಲಾಸಾ
ಕತಿಪಯದಿವಸೇಭ್ಯಶ್ಚಾಯಯೌ ವೃಷ್ಟಿವೇಲಾ ॥ ೪

ಕೆಲವು ದಿವಸಗಳಾದ ಬಳಿಕ ಮಳೆಗಾಲವು ಶುರುವಾಯಿತು. ಆಗ ಆಕಾಶದಲ್ಲಿ ಕಪ್ಪು ಕಪ್ಪು ಮೋಡಗಳು ಗುಂಪು ಗುಂಪಾಗಿ ಎದ್ದು ಕಾಣಿಸಿದುವು. ಅವು ದಿಕ್ಕು ದಿಕ್ಕುಗಳನ್ನು ಮುಚ್ಚಿದವು. ಅರಣ್ಯದಲ್ಲಿ ನವಿಲುಗಳು ಸಂತಸಗೊಂಡವು. ಅವುಗಳ ಕೊರಳುಗಳಿಂದ ಹೊರಹೊಮ್ಮಿದ ಕೇಕಾದನಿಯು ಷಡ್ಜಸ್ವರದ ಪ್ರಸಾರವು ಆಗುತ್ತಿತ್ತು. ಈ ಕಾಲದಲ್ಲಿ ಭುಜಗಶಯನನಾದ ಶ್ರೀಮನ್ನಾರಾಯಣನು ಅಹಿತಲ್ಪದಲ್ಲಿ ಪವಡಿಸಿ ನಿದ್ರೆಯೆಂಬ ಯೋಗಮುದ್ರೆಯಲ್ಲಿದ್ದನು. ಅಂದರೆ ಆಷಾಢಶುದ್ಧಶಯನೈಕಾದಶಿಯು ಹತ್ತಿರವಾಗುತ್ತಿತ್ತು.

ಸಲಿಲಭರತಟಾಕಪ್ರಾಂತನಿಷ್ಕ್ರಾಂತಭೇಕಾ
ವಿಪಿನವಿಟಪಿಶಾಖಾತಲ್ಪವಿಶ್ರಾಂತಕಾಕಾ ।
ಗಿರಿನಿಕಟನಿಪಾನೋಪಾಂತಜಾಗ್ರಜ್ಜಲೂಕಾ
ಪ್ರಕಟಬಹುವಿಲಾಸಾ ಭಾತಿ ವರ್ಷಾವಧೂಟೀ ॥ ೫

ಕೆರೆ ಹೊಂಡ ಹಳ್ಳಗಳು ತುಂಬಿದವು. ಅವುಗಳ ಹತ್ತಿರದ ದಂಡೆಗಳ ಮೇಲೆ ಕಪ್ಪೆಗಳು ಕುಪ್ಪಳಿಸುತ್ತಿದ್ದವು ಕಾಡಿನ ಮರಗಳ ಕೊಂಬೆಗಳ ಸೆಳೆಗೊಂಬಿನ ಹಾಸಿಗೆಯ ಮೇಲೆ ಕಾಗೆಗಳು ಹಾಯಾಗಿ ವಿಶ್ರಾಂತಿ ಹೊಂದಿದ್ದವು. ಗುಡ್ಡಗಾಡಿನ ಹತ್ತಿರದ ಚಿಲುಮೆಗಳ ಅಕ್ಕಪಕ್ಕದ ನೆಲೆಗಳ ಮೇಲೆ ಜಿಗಳೆ (ಜಿಗಣೆ)ಗಳು ಎಚ್ಚರಗೊಂಡು ಹರಿದಾಡುತ್ತಿದ್ದವು. ಹೀಗೆ ಬಹು ಬೆಡಗಿನ ಮಳೆಗಾಲದ ಹೆಣ್ಣು ಶೋಭಿಸಿದಳು.

ಸರಭಸಮನಿಲವ್ಯಾಕ್ಷಿಪ್ತರಂಭಾವನಾಂತಾ
ಕುಸುಮಿತಫಲಿತೈಲಾಸೌರಭಾಲಿಪ್ತವಾತಾ ।
ಸತತಸಲಿಲಧಾರಾಪಾತಸಂಭ್ರಾಂತಪ್ರೋತಾ
ಗಗನಮವಜಗಾಹೇ ಕಾಲಿಕಾ ಕಾಪಿ ಕಾಂತಾ ॥ ೬

ಈ ಕಾಲದಲ್ಲಿ ಮನೋಹರವೂ ಬಣ್ಣಿಸಲು ಅಸದಳವೂ ಆದ ರಾಶಿ ರಾಶಿ ಮೋಡಗಳು ಆಗಸದಲ್ಲಿ ಮುಸುಕಿದವು ಬಾಳೆತೋಟದ ಬಾಳೆಗಿಡಗಳು ಬಿರುಗಾಳಿಯಿಂದ ಕೀಳಲ್ಪಟ್ಟು ಚೆಲ್ಲಾಪಿಲ್ಲಿಯಾಗಿ ಎಸೆಯಲ್ಪಟ್ಟಿದ್ದವು. ಹೂ ಹಣ್ಣು ಬಿಟ್ಟಿರುವ ಏಲಕ್ಕಿ ತೋಟಗಳ ಮೇಲೆ ಬೀಸಿದ ಗಾಳಿ ಘಮಘಮಿಸುತ್ತಿತ್ತು. ಎಡೆಬಿಡದೇ ಸುರಿಯುವ ಜಡಿಮಳೆಯಿಂದ ಕಾಡಿನಲ್ಲಿ ದಿಕ್ಕುಗೆಟ್ಟ ಆನೆಮರಿಗಳಿಗೆ ದಾರಿ ತೋರದೆ ತೊಳಲಾಡುವ ಸ್ಥಿತಿಯುಂಟಾಗಿತ್ತು.

ಹರಿತಹರಿತಪೂಗಾರಾಮಕೇದಾರಸೀಮಾ
ಸ್ತಬಕಿತಫಲಪುಷ್ಯನ್ನಾರಿಕೇಲಾಭಿರಾಮಾ ।
ಕುಸುಮಿತನವಮಲ್ಲೀಚಂಪಕೋದ್ಯಾನಭೂಮಾ
ಶಿರಯತಿ ಪರಿತಾಪಂ ಕಾಪಿ ವರ್ಷಾಗಮಶ್ರೀಃ ॥ ೭

ಅಡಿಕೆತೋಟ, ಕಬ್ಬು, ಬತ್ತದಗದ್ದೆ, ಇವುಗಳ ಎಲೆಗಳು ಹಚ್ಚಹಸುರಾಗಿದ್ದವು ಗೊಂಚಲು ಗೊಂಚಲಾದ ಇಂಡಿಗೆಗಳುಳ್ಳ ತೆಂಗಿನ ತೋಟಗಳು ಚೆಂದಗಾಣಿಸುತ್ತಿದ್ದವು ಹೂ ಬಿಟ್ಟ ಗಿರಿಮಲ್ಲಿಗೆ, ಸಂಪಿಗೆಗಳಿಂದ ಉದ್ಯಾನಗಳು ಸಮೃದ್ಧವಾಗಿದ್ದವು ಹೀಗೆ ಯಾವುದೋ ಒಂದು ಮಳೆಗಾಲದ ಆಗಮನಲಕ್ಷ್ಮಿಯು ಬೇಸಗೆಯ ತಾಪವನ್ನು ಹೋಗಲಾಡಿಸಿತು.

ಸಲಿಲಮಖಿಲಮುಸ್ತೈಶ್ಶೋಷಯಿತ್ವಾಪಗಾನಾಂ
ಹರಿತತರುಲತಾದೀನ್ನಿರ್ದಯಂ ಶೋಷಯಿತ್ವಾ।
ಕ್ವ ನು ಗತ ಇತಿ ಭಾನುಂ ವಿದ್ಯುದುಲ್ಕಾಸಹಸ್ರೈಃ
ಪಿಹಿತನಿಜಶರೀರಂ ಪ್ರಾವೃಡಾಕ್ರಾಮತೀವ ॥ ೮

ಮಳೆಗಾಲವು, ಬೇಸಗೆಯಲ್ಲಿ ಹಳ್ಳ ಹೊಳೆಗಳ ನೀರೆಲ್ಲವನ್ನು ಅಪಹರಿಸಿ ತನ್ನ ಕಿರಣಗಳಿಂದ ಹಸುರಾಗಿದ್ದ ಮರ ಗಿಡ ಬಳ್ಳಿ ಮುಂತಾದುವನ್ನು ನಿರ್ದಯವಾಗಿ ಒಣಗಿಸಿ ಈಗ ಕಣ್ಣು ತಪ್ಪಿಸಿಕೊಂಡಿರುವ ಅಪರಾಧಿಯಾದ ಸೂರ್ಯನು ಎಲ್ಲಿ ಇರುವನೆಂದು ಮಿಂಚಿನ ಸೂಡಿಗಳಿಂದ ಅವನ ಮೇಲೆ ಆಕ್ರಮಿಸುತ್ತಿರಬಹುದಲ್ಲವೇ?

ನಿಖಿಲಭುವನಕೋಶವ್ಯೋಮಕೇಶಂ ಮಹಾಂತಂ
ಜಲದಕಲಶಧಾರಾವಾರಿಭಿಶ್ಚಾಭಿಷಿಚ್ಯ ।
ಸ್ತನಿತಶತಸಹಸ್ರಾವೃತ್ತರುದ್ರಂ ಜಪಿತ್ವಾ
ಪ್ರಕೃತಿರಘನಿವೃತ್ತ್ಯೈ ಕಿಂ ನು ಪೂಜಾಂ ವಿಧತ್ತೇ ॥ ೯

ವರ್ತುಲಾಕಾರವಾಗಿರುವ ಭೂ ಮುಂತಾದ ಚತುರ್ದಶ ಲೋಕಗಳೇ ದೊಡ್ಡದಾದ ಬೃಹದೀಶ್ವರಲಿಂಗ ಈ ಮಹಾಲಿಂಗಕ್ಕೆ ಪ್ರಕೃತಿ ದೇವಿಯು ಸಹಸ್ರ ಕುಂಭಾಭಿಷೇಕ ಮಾಡಿ ಪೂಜಿಸುತ್ತಿರಬಹುದು ಅನೇಕ ಮೋಡಗಳೇ ಸಾವಿರಾರು ಕುಂಭಗಳು. ಗುಡುಗುಗಳ ಮೊಳಗು ಸಾವಿರಬಾರಿ ಜಪಿಸಿದ ರುದ್ರಮಂತ್ರಗಳ ಜಪ. ಧಾರಾಕಾರವಾಗಿ ಎಡೆಬಿಡದೇ ಸುರಿಯುತ್ತಿರುವ ಮಳೆಯೇ ಧಾರಾಪಾತ್ರೆಯಿಂದ ಎಡೆಬಿಡದೇ ಲಿಂಗದ ಮೇಲೆ ಸೋರುತ್ತಿರುವ ಅಭಿಷೇಕದ ನೀರು ಹೀಗೆ ಎಡೆಬಿಡದೇ ಮಳೆ ಸುರಿಯುತ್ತಿರುವುದನ್ನು ನೋಡಿದರೆ ಪ್ರಕೃತಿಯು ತನ್ನ ಪಾಪನಿವೃತ್ತಿಗೋಸ್ಕರ ಲೋಕಗಳೆಂಬ ಮಹಾಲಿಂಗಕ್ಕೆ ಗುಡುಗಿನರುದ್ರ ಜಪ ಮಾಡುತ್ತ ಮೋಡಗಳ ಕುಂಭೋದಕ ಎರಚಿ (ಸುರಿದು) ಪೂಜೆ ಮಾಡುತ್ತಿರಬಹುದೋ ಎನ್ನುವಂತಿತ್ತು,

ಕ್ವಚಿದಪಿ ಜನಿಭಾಜಾಂ ಮಾಸ್ತು ಹಿಂಸಾಸ್ಮದಾದ್ಯೈ –
ರಿತಿವಿಹಿತವಿಚಾರಸ್ತ್ವದ್ಯ ಸಂನ್ಯಾಸಿವರ್ಗಃ ।
ಸ್ಥಗಿತನಗರಖೇಟ* ಗ್ರಾಮಸಂಚಾರಕೃತ್ಯಃ
ಪ್ರತಿವಸತಿ ಹಿ ಚಾತುರ್ಮಾಸ್ಯಮೇಕತ್ರ ಯುಕ್ತಃ ॥ ೧೦

ಈ ಮಳೆಗಾಲದಲ್ಲಿ ಭೂಮಿಯು ಎಲ್ಲ ಕಡೆಗೂ ಅಸಂಖ್ಯಾತ ಜೀವಜಂತುಗಳು ಹುಟ್ಟಿ ಹರಿದಾಡುತ್ತಿರುತ್ತವೆ. ನಮ್ಮ ಸಂಚಾರದಿಂದ ಅವುಗಳಿಗೆ ಹಿಂಸೆಯಾಗಬಾರದೆಂದು ವಿಚಾರ ಮಾಡಿದ ಸನ್ಯಾಸಿ ವರ್ಗವು ಊರು ಪಟ್ಟಣ ಪ್ರಾಂತ x ಸೀಮೆಗಳಲ್ಲಿ ತಮ್ಮ ಸಂಚಾರವನ್ನು ನಿಲ್ಲಿಸಿ, ಪ್ರಶಾಂತವಾದ ಯಾವುದೋ ಒಂದು ಸ್ಥಳದಲ್ಲಿ (ಗೃಹಸ್ಥನ ಮನೆ, ಮಠಾದಿಗಳಲ್ಲಿ) ತಂಗಿ, ಚಾತುರ್ಮಾಸ್ಯ ವ್ರತಸಂಕಲ್ಪ ಮಾಡಿ ಧ್ಯಾನಮಾಡುತ್ತಾ ಇರುತ್ತದೆ

ತದನು ಬಹುಲಪಂಚಮ್ಯಾಂ ಶುಭಾಷಾಢಮಾಸೇ
ಹ್ಯಧಿಮತಮಯಮಾರ್ಯೋ ವ್ಯಾಸಪೂಜಾವಿಶೇಷೇ ।
ಸವಿಧಿ ವಿನಯಭಾಜಾ ರಾಘವೇಂದ್ರೇಣ ಸಾಕಂ
ಸುಮತಿರಕೃತ ಚಾತುರ್ಮಾಸ್ಯಸಂಕಲ್ಪದೀಕ್ಷಾಮ್ ॥ ೧೧

---

* ಖೇಟ = ಗ್ರಾಮಗಳ ಸಮೂಹ—ಏಕಾಗ್ರಹೇಽಥಖೇಟಃ ಸ್ಯಾತ್‌ಗ್ರಾಮಭೇದೇ.

x (ಮೇದಿನೀಕೋಶ) ಪ್ರಾಂತ, ಸೀಮೆ ಎಂದು ಹಳ್ಳಿಯ ವಾಡಿಕೆ

ಅದೇ ಶಾಲಿವಾಹನಶಕ ೧೮೭೭ನೆಯ ಪಾರ್ಥಿವ ಸಂವತ್ಸರದ ಮಳೆಗಾಲ ಆರಂಭವಾಯಿತು ಆಷಾಢದಲ್ಲಿ ವ್ಯಾಸಪೂರ್ಣಿಮೆಯೂ ಪವಿತ್ರವಾಯಿತು ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳು ವಿನಯಶಾಲಿಯಾದ ತಮ್ಮ ಶಿಷ್ಯ ಶ್ರೀಮದ್ರಾಘವೇಂದ್ರಭಾರತೀ ಸ್ವಾಮಿಗಳನ್ನು ನೇರಿಸಿಕೊಂಡು ತಮ್ಮ ಮಠೀಯ ಸಂಪ್ರದಾಯದಂತೆ ಆಷಾಢಬಹುಳಪಂಚಮೀತಿಥಿಯಂದು ಶ್ರೀಮದ್ರಾಮಚಂದ್ರಾಪುರದ ಮಠದಲ್ಲಿ ಪ್ರಾತಃಕಾಲ ವ್ಯಾಸಪೂಜೆಮಾಡಿ ಚಾತುರ್ಮಾಸ್ಯವ್ರತದ ಸಂಕಲ್ಪ ಮಾಡಿ ದೀಕ್ಷೆಯನ್ನು ಕೈಗೊಂಡರು

**ಅಥ ಗತವತಿ ಕಾಲೇಽಲ್ಪೀಯಸಿ ಪ್ರೇಷ್ಯವರ್ಗ-**
**ಪ್ರಗುಣಿತಕಲಿದೋಷಾದ್ದೇಶಿಕೇಂದ್ರೋ ಜುಗುಪ್ಸಾಮ್ ।**
**ಅಭಜದಿಹ ಸ ತೂರ್ಣಂ ಜಾಹ್ನವೀತೋಯಸೇಕ-**
**ಪ್ರಶಮಿತಭವಖೇದಾಂ ಕಾಶಿಕಾಂ ಗಂತುಮೈಚ್ಛತ್ ॥** ೧೨

ಸ್ವಲ್ಪ ಕಾಲ ಕಳೆದ ಬಳಿಕ ಒಂದು ದಿವಸ ಮಠದಲ್ಲಿ ಪರಿಚಾರಕರ ಶ್ರೇಣಿಯಲ್ಲಿ ಹೆಚ್ಚಾಗುತ್ತಿದ್ದ ಜಗಳದ ಅವಗುಣದಿಂದ ದೊಡ್ಡ ಸ್ವಾಮಿಗಳಾದ ಶ್ರೀರಾಮಚಂದ್ರ ಭಾರತೀಗಳಿಗೆ ಬೇಸರವುಂಟಾಯಿತು ಕೂಡಲೇ ಗುರುಗಳು ತಿಳಿನೀರಿನಲ್ಲಿ ಮಿಂದ ಮುಮುಕ್ಷು ಜನರಿಗೆ ಜನನ ಮರಣಾದಿ ದುಃಖಗಳನ್ನು ನಿವಾರಿಸಬಲ್ಲ ಗಂಗಾನದಿಯ ತೀರದಲ್ಲಿರುವ ಕಾಶಿಗೆ ಪ್ರಯಾಣಮಾಡಲು ಬಯಸಿದರು.

**ತ್ರಿಪುರಹರಮದೃಷ್ಟ್ವಾ ಹಂತ! ಕಾಶೀಮಗತ್ವಾ**
**ಹ್ಯುಚಿತಮಿತಿ ನ ಮನ್ಯೇ ಭಕ್ಷಿತುಂ ಭಿಕ್ಷಿತಾನ್ನಮ್ ।**
**ಇತಿ ಮನಸಿ ತದಾನೀಂ ಚಿಂತಯನ್ರಾಮಚಂದ್ರೋ**
**ಗುರುರಪಿ ಚ ನಿಜೇಚ್ಛಾಸಾಧನವ್ಯಗ್ರ ಆಸೀತ್ ॥** ೧೩

"ನಾವು ಕಾಶಿಗೆ ಹೋಗದೇ ಶ್ರೀ ವಿಶ್ವನಾಥಸ್ವಾಮಿಯ ದರ್ಶನ ಮಾಡದೇ ಈ ಮಠದಲ್ಲಿ ಭಿಕ್ಷೆಯನ್ನು ತೆಗೆದುಕೊಳ್ಳುವುದು ಸರಿಯಲ್ಲ" ಎಂದು ಮನಸ್ಸಿನಲ್ಲಿ ಚಿಂತಿಸುತ್ತಿದ್ದ ದೊಡ್ಡ ಗುರುಗಳು ತಮ್ಮ ಇಷ್ಟಸಿದ್ಧಿ ಕೈಗೂಡುವ ಕೆಲಸದಲ್ಲಿ ಆಸಕ್ತರಾದರು. ಅಂದರೆ ಕಾಶಿ ಪ್ರಯಾಣಕ್ಕೆ ಸಜ್ಜಾಗುತ್ತಿದ್ದರು

**ಇತಿ ಕೃತಮತಿಮೇತ್ಯಾಽಽಚಾರ್ಯಪಾದಂ ಪ್ರಣಮ್ಯ**
**ಗ್ಲಪಿತವದನಪದ್ಮೋ ರಾಘವೇಂದ್ರಸ್ತಮೂಚೇ ।**
**ಕಥಮಿಹ ನಿವಸಾನಿ ತ್ವಾಂ ವಿನಾ ಸದ್ಗುರೋ ಮಾ**
**ಕುರು ಮಯಿ ನಿಜಶಿಷ್ಯೇ ನಿರ್ಘೃಣಾಂ ಚಿತ್ತವೃತ್ತಿಮ್ ॥** ೧೪

ದೊಡ್ಡ ಗುರುಗಳು ಕಾಶಿಗೆ ಹೋಗಲು ನಿಶ್ಚಯಿಸಿದುದನ್ನು ತಿಳಿದು ಕಿರಿಯ ಗುರುಗಳಿಗೆ ತುಂಬಾ ಅಸಮಾಧಾನವಾಯಿತು. ಮುಖ ಕಂದಿತು. ಬಳಿಕ ಶ್ರೀ ರಾಘವೇಂದ್ರಸ್ವಾಮಿಗಳು ಗುರುಗಳ ಹತ್ತಿರ ಬಂದು ದೀರ್ಘದಂಡ ಪ್ರಣಾಮ ಮಾಡಿ ಗುರುಗಳೇ ! ತಾವು ಕಾಶಿಗೆ ಹೋದಮೇಲೆ ತಾವು ಇಲ್ಲದ ಈ ಮಠದಲ್ಲಿ ನಾನೊಬ್ಬನೇ ಹೇಗೆ ಇರಲಿ ? ತಮ್ಮ ಶಿಷ್ಯನಾದ ನನ್ನಲ್ಲಿ ಕಲ್ಲುಮನಸ್ಸು ಮಾಡ ಬಾರದು. ನನ್ನ ಮೇಲೆ ದಯೆತೋರಬೇಕು" ಎಂದು ಬಿನ್ನೈಸಿದರು.

**ಇತಿ ನಿಗದತಿ ಶಿಷ್ಯೇ ಸೋಽಬ್ರವೀದ್ದೇಶಿಕೇಂದ್ರಃ**
**ಸಮಿತಿರಿಯಮಶೇಷಂ ನಿರ್ವಹೇತ್ಕಾರ್ಯಶೇಷಮ್ ।**
**ಗುರುವಚಸಿ ವಿನೇಯಾ ಸೇವಿತುಂ ನಃ ಪರೋಕ್ಷೇ**
**ಪ್ರಭವತಿ ಖಲು ಸಾ ತ್ವಾಂ ಸಾಧು ಸಂಚಿಂತ್ಯ ಬುದ್ಧ್ಯಾ ॥** ೧೫

ಈ ರೀತಿಯಾಗಿ ತಮ್ಮ ಶಿಷ್ಯರಾದ ಕಿರಿಯ ಗುರುಗಳು ಬಿನ್ನವಿಸಿದುದನ್ನು ಆಲೈಸಿದ ಶ್ರೀಮದಾಚಾರ್ಯವರ್ಯರು ಹೀಗೆ ಉತ್ತರವಿತ್ತರು "ಶ್ರೀಮಠದ ಆಡಳಿತ ಕಾರ್ಯವನ್ನು ನಿರ್ವಹಿಸುವ ಸಮಿತಿಯಿಂದೆಯಲ್ಲವೇ ! ಅದರ ಸದಸ್ಯರಿಗೆ ಗುರುಗಳ ಪಾತಿಸಲ್ಲಿ ಅತ್ಯಂತ ಶ್ರದ್ಧಾಭಕ್ತಿಯಿದೆ ನಾವು ಕಾಶಿಗೆ ಹೋದಮೇಲೆ ನಿಮ್ಮ ಸ್ಥಿತಿಯನ್ನು ಚೆನ್ನಾಗಿ ಪರ್ಯಾಲೋಚಿಸಿ ನಿಮಗೆ ಹಿತವಾಗುವಂತೆ ನಿಮ್ಮ ಯೋಗಕ್ಷೇಮವನ್ನು ಚೆನ್ನಾಗಿ ನಿರ್ವಹಿಸಲು ಆ ಸಮಿತಿಯು ಸಮರ್ಥವಾಗಿದೆ ಆದುದರಿಂದ ನೀವು ಅಧೈರ್ಯ ಗೊಳ್ಳುವುದೇಕೆ ?

**ಗುರುರಯಮಥಕಾಶೀಂ ಕಾಶಿತಾಶಾವಕಾಶಾಂ**
**ಪರಿಮಿತಪರಿವಾರೋ ರಾಮಚಂದ್ರಃ ಪ್ರತಸ್ಥೇ ।**
**ವಿನಿಹಿತ ಇವ ಧಾತ್ರಾ ರಾಘವೇಂದ್ರಸ್ಯ ಬಾಹ್ವೋಃ**
**ಪ್ರತಿದಿವಸಮವಶ್ಯಂಭಾವಿನೋಽರ್ಥಸ್ಯ ಭಾರಃ ॥** ೧೬

ಎಂದು ಸಂತೈಸಿ, ಶ್ರೀಮದ್ರಾಮಚಂದ್ರಭಾರತೀಸ್ವಾಮಿಗಳು ಮಿತಪರಿವಾರದೊಡನೆ ತನ್ನ ಮಹಿಮೆಯಿಂದ ದಿಗಂತರದಲ್ಲಿ ಬೆಳಗುತ್ತಿದ್ದ ಕಾಶಿಗೆ ಪ್ರಯಾಣ ಮಾಡಿದರು. ತರುವಾಯ ವಿಧಿಯು ಮಠದಲ್ಲಿಯೇ ನಿಂತ ಕಿರಿಯಗುರುಗಳಾದ ಶ್ರೀ ರಾಘವೇಂದ್ರಭಾರತೀಸ್ವಾಮಿಗಳ ಎರಡು ತೋಳುಗಳ ಮೇಲೆ ಪ್ರತಿನಿತ್ಯವೂ ಮಠದ ನಿತ್ಯ ಬಳಕೆಗೆ ಬೇಕಾದ ಪದಾರ್ಥಗಳಿಗೆ ಅತ್ಯವಶ್ಯಕವಾದ ಹಣಕಾಸುಗಳನ್ನು ಒದಗಿಸುವ ಜವಾಬ್ದಾರಿಯ ಹೊರೆಯನ್ನು ಇರಿಸಿತೋ ಎಂಬಂತೆ ಆಯಿತು

**ನಹಿ ಜಗತಿ ಸಮಸ್ತೇ ಲೋಕ ಕಾರ್ಯಸ್ಯ ಸಿದ್ಧ್ಯೈ**
**ಯತಿಭಿರಯತಿ ಭಿರ್ವಾ ನೇಷ್ಯತೇ ಸ್ವಾಪತೇಯಮ್ ।**
**ತದಿಹ ಸುಕರತಾಮೇಷಾಂ ನಿತ್ಯನೈಮಿತ್ತಿಕಾನಾಂ**
**ದ್ರವಿಣವಿರಹಚಿಂತಾ ಹ್ಯಂತರಾಯೋಽಸ್ಯ ಜಾತಃ** ೧೭

ಲೋಕದಲ್ಲಿ ಯತಿಗಳಾಗಲಿ ಇತರರಾಗಲಿ ತಮ್ಮ ತಮ್ಮ ಜೀವನದ ಕಾರ್ಯ ಸಿದ್ಧಿಗೆ ಹಣವನ್ನು ಬಯಸುವುದಿಲ್ಲ ಎಂಬುದಿಲ್ಲ ಎಲ್ಲರಿಗೂ ಹಣ ಜೀವನದಲ್ಲಿ ಅತ್ಯವಶ್ಯಕ ಪ್ರಕೃತ. ಶ್ರೀರಾಘವೇಂದ್ರ ಭಾರತೀ ಸ್ವಾಮಿಗಳಿಗೆ ಮಠದಲ್ಲಿ ನಿತ್ಯವೂ ನಡೆಯಬೇಕಾದ ನಿತ್ಯನೈಮಿತ್ತಿಕ ಧರ್ಮಕಾರ್ಯಗಳನ್ನು ಸುಲಭವಾಗಿ ನೆರವೇರಿಸಲು ತಕ್ಕ ಹಣ ದೊರೆಯದುದರಿಂದ ಉಂಟಾದ ಚಿಂತೆ ಅಡ್ಡಿಯಾಗಿ ಆಯಿತು

**ಕಥಮಿಹ ಬಿಭರಾಣಿ ಜ್ಯೋತಿಷಾಂ ದುರ್ನಿವಾರಂ**
**ಗಜತುರಗವಿಚಾರಂ ನಿತ್ಯರಾಜೋಪಚಾರಮ್ ।**
**ದಶರಥ ಸುಕುಮಾರಂ ತತ್ತದರ್ಹೋಪಚಾರೈಃ**
**ವಿಗತವಸುವಿಚಾರೋ ರಾಘವಂ ರಾಜರಾಜಮ್ ॥** ೧೮

ಶ್ರೀ ರಾಮನು ಚಕ್ರವರ್ತಿ, ದಶರಥರಾಜನ ಸುಕುಮಾರ ಪ್ರತಿದಿನವೂ ಆನೆ ಕುದುರೆಗಳನ್ನು ಏರಿ ವಿಶೇಷವಾಗಿ ಸಂಚರಿಸಲು ಅರ್ಹನಾದವನು ಇತರರ ಕ್ಷಾತ್ರತೇಜಸ್ಸು ಈತನನ್ನು ಎಟಕಲಾರದು ಹೆಚ್ಚೇನು! ಸೂರ್ಯ, ಚಂದ್ರ, ನಕ್ಷತ್ರ ಮುಂತಾದ ಖೇಚರರ ಬೆಳಕೂ ಶ್ರೀರಾಮನ ಮುಂದೆ ಸಪ್ಪೆ. ಶ್ರೀರಾಮನು ಸ್ವಯಂ ಜ್ಯೋತಿರ್ಮೂರ್ತಿ, ಆ ಸ್ವಯಂಪ್ರಕಾಶದಿಂದಲೇ ಇತರ ಎಲ್ಲಾ ವಸ್ತುಗಳೂ ಬೆಳಗಬಲ್ಲವು. ನಿತ್ಯವೂ ಅತನಿಗೆ ರಾಜೋಪಚಾರ ನಡೆಯಬೇಕು ಹಣದ ವಿಚಾರವನ್ನು ಪರಿತ್ಯಜಿಸಿದ ಸಂನ್ಯಾಸಿಗಳು ನಾವು. ನಮ್ಮ ಹತ್ತಿರವಿರುವ ಕೋಸಲ ಚಕ್ರವರ್ತಿ ಶ್ರೀರಾಮನನ್ನು ಆಯಾಯ ಮರ್ಯಾದೆಗೆ ತಕ್ಕಂತೆ ರಾಜೋಪಚಾರಗಳಿಂದ ಸೇವಿಸುವುದಾದರೂ ಹೇಗ ಆದೀತು? ಏಕೆಂದರೆ, ಈಗ ನಮ್ಮಲ್ಲಿ ಹಣವೂ ಇಲ್ಲ ಪರಿಚಾರ ವರ್ಗದವರೂ ಕೈ ಬಿಟ್ಟು ಹೋಗಿರುವರು. ವಿಗತವಸ್ತುವಿಚಾರರಾದ ನಾವು ಶ್ರೀರಾಮಚಂದ್ರಮೂರ್ತಿಯನ್ನು ಹೇಗೆ ಭರಿಸೋಣ? ಎಂದು ಶ್ರೀರಾಘವೇಂದ್ರ ಭಾರತೀಗಳು ಮಠದ ಆರ್ಥಿಕಸ್ಥಿತಿ ಕುಂಠಿತವಾದಾಗ ತಮ್ಮಲ್ಲಿ ತಾವೇ ಆಲೋಚಿಸುತ್ತಿದ್ದರು.

ಕಥಮಿಹ ನಿವಸಾಮಃ ಸ್ವಸ್ಥಚಿತ್ತಾ ಮಠೇಽಸ್ಮಿನ್
ಶಿಥಿಲಭವನಮೂಲಾ ಚಂದ್ರಶಾಲಾ ವಿಶಾಲಾ ।
ತ್ರುಟಿತವಲಭಿವಿದ್ಯಾಮಂದಿರಂ ಜೀರ್ಣಜೀರ್ಣಂ
ಸಪದಿ ಸ ಕುಶಲಂ ನಃ ಕೌಸಲೇಯೋ ವಿಧತ್ತಾಮ್ ॥ ೧೯

ವಿಶಾಲವಾದ ಮಠದ ಮಹಡಿ ಕಟ್ಟಡದ ಬುಡವು ಸಡಿಲವಾಗಿದೆ. ಕಟ್ಟಡ ಕುಸಿದಿದೆ. ಚಾವಣಿಯು ಸೂರಿನ ಪಟ್ಟಿಗಳು ಮುರಿದು ಹೋಗಿರುವ ವಿದ್ಯಾಮಂದಿರದ ಕಟ್ಟಡ ತೀರ ಲಡ್ಡಾಗಿದೆ ಹೀಗೆ ತೀರ ಹಳೆಯ ಜೀರ್ಣವಾದ ಕಟ್ಟಡದಲ್ಲಿ ನಿರ್ಭಯ ವಾಗಿ ಹೇಗೆ ವಾಸಿಸೋಣ ? ಕಟ್ಟಡದ ರಿಪೇರಿಗೆ ಹಣವಿಲ್ಲವಲ್ಲಾ ! ಇಂತಹ ಸ್ಥಿತಿ ಯಲ್ಲಿ ನಮ್ಮ ಆರಾಧ್ಯ ದೇವತೆಯಾದ ಶ್ರೀರಾಮನೇ ಕ್ಷೇಮವನ್ನು ಉಂಟುಮಾಡ ಬೇಕು.

ಅಲಮಲಮಭಿಯುಕ್ತೈಃ ಪ್ರಾಪ್ಯ ಮಠಾಧಿಪತ್ಯಂ
ನಿಗಡಯಮಿತಪಾದೈಃ ಸ್ಥೀಯತೇಽಸ್ಮಾದೃಶೈಶ್ಚ ।
ಶುಕಶಕುನಿಪುರೋಗಾಃ ಸ್ವೈರಮಭ್ರೇ ಭ್ರಮಂತೋ
ಮಧುರವಿರುತಿಹೇತೋಃ ಪಂಜರೇ ಸಂಧ್ರಿಯಂತೇ ॥ ೨೦

ತಿಳಿದವರಿಗೆ ಮಠಾಧಿಪತ್ಯ ಬೇಡ ನಿಶ್ಚಯವಾಗಿಯೂ ಬೇಡ, ನಮ್ಮಂತಹ ವರು ಮಠಾಧಿಪತ್ಯವನ್ನು ವಹಿಸಿಕೊಂಡು ಇಲ್ಲಿ ಕಾಲಿಗೆ ಬೇಡಿ ಹಾಕಿಸಿಕೊಂಡು ಇರ ಬೇಕು ನಮ್ಮ ಇಚ್ಛೆಯಂತೆ ಸ್ವತಂತ್ರವಾಗಿ ಹೋಗುವಹಾಗಿಲ್ಲ. ಗಿಣಿ, ಕೋಗಿಲೆ, ಸಾರಿಕೆ ಮುಂತಾದ ಹಕ್ಕಿಗಳು ಸ್ವೇಚ್ಛೆಯಾಗಿ ಆಕಾಶದಲ್ಲಿ ಸಂಚರಿಸುತ್ತಾ ಇರುತ್ತವೆ. ಆದರೂ ಅವು ತಮ್ಮ ಇಂಪುದನಿಯ ದೋಷದಿಂದ ಪಂಜರದಲ್ಲಿ ಬಂಧಿಸಲ್ಪಡುತ್ತವೆ ಯಷ್ಟೆ.

ಅವಿಷಯಪರತಂತ್ರಾ ಅಪ್ಯತಂತ್ರಾ ಇವ ಸ್ಮಃ
ಸಮಿತಿರಪಿ ಮಠೀಯಾ ನಿಷ್ಕ್ರಿಯೇವಾದ್ಯ ಭಾತಿ ।
ಪರಿಹೃತಭವಬಂಧಾ ಬ್ರಹ್ಮಣಿ ಶ್ರೀನಿವಾಸೇ
ಪ್ರಣಿಹಿತಪರಮಾರ್ಥಾ ಅತ್ರ ರುದ್ಧಾಃ ಕಥಂ ಸ್ಮಃ ॥ ೨೧

ನಾವು ಸ್ರಕ್, ಚಂದನ,ವನಿತಾದಿ ವಿಷಯ ಸುಖಗಳನ್ನು ತ್ಯಜಿಸಿದವರಾಗಿ ಸ್ವತಂತ್ರರಾದರೂ ಇಲ್ಲಿ ಪರತಂತ್ರರಂತೆ ಇದ್ದೇವೆ ಶ್ರೀಮಠದ ಆಡಳಿತದ ಜವಾಬ್ದಾರಿ ಯನ್ನು ಹೊತ್ತ ಮಠೀಯ ಕಾರ್ಯನಿರ್ವಾಹಕರ ಸಮಿತಿಯೂ ಕೆಲಸ ಮಾಡದೇ ಸುಮ್ಮನಿದೆಯೋ ಎನ್ನುವಂತೆ ತೋರುತ್ತದೆ. ನಾವು ಹೊನ್ನು ಮಣ್ಣು ಹೆಣ್ಣು ಗಳ ಮೇಲಣ ಮೋಹದ ಕಟ್ಟನ್ನು ಕಳಚಿಹಾಕಿದ್ದೇವೆ. ಬ್ರಹ್ಮವಸ್ತುವಾದ

ಶ್ರೀಮನ್ನಾರಾಯಣನಲ್ಲಿ ಧ್ಯಾನಾರೂಢರಾಗಿ ಸ್ವಸ್ವರೂಪಾನುಭವವಾದ ಮೋಕ್ಷ ವನ್ನೇ ಪರಮ ಪ್ರಯೋಜನವೆಂದು ಬಾವಿಸಿದ್ದೇವೆ ಇಂತಹವರು ಈ ಮಠದಲ್ಲಿ ಒದ್ದರಂತೆ ಹೇಗೆ ಆದೀತೊ ? ಇದು ಅತ್ಯಾಶ್ಚರ್ಯ.

ಇಹಮಠ ಅವಧಿ ನ ಕೇನಾಪ್ಯಸ್ತಿ ನಃ ಸಂಪ್ರಯೋಗಃ
ಕಿಮಿವ ಹಿ ಗುರುಶಿಷ್ಯಾಸಂಜನಂ ಭಿನ್ನಮೂಲಮ್ ।
ವಿರಲ ಇವ ವಿಶಾಲೇ ಮಂಡಲೇ ಧಾರ್ಮಿಕಾಣಾಂ
ಸ ಖಲು ಪುರುಷ ಏಕೋ ಯಃ ಪ್ರಜಾನಾತಿ ಚಾಸ್ಮಾನ್ ॥ ೨೨

ನಮಗೆ ಸಂನ್ಯಾಸಾಶ್ರಮವಾದ ಬಳಿಕ ಈ ದಿವಸದವರೆಗೂ ಈ ಮಠದಲ್ಲಿ ಯಾವ ಶಿಷ್ಯನೊಡನೆಯೂ ಸಂಪರ್ಕ ಉಂಟಾಗಲಿಲ್ಲ ಇವರಿಂದ ಗುರುಮಠಕ್ಕೂ ಶಿಷ್ಯಸಮಾಜಕ್ಕೂ ಇರುವ ನಿಕಟ ಸಂಬಂಧವು ಬುಡಸಹಿತ ನಷ್ಟವಾಯಿತೋ ಎಂದು ಅನ್ನಿಸುತ್ತದೆ ವಿಶಾಲವಾದ ಧಾರ್ಮಿಕರಾದ ಹವ್ಯಕಬ್ರಾಹ್ಮಣ ಮಂಡಲದಲ್ಲಿ ಯಾರು ನಮ್ಮನ್ನು ಚೆನ್ನಾಗಿ ತಿಳಿದಿರುವವರೋ ಆ ವ್ಯಕ್ತಿವಿಶೇಷವೂ ಕೂಡ ವಿರಲವೋ ಎಂದು ಹೇಳುವಂತಿದೆ.

ಮಠ ಇಹ ನಹಿ ಶಾಸ್ತ್ರಾಭ್ಯಾಸ ಸೌಕರ್ಯಮಾಸ್ತೇ
ಫಲತು ಮಮ ಕದಾ ವಾ ಶಾಸ್ತ್ರವಿದ್ಯಾಭಿಲಾಷಃ ।
ವಿಬುಧಜನಸಕಾಶಾತ್ ಶಾಸ್ತ್ರದುರ್ಬೋಧತತ್ತ್ವ-
ಗ್ರಹಣ ಸದುಪಪತ್ತಿರ್ಮೇ ಕದಾ ವಾ ಪ್ರಭಾಯಾತ್ ॥ ೨೩

ಇಂದಿನ ಸ್ಥಿತಿಯಲ್ಲಿ ಈ ಮಠದಲ್ಲಿ ನ್ಯಾಯ, ವ್ಯಾಕರಣ, ವೇದಾಂತಾದಿ ಶಾಸ್ತ್ರಗಳನ್ನು ಅಭ್ಯಾಸಮಾಡಲು ತಕ್ಕ ಸೌಕರ್ಯವಿಲ್ಲ. ಶಾಸ್ತ್ರವಿದ್ಯಾರ್ಜನೆಯ ನನ್ನ ಹಂಬಲ ಯಾವಾಗ ಫಲಕಾರಿಯಾಗುವುದೋ ? ವಿದ್ವಾಂಸರ ಸಂಪರ್ಕದಿಂದ ಶಾಸ್ತ್ರದೊಳಗಣ ದುರ್ಬೋಧವಾದ ತತ್ತ್ವ ರಹಸ್ಯಗಳನ್ನು ಗ್ರಹಿಸಲು ತಕ್ಕ ಯುಕ್ತಿಯು ಯಾವಾಗ ನನ್ನ ಬುದ್ಧಿಗೆ ಹೊಳೆದೀತೋ ?

ಕಮಲಭವಕಲತ್ರಾಗಾರಲುಂಟಾಕ* ವಿದ್ವ-
ತ್ಪ್ರವರಮಣಿಗಣೈರಾಪೂರಿತಃ ಕೋಽಪಿ ಕೋಶಃ ।
ಶ್ರುತಿಪಥಿಕ ಪಿಪಾಸಾವಾರಕೋ ಭಾರತೀಯಃ
ಸುಮತಿಭಿರಪಹಾರ್ಯೋಽಪ್ಯವ್ಯಯಶ್ಚಾಸ್ತಿ ಕಾಶ್ಯಾಮ್ ॥ ೨೪

* ಲುಂಟಾಕ= ಕದಿಯುವ ಸ್ವಭಾವದವನು. ಜಲಭಿಕ್ಷಕುಟ್ಟಲುಂಟವೃಜಃ ಷಾಕನ್ ಇತಿಷಾಕನ್ ಪ್ರತ್ಯಯಃ (ಪಾಣಿನಿ ೩-೨-೧೫೫).

ವಿದ್ಯಾಧಿದೇವತೆಯಾದ ಶಾರದೆಯ ಭಂಡಾಗಾರವನ್ನೇ ಸೂರೆಗೊಂಡಿರುವ ಮಹಾವಿದ್ವಾಂಸರೆಂಬ ರತ್ನರಾಶಿಗಳನ್ನು ಕೂಡಿಟ್ಟಿರುವ ಅಪೂರ್ವವಾದ ಭಾರತೀಯ ಕೋಶವು ಕಾಶಿಯಲ್ಲಿ ಇರುವುದು ಪ್ರಸಿದ್ಧ. ಅದು ಸನಾತನ ಧರ್ಮವಾದ ವೇದ ಮಾರ್ಗದಲ್ಲಿ ಪ್ರಯಾಣ ಮಾಡುವವರ ಬಾಯಾರಿಕೆಯನ್ನು ಹೋಗಲಾಡಿಸುವುದೆಂದೂ ಬುದ್ಧಿಶಾಲಿಗಳು ಅಲ್ಲಿರುವ ರತ್ನಗಳನ್ನು ಬಳಸಿದರೂ ಕೋಶವು ಬರಿದಾಗದೆಂದೂ ಕೇಳಿದ್ದೇವೆ

ವಿಷಯಸುಖವಿರಕ್ತಾ ಧ್ಯಾನಯೋಗಾನುರಕ್ತಾಃ
ಅವಗತಪರಮಾರ್ಥಾಸ್ತ್ಯಾಗಸಂಪಾದಿತಾರ್ಥಾಃ ।
ಪರಹಿತಸುಹಿತಾಸ್ತೇ* ಸ್ವಾತ್ಮಸಂಸ್ಕಾರಹೇತೋ –
ರ್ವಿರಚಿತಸುತಪಸ್ಯಾಃ ಸಂತಿ ಸಂನ್ಯಾಸಿನೋಽತ್ರ ॥ ೨೫

ಇಂದ್ರಿಯ ಜನ್ಯ ಸುಖವನ್ನು ತುಚ್ಛೀಕರಿಸುವ, ಪರಮಾತ್ಮನ ಧ್ಯಾನಯೋಗದಲ್ಲಿ ಪ್ರೀತಿಯಿರುವವರೂ ಆಧ್ಯಾತ್ಮಿಕತತ್ತ್ವವನ್ನು ತಿಳಿದವರೂ ತ್ಯಾಗಕ್ಕಾಗಿ ದ್ರವ್ಯಾರ್ಜನೆಯನ್ನು ಮಾಡುವವರೂ ಪರರ ಹಿತಕಾರ್ಯದಿಂದ ಸಂತೃಪ್ತರೂ ತಮ್ಮ ಆತ್ಮ ಸಂಸ್ಕಾರಕ್ಕಾಗಿಯೇ ತಪೋನಿಷ್ಠರೂ ಆಗಿರುವ ಪರಮೈಕಾಂತಿಗಳಾದ ಪಾರಿವ್ರಾಜಕರೂ ಅಲ್ಲಿ ಇದ್ದಾರೆಂದು ಕೇಳಿದ್ದೇವೆ.

**ಹರಿಪದನಖಕಾಂತಿಸ್ವಚ್ಛಪೂರಂ ವಹಂತೀ
ತುಹಿನಕಿರಣಮೌಲೇರ್ಮಸ್ತಕಾನ್ನಿಷ್ಪತಂತೀ ।
ಶಿಶಿರಶಿಖರಿಸಾನುಪ್ರಾಂಗಣಾಂತರ್ಲುಠಂತೀ
ಶಿಶಿರಯತು ದೃಶೌ ಮೇ ಸಾ ಸ್ರವಂತೀ ಕದಾ ವಾ ॥** ೨೬

ಶ್ರೀ ಮಹಾವಿಷ್ಣುವಿನ ಪಾದದ ಉಗುರುಗಳ ಹೊಳಪುಗಳಿಂದ ಸ್ವಚ್ಛವಾದ ನೀರಿನ ಹೊನಲು ಹರಿಸುತ್ತಿರುವ, ಚಂದ್ರನನ್ನು ತಲೆಯಲ್ಲಿ ಸೂಡಿದ ಶಿವನ ಜಟೆಯಿಂದ ಧುಮುಕಿ ಬೀಳುತ್ತಿರುವ, ಹಿಮಾಲಯದ ತಪ್ಪಲಿನ ನೆಲದ ಮೇಲೆ ಹೊರಳಾಡುತ್ತಾ ಹೋಗುತ್ತಿರುವ ಆ ಗಂಗೆಯು ಯಾವಾಗ ನನ್ನ ಕಣ್ಣುಗಳಿಗೆ ತಂಪನ್ನು ಎರೆಯುವಳೋ !

---

* ಪರಹಿತ ಸುಹಿತಾಃ ಪರರ ಹಿತಸಾಧನೆಯಿಂದ ಸಂತೃಪ್ತರು. ಪರಹಿತೇನ ಸುಹಿತಾಃ ಕರ್ತೃಕರಣೇ ಕೃತಾ ಬಹುಲಮ್, ಇತಿ ತೃತೀಯಾ ತತ್ಪುರುಷ ಸಮಾಸಃ

ಅಹಹ! ಮಮ ಕದಾ ವಾ ಶಾಸ್ತ್ರವಿದ್ಯಾಂ ಗ್ರಹೀತುಂ
ಸ್ವಸುಕೃತಪರಿಪಾಕೈಃ ಪಂಡಿತೇಭ್ಯಶ್ಚ ಕಾಶ್ಯಾಮ್ ।
ಪರಿಷದಿ ಸುರವಾಣ್ಯಾ ವ್ಯಂಗ್ಯಲೀಲಾವಿಲಾಸಾ-
ನ್ನಿಶಿತಮತಿಭಿರಾಪ್ಯಾಂಸ್ತಾನ್ಕದಾಹಂ ಲಭೇಯ ॥ ೨೭

ಆಹಾ! ಕಾಶಿಯಲ್ಲಿ ಪಂಡಿತರಿಂದ ಶಾಸ್ತ್ರ ವಿದ್ಯೆಯನ್ನು ಕಲಿಯಲು ತಕ್ಕ ಅದೃಷ್ಟವು ನನಗೆ ಯಾವಾಗ ಪಲಿಸೀತೋ! ವಿದ್ವಾಂಸರ ವಿಚಾರಗೋಷ್ಠಿಯಲ್ಲಿ ಕೇವಲ ಕಾವ್ಯಭಾವನಾಪರಿಪಕ್ವಬುದ್ಧಿಗಳಿಂದ ಅನುಭವಿಸಲು ಯೋಗ್ಯವಾದ ಸಂಸ್ಕೃತಸಾಹಿತ್ಯಸರಸ್ವತಿಯ ವ್ಯಂಗ್ಯಾರ್ಥಾತಿಶಯದ ಸೌಂದರ್ಯವಿಶೇಷವ ಅನುಭವವು ನನಗೆ ಯಾವಾಗ ಆದೀತೋ!

ನಿಜಗದುರನುಯುಕ್ತಾ ಆರ್ಯಪಾದಾಸ್ತು ಕಾಶೀಂ
ಸದಯಮಭಿಸರಂತೋ ವತ್ಸ ಮಾ ತ್ವಂ ಬಿಭೀಹಿ ।
ದಶಮುಖವಿನಿಹಂತಾ ಹ್ಯಂತರಾಯಸ್ಯ ಭೇತ್ತಾ
ತನುಸಿ ಪಥಿ ವಿಧತ್ತೇ ದೀಪಕೃತ್ಯಂ ತವೇತಿ ॥ ೨೮

ಅಂದು ನಮ್ಮ ಪೂಜ್ಯಗುರುಗಳು ಕಾಶಿಗೆ ಹೋಗಲು ಸಿದ್ಧರಾದಾಗ ನಾವು ಖಿನ್ನವಿಸಿಕೊಂಡೆವಷ್ಟೆ. ಆಗ ಅವರು "ಮಗು! ಹೆದರಬೇಡ. ಭಕ್ತರ ವಿಘ್ನಗಳನ್ನು ಹೋಗಲಾಡಿಸುವವನೂ ರಾವಣ ಸಂಹಾರಿಯೂ ಆದ ಶ್ರೀರಾಮಚಂದ್ರಪ್ರಭುವು ನಿನ್ನ ಆಕಾಂಕ್ಷೆಗೆ ತಡೆಯಾದ ಕತ್ತಲಿನ ಹಾದಿಗೆ ದೀಪತೋರುವನು" ಎಂದು ನನ್ನ ಮೇಲೆ ಕರುಣೆಯಿಟ್ಟು ಸಂತೈಸಿದರಲ್ಲವೇ!

ಇತಿ ಮನಸಿ ತಪಸ್ವೀ ರಾಘವೇಂದ್ರಃ ಪರಿವ್ರಾಟ್
ವಿವಿಧಬಹುಲಚಿಂತಾತಂತುಸಂತಾನಯೋಗೈಃ ।
ಅಭಿಲಷಿತಪುಮರ್ಥಪ್ರಾಪ್ತಿಮಾರ್ಗೋಪರೋಧೈ-
ರಭಿನವಬಹುವರ್ಣಾಂ ದೀರ್ಘಶಾಟೀಮುವಾಯ ॥ ೨೯

ಹೀಗೆ ಚಿಂತೆಗೆ ಒಳಗಾದ ಸಂನ್ಯಾಸಿಗಳಾದ ಶ್ರೀ ರಾಘವೇಂದ್ರಭಾರತೀ ಗುರುಗಳು ತಮಗೆ ಇಷ್ಟವಾದ ಅಧ್ಯಾತ್ಮಜ್ಞಾನಸಂಪಾದನೆಯ ದಾರಿಗೆ ಅಡತಡೆಯಾಗಿಯುಳ್ಳ, ಬಗೆಬಗೆಯ ಬಹು ಚಿಂತೆಗಳ ನೂಲಿನ ಉಂಡೆಗಳ ಸಾಧನೆಗಳಿಂದ ತಮ್ಮ ಮನಸ್ಸಿನಲ್ಲಿಯೇ ಬಹು ಬಣ್ಣದ ಉದ್ದುದ್ದದ ಬಟ್ಟೆಯನ್ನು ನೇಯ್ದರು.

ತದನು ವಿತತಶಂಕಾಪಂಕಿಲಂ ಮಾನಸಂ ಸ್ವಂ
ಶ್ರೀಜಗದಘಹರಸ್ಯಾಘೋರಮೂರ್ತೇಃ ಪ್ರಸಾದಾತ್ ।
ಧ್ರುವಮುಪಗತ ಶಂಕೇಃ ಕರ್ತುಮಾರ್ಯೋ ವಿಶುದ್ಧಂ
ಕೃತಮತಿರನಸಾ*ಽಸಾವಾಪದಿಕ್ಕೇರಿಪಲ್ಲೀಮ್ ॥ ೩೦

ಬಳಿಕ ಶಂಕಾರಹಿತರಾಗಿ ನಿಶ್ಚಿತ ಬುದ್ಧಿಯುಳ್ಳ ಕಿರಿಯ ಗುರುಗಳು ವಿಸ್ತಾರವಾದ ವಿತರ್ಕಗಳಿಂದ ಕೆಸರಾದ ತಮ್ಮ ಮನಸ್ಸನ್ನು ಮೂರು ಲೋಕದ ಭಕ್ತರ ಪಾಪಗಳನ್ನು ಹೋಗಲಾಡಿಸುವ ಅಘೋರೇಶ್ವರಸ್ವಾಮಿಯ ಅನುಗ್ರಹದಿಂದ ನಿರ್ಮಲವಾಗಿಸುವುದಕ್ಕೋ ಎಂಬಂತೆ ಮಠದಿಂದ ಇಕ್ಕೇರಿ ಗ್ರಾಮಕ್ಕೆ ಎತ್ತಿನ ಬಂಡಿಯಲ್ಲಿ ಕೂತು ಬಂದರು.

ಪಿಹಿತದಹನಕಾಯಃ ಕೋಽಪ್ಯಘೋರೇಶ್ವರಸ್ಯ
ಪ್ರತಿನಿಧಿರಿವ ದೇವಸ್ಥಾನ ಆಸ್ತೇ ಪರಿವ್ರಾಟ್ ।
ಇತಿ ಪರಿಸೃತವಾರ್ತಾಕರ್ಣನಪ್ರೇರ್ಯಮಾಣಾ
ದ್ವಿಜಪರಿಷದುಪೇತ್ಯ ಸ್ವಾಮಿನಸ್ತಾನನಂಸೀತ್ ॥ ೩೧

“ಬೂದಿ ಮುಚ್ಚಿದ ಕೆಂಡದಂತಿರುವ ಮೈಯುಳ್ಳ ಅಘೋರೇಶ್ವರ ಸ್ವಾಮಿಯ ಪ್ರತಿನಿಧಿಯೋ ಎಂಬಂತಿರುವ ಯಾರೋ ಒಬ್ಬ ಸಂನ್ಯಾಸಿಗಳು ದೇವಸ್ಥಾನದಲ್ಲಿ ಇದ್ದಾರೆ” ಎಂಬ ಸುದ್ದಿ ಚಣ ಮಾತ್ರದಲ್ಲಿ ಸುತ್ತು ಮುತ್ತಲೂ ಹರಡಿತು. ಆ ಸುದ್ದಿ ಕೇಳಿ ಕುತೂಹಲ ಭರಿತವಾದ ಬ್ರಾಹ್ಮಣರ ಗುಂಪು ದೇವಸ್ಥಾನದ ಒಳಗೆ ಬಂದಿತು. ಅದು ಅಲ್ಲಿರುವ ಆ ಕಿರಿಯ ಸ್ವಾಮಿಗಳಿಗೆ ದೀರ್ಘದಂಡ ನಮಸ್ಕಾರ ಮಾಡಿತು.

ಸುವಿದಿತತದುದಂತಾ ಬ್ರಾಹ್ಮಣಶ್ರೇಣಿರೇಷಾ
ಗುರುಚರಣಸರೋಜದ್ವಂದ್ವಮುದ್ವಂದ್ವಹೇತೋಃ ।
ವಿಮಲಜಲಸುಮಾದ್ಯೈಃ ಪೂಜಯಿತ್ವಾ ಸಭಕ್ತಿ-
ಪ್ರಣಯಮಧುರಮಸ್ಮೈ ಸ್ವಾಗತಂ ವ್ಯಾಜಹಾರ ॥ ೩೨

ಬಳಿಕ ಬ್ರಾಹ್ಮಣರ ಶ್ರೇಣಿಗೆ ಇಲ್ಲಿ ಬಂದ ಇವರು ಯಾರು ? ಇವರ ಪರಿಸ್ಥಿತಿಯೇನು? ಎಂಬುದು ಗುರುಗಳೊಡನೆ ಮಾತನಾಡಿದಾಗ ತಿಳಿಯಿತು ಇವರು ನಮ್ಮ ರಾಮಚಂದ್ರಾಪುರದ ಮಠದ ಕಿರಿಯ ಗುರುಗಳು ಎಂದು ಬ್ರಾಹ್ಮಣರಿಗೆ ತುಂಬಾ ಸಂತೋಷವಾಯಿತು. ಬಳಿಕ ಆ ವಿಪ್ರ ಶ್ರೇಣಿಯು ಎಲ್ಲ ಶಿಷ್ಯರ ಶ್ರೇಯಸ್ಸಿಗಾಗಿ ಸಂಪ್ರದಾಯದಂತೆ ಶ್ರೀ ಗುರುವರ್ಯರ ಪಾದುಕೆಗೆ ವಿಧಿವತ್ತಾಗಿ ನಿರ್ಮಲೋದಕ

*ಅನಸಾ ಗಾಡಿಯಿಂದ, ಸಕಾರಾಂತ ನಪುಂಸಕಲಿಂಗಃ ಅನಸ್ ಶಬ್ದಃ.

ದಿಂದ ಅಭಿಷೇಕ ಮಾಡಿ, ಗಂಧ, ಅಕ್ಷತ, ಪುಷ್ಪ ಧೂಪ ದೀಪ ಮುಂತಾದವುಗಳಿಂದ ಭಕ್ತಿಯಿಂದ ಪೂಜಿಸಿತು. ಅನಂತರ ಗುರುಗಳಿಗೆ ಪ್ರಣಯ ಮಧುರವಾದ ಸ್ವಾಗತ ವನ್ನು ಹೇಳಿ ಬಿನ್ನವಿಸಿತು

**ಕಿಮಿವಹಿ ಸುಕೃತಂ ನಃ ಸ್ವಾಮಿಪಾದಾ ಭವಂತಃ**
**ಸ್ವಯಮಿಪಮುಪಯಾತಾಃ ಸ್ಥಾನಮಸ್ಮಾಕಮಾರಾತ್ ।**
**ಕಿಮಿದಮಿಹ ಭವದ್ಭಿಃ ಕರ್ತುಮಿಷ್ಟಂ ಯಮಿಷ್ಟಾನ್**
**ತದಪಿ ಕರುಣಯಾ ನಃ ಶಿಷ್ಟ ವಃ ಕಿಂಕರಾಃ ಸ್ಮಃ ॥** ೩೩

"ಸ್ವಾಮಿಗಳೇ! ನಮ್ಮ ಪುಣ್ಯವೇತಹುದೋ! ಪೂಜ್ಯರಾದ ತಾವು ತಾವಾಗಿಯೇ ದೂರದಿಂದ ನಮ್ಮ ಈ ಊರಿಗೆ ಬಂದಿದ್ದೀರಿ. ಇಲ್ಲಿ ತಮಗೆ ಏನು ಏನು ಆಗಬೇಕು? ದಯವಿಟ್ಟು ಕಿರಿಯರಾದ ನಮಗೆ ಅಪ್ಪಣೆ ಮಾಡಬೇಕು ನಾವು ತಮ್ಮ ಸೇವೆಗೆ ಅಣಿಯಾಗಿದ್ದೇವೆ.

**ದ್ವಿಜಕುಲಗುರುರಿತ್ಥಂ ಪ್ರಾರ್ಥಿತೋ ರಾಘವೇಂದ್ರಃ**
**ಕತಿಪಯದಿವಸಾನತ್ರಾಧ್ಯುವಾಸೇಷ್ಟಸಿದ್ಧ್ಯೈ ।**
**ಅಥ ಪರಿಸರಸೀಮಾವಾಸಿನಃ ಶಿಷ್ಯಧುರ್ಯಾ-**
**ನಯಮವಧೃತಕಾರ್ಯಶ್ಚಾನಯಾಮಾಸ ಸಭ್ಯಾನ್ ॥** ೬೪

ಹವ್ಯಕ ಬ್ರಾಹ್ಮಣರಿಗೆ ವಂಶಪರಂಪರೆಯಿಂದಲೂ ಗುರುಗಳಾಗಿರುವ ಶ್ರೀ ರಾಮಚಂದ್ರಾಪುರದ ಪೀಠದ ಕಿರಿಯ ಗುರುಗಳಾದ ಶ್ರೀರಾಘವೇಂದ್ರ ಭಾರತೀಗಳು ಶಿಷ್ಯರ ಕೋರಿಕೆಯಂತೆ ಇಕ್ಕೇರಿಯ ಅಘೋರೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ತಮ್ಮ ಇಷ್ಟ ಸಿದ್ಧಿಗಾಗಿ ಕೆಲವು ದಿವಸಗಳ ತನಕ ಇದ್ದರು. ತಾವು ಮುಂದೆ ಮಾಡ ತಕ್ಕ ಕಾರ್ಯದ ನಿಶ್ಚಯ ಬುದ್ಧಿಯುಳ್ಳ ಅವರು ಇಕ್ಕೇರಿಸೀಮೆ ಎಲಗಳಲೆಸೀಮೆ, ಕಳದಿಸೀಮೆ, ಶಿರುವಾತೆ ಸೀಮೆ ಮುಂತಾದ ಸೀಮೆಗಳಲ್ಲಿ ವಾಸಿಸುತ್ತಿದ್ದ ಸಭ್ಯರಾದ ಪ್ರಮುಖ ಶಿಷ್ಯರಿಗೆ ರಾಯಸ ಕಳುಹಿಸಿ ತಮ್ಮ ಹತ್ತಿರ ಬರಮಾಡಿಕೊಂಡರು

**ಕುಶಲಮತಿರದೂರಾದಾಗತೈಸ್ತೈಃ ಸಮೇತ್ಯ**
**ಪ್ರಕೃತಮಿಹ ಮರೀಯಂ ಕಾರ್ಯನಿರ್ವಾಹದಕ್ಷಮ್ ।**
**ಅನುರಹಸಮುಪಸ್ಥಾಯಾಲುಲೋಚೇಽರ್ಥತಂತ್ರಂ**
**ಪುನರಪಿ ಸ ಚ ಶಂಕಾಮಂತರಂಗೇ ತತಾನ ॥** ೩೫

ಸೂಕ್ಷ್ಮ ಬುದ್ಧಿಗಳಾದ ಆ ಕಿರಿಯಸ್ವಾಮಿಗಳು ಹತ್ತಿರದ ಹಳ್ಳಿಗಳಿಂದ ಬಂದಿರುವ ಸಭ್ಯರಾದ **ಶಿಷ್ಯಪ್ರಧಾನರೊಡನೆ** ಏಕಾಂತದಲ್ಲಿ ಸಭೆ ನೇರಿದರು.

ಪ್ರಕೃತ, ಮಠದ ದೈನಂದಿನ ಕಾರ್ಯಗಳ ನಿರ್ವಾಹಕ್ಕೆ ಸಮರ್ಥವಾದ ಅರ್ಥಶಾಸ್ತ್ರ ವನ್ನು ಕುರಿತು ಚರ್ಚೆಮಾಡಿ, ಸಮಾಲೋಚಿಸಿದರು. ಆದರೂ ಮತ್ತೆ ಮತ್ತೆ ಅವರ ಅಂತರಂಗದಲ್ಲಿ ಸಮಾಧಾನವಾಗಲಿಲ್ಲ ಚಿಂತೆಯು ಹೆಚ್ಚಾಗುತ್ತಾ ಬಂದಿತು.

ಮಠಮಧಿನಿವಾಸಾಮು ಪ್ರೌಢವಿದ್ಯಾಂ ಗ್ರಹೀತುಂ
ಮಮಮನುಮಠತಟಿನ್ಯಾಸ್ತೀರಮದ್ಯೈವ ಯಾಮು।
ಯುಗಪದಪರಿಹಾರ್ಯಂ ಕಾರ್ಯ ಮಾರ್ಯೋ ವಿಧಾತುಂ
ದ್ವಿತಯಮಿತಿ ಸ ಚಾಪ್ತದ್ವಿತ್ರಶಿಷ್ಯೇಷು ತಸ್ಥೇ*॥ ೩೬

ಈಗ ಮಠದಲ್ಲಿಯೇ ಉಳಿಯಲೇ ? ಅಥವಾ ಪ್ರೌಢವಿದ್ಯಾರ್ಜನೆಗಾಗಿ ಗಂಗೆಯ ತೀರದಲ್ಲಿರುವ ಕಾಶಿಗೆ ಹೋಗಲೇ ? ಮಠದ ಅಭಿವೃದ್ಧಿಗಾಗಿ ಇಲ್ಲಿ ಉಳಿದರೆ ನಮ್ಮ ವಿದ್ಯಾರ್ಜನೆಗೆ ಕುತ್ತು. ಪ್ರೌಢವಿದ್ಯಾಭ್ಯಾಸಕ್ಕಾಗಿ ದೂರ ಹೋದರೆ ಮಠದ ಅಭಿವೃದ್ಧಿ ಕಾರ್ಯಕ್ಕೆ ಅಡ್ಡಿ ಎರಡು ಕಾರ್ಯಗಳೂ ಏಕಕಾಲದಲ್ಲಿ ಘಟಿಸಿವೆ, ಎರಡೂ ಅವಶ್ಯಕ ಹಾಗೂ ಅಪರಿಹಾರ್ಯಗಳು. ಆದುದರಿಂದ ಇಂತಹ ಸಂದರ್ಭದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದು ತೋರದೇ ಆಚಾರ್ಯರು ಕರ್ತವ್ಯ ನಿರ್ಣಯದ ಬಗ್ಗೆ ತಮ್ಮ ಕೇವಲ ಆಪ್ತರಾದ ಎರಡು ಮೂರು ಶಿಷ್ಯರೊಂದಿಗೆ ಮತ್ತೆ ಸಮಾಲೋಚನೆ ನಡೆಸಿದರು

ನ ಹಿ ವಿಲಸತಿ ಸೇಯಂ ಶರ್ವರೀ ಚಂದ್ರಹೀನಾ
ವಿನಯಗುಣವಿಹೀನಾ ವೈದುಷೀ ಪಂಡಿತಾನಾಮ್।
ನಿಶಿತಶರವಿಹೀನಾ ಚಾತುರೀ ಚಾಪಭಾಜಾಂ
ಗುರುಚರಣವಿಯುಕ್ತಾ ಧರ್ಮಪೀಠಾಲಯಶ್ರೀಃ ॥ ೩೭

ಬಳಿಕ ಶ್ರೀಮಠದ ಕಾರ್ಯನಿರ್ವಾಹಕರ ಸಮಿತಿಯು ಶ್ರೀರಾಘವೇಂದ್ರ ಭಾರತೀ ಸ್ವಾಮಿಗಳನ್ನು ಕುರಿತು - ಗುರುಗಳೇ! ಚಂದ್ರನಿಲ್ಲದ ರಾತ್ರಿ ಶೋಭಿಸುವುದಿಲ್ಲ ವಿನಯಗುಣವಿಲ್ಲದ ವಿದ್ವಾಂಸರ ಪಾಂಡಿತ್ಯ ಚಂದಗಾಣಿಸುವುದಿಲ್ಲ. ಹರಿತವಾದ ಬಾಣಗಳಿಲ್ಲದ ಬಿಲ್ಲುಗಾರರ ಬುದ್ಧಿವಂತಿಕೆಯ ಉಪಾಯವೂ ಕಂಗೊಳಿಸುವುದಿಲ್ಲ. ಪೂಜ್ಯರಾದ ಗುರುವರ್ಯರು ಉಪಸ್ಥಿತರಾಗಿಲ್ಲದ ಧರ್ಮಪೀಠದ ಮಠಾಯತನದ ಪರಿಯೂ ಚೆನ್ನಾಗಿ ತೋರುವುದಿಲ್ಲ.

---

ತಸ್ಥೇ = ಷ್ಠಾ ಗತಿ ನಿವೃತ್ತೌ, ಪ್ರಕಾಶನಸ್ಥೇಯಾಖ್ಯಯೋಶ್ಚ (ಪಾಣಿನಿ ೧-೩-೨೩)
ಇತಿ ಲಿಟಿ ಆತ್ಮನೇ ಪದಮ್

ನ ಖಲು ನ ಖಲು ಕಾಶೀಂ ಯಾಂತು ತಾವದ್ಭವಂತೋ
ಹ್ಯಧಿಮಠಮಪಿ ಸರ್ವಾ ಶಾಸ್ತ್ರಶಿಕ್ಷಾವ್ಯವಸ್ಥಾ ।
ಭವತಿ ಗುರುಸಪರ್ಯಾಸಂಜನಾ ಸಂಜಿತೇಯಂ
ಸಪದಿ ಸಮಿತಿರಿತ್ಥಂ ಪ್ರಾರ್ಥಯಚ್ಚೈಕಕಂಠ್ಯಾತ್ ॥ ೩೮

'ತಾವು ಕಾಶಿಗೆ ಹೋಗಬಾರದು. ಖಂಡಿತ ಹೋಗಬಾರದು. ತಮಗ ಅಪೇಕ್ಷಿತವಾದ ಶಾಸ್ತ್ರಾಭ್ಯಾಸಕ್ಕೆ ಶ್ರೀರಾಮಚಂದ್ರಾಪುರದ ಮಠದಲ್ಲಿಯೇ ತಕ್ಕ ವ್ಯವಸ್ಥೆ ಮಾಡಲಾಗುವುದು. ಈ ಕಾರ್ಯನಿರ್ವಾಹಕ ಸಮಿತಿಯು ಗುರುಗಳ ಸೇವೆಯಲ್ಲಿ ಶ್ರದ್ಧಾಭಕ್ತಿಯನ್ನು ಹೊಂದಿರುವುದಾಗಿದೆ'. ಎಂದು ಐಕಮತ್ಯದಿಂದ ಪ್ರಾರ್ಥಿಸಿತು

ಇತಿ ಸಮಿತಿಕೃತಾಂ ತಾಂ ಪ್ರಾರ್ಥನಾಂ ಸಾರ್ಥಯಿಷ್ಯ-
ನ್ನಪಚಿತಿಮಥ ಲಬ್ಧ್ವಾ ಶಿಷ್ಯಸಂಘೋಪಕ್ಲಪ್ತಾಮ್ ।
ಪರಿಹೃತವಿಶಯಸ್ಸನ್ ರಾಘವೇಂದ್ರಃ ಪ್ರಶಾಂತಃ
ಪ್ರತಿನಿವವೃತ ಅಸ್ಮಾದ್ರಾಮಚಂದ್ರಂ ಪುರಂ ತತ್ ॥ ೩೯

ಹೀಗೆ ಸಮಿತಿಯು ಬೇಡಿಕೆಯನ್ನು ಸಫಲಗೊಳಿಸುವವರಾದ ಶ್ರೀರಾಘವೇಂದ್ರ ಭಾರತೀಗಳು ಶಿಷ್ಯರು ಸೀಮೆಕಡೆಯಿಂದ ಮಾಡಿಸಿದ ಪಾದಪೂಜಾಭಿಕ್ಷಾದಿಗಳನ್ನು ಸ್ವೀಕರಿಸಿದರು. ಬಳಿಕ ಮನಸ್ಸಿನ ಹೊಯ್ದಾಟವನ್ನು ಬಿಟ್ಟ ಕಿರಿಯ ಗುರುಗಳು ಪ್ರಶಾಂತರಾಗಿ ಇಕ್ಕೇರಿಯಿಂದ ಶ್ರೀರಾಮಚಂದ್ರಾಪುರದ ಮಠಕ್ಕೆ ಹಿಂದಿರುಗಿ ಹೋದರು

ತದನು ನಿಜಮಠೋಪಕ್ರಾಂತಶಿಕ್ಷಾಪ್ರಣಾಲೀ
ನ ಚ ಖಲು ಪರಿತೋಷಾಯಾಲಮಾರ್ಯಸ್ಯ ತಸ್ಯ ॥
ಪ್ರವಿರಲಮಕರಂದಸ್ಯಂದಿಪಂಕೇಜವಾಟೀ
ನ ಹಿ ತೃಷಿತಮಿಲಿಂದಸ್ಯಾಪಹನ್ಯಾದುದನ್ಯಾಮ್ ॥ ೪೦

ಅನಂತರ ಶ್ರೀಮಠದಲ್ಲಿ ಏರ್ಪಟ್ಟ ಶಾಸ್ತ್ರಶಿಕ್ಷಾಪ್ರಣಾಲಿಕೆಯು ಆ ಕಿರಿಯ ಗುರುಗಳಾದ ಶ್ರೀ ರಾಘವೇಂದ್ರಭಾರತೀಸ್ವಾಮಿಗಳ ಮನಸ್ಸಿಗೆ ತೃಪ್ತಿಯಾಗಲಿಲ್ಲ ಮಕರಂದದ ಕೆಲವೇ ಹನಿಗಳನ್ನು ಸಿಂಪಡಿಸುವ ಕಮಲಸರೋವರವು ಅತಿಶಯವಾಗಿ ಬಾಯಾರಿಕೆ ಹೊಂದಿದ ದುಂಬಿಯ ಬಾಯಾರಿಕೆಯೆಲ್ಲವನ್ನೂ ಹೋಗಲಾಡಿಸುವುದಿಲ್ಲವಷ್ಟೆ!

ಅಥಿವಧೆವಿಃತ ಏಷ ಪ್ರಸ್ಥಿತೋ ದೇಶಿಕೇಂದ್ರೋ
ವಿವಿಧಜನಪದಾಂಸ್ತಾನಾಂಧ್ರಸೌರಾಷ್ಟ್ರಮುಖ್ಯಾನ್ ।
ಸರಿದುಪವನದುರ್ಗಾನ್ ಗ್ರಾಮಸೀಮಾಃ ಕ್ರಮಿತ್ವಾ
ದ್ರುತತರಮನುಗಂಗಂ ಪ್ರಾಪ ವಾರಾಣಸೀಂ ತಾಮ್ ॥ ೪೧

ಇತ್ತಲಾಗಿ ಮಿತಪರಿವಾರವೊಂದಿಗೆ ಪ್ರಯಾಣ ಹೊರಟಿರುವ ದೊಡ್ಡ ಗುರುಗಳಾದ ಶ್ರೀರಾಮಚಂದ್ರಭಾರತೀಸ್ವಾಮಿಗಳು ದಾರಿಯಲ್ಲಿ ಸಿಕ್ಕುವ, ಆಂಧ್ರ ಸೌರಾಷ್ಟ್ರ ಮುಂತಾದ ವಿವಿಧ ರಾಜ್ಯಗಳನ್ನು ನದಿ ಉದ್ಯಾನ ಗ್ರಾಮಸೀಮೆಗಳನ್ನು ಸಂಚರಿಸುತ್ತಾ ಗಂಗಾನದಿಯ ತೀರದ ಉದ್ದಕ್ಕೂ ಹರಡಿರುವ ಕಾಶಿಗೆ ಬಂದು ಮುಟ್ಟಿದರು

ವಿಮಲಸಲಿಲತುಂಗಾಂ ಗಾಹಮಾನಃ ಸ ಗಂಗಾ-
ಮಭವದಥ ವಿಪಂಕಃ ಕಂಕಣಾಲಂಕೃತಾಂಗಃ ।
ಸಕಲಹೃದಯವಾಸಂ ತ್ಯಕ್ತಕೈಲಾಸವಾಸಂ
ಪ್ರಯತತದಧಿವಾಸಂ ವಿಶ್ವನಾಥಂ ದದರ್ಶ ॥ ೪೨

ತರುವಾಯ ಆ ಗುರುಗಳು ಅಚ್ಚ ಬಿಳಿಯ ನೊರೆ ತೊರೆಗಳಿಂದ ತುಂಬಿ ಎತ್ತರವಾಗಿ ಶೋಭಿಸುತ್ತಿರುವ ಗಂಗೆಯಲ್ಲಿ ಮುಳುಗಿ ಮಿಂದರು ಮುಳುಗಿ ಏಳುವಾಗ ನೀರ ಹನಿಗಳು ಅವರ ಮೈಗೆ ಅಪೂರ್ವ ಶೋಭೆಯನ್ನು ಉಂಟು ಮಾಡಿದವು ಗುರುಗಳು ಕಂಕಣಾಲಂಕೃತಾಂಗರಾದರು (ಕಂಕಣ= ನೀರಹನಿ, ಕಡಗ) ಅವರ ಮೈ ಚೊಕ್ಕಟವಾದಂತೆ ಅವರ ಹೃದಯವೂ ಪರಿಶುದ್ಧವಾಯಿತು. ಬಳಿಕ ಅವರು ಸಕಲಜೀವಿಗಳ ಅಂತರಂಗದಲ್ಲಿ ನೆಲಸಿರುವವನೂ ಕೈಲಾಸನಿವಾಸವನ್ನು ಬಿಟ್ಟು ನಿರ್ಮಲವಾದ ಕಾಶಿಯಲ್ಲಿಯೇ ವಸತಿ ಮಾಡುತ್ತಿರುವವನೂ ಆದ ವಿಶ್ವನಾಥಸ್ವಾಮಿಯನ್ನು ಸಂದರ್ಶಿಸಿದರು.

ಹೃದಯಕಮಲಮಧ್ಯೇ ಶೋಭಮಾನಂ ತಮೀಶಂ
ವಿಗಲದಿತರವೃತ್ತಿಃ ಸ್ವಸ್ವರೂಪಂ ವವಂದೇ ।
ಸ ಕಿಲ ವಿಗತಮಾಯಾಗ್ರಂಥಿರಾನಂದಮೂರ್ತಿಃ
ಕ್ಷಣವಿಹಿತಸಮಾಧಿಃ ಸ್ವೀಚಕಾರಾಥ ಭಿಕ್ಷಾಮ್ ॥ ೪೩

ಅನಂತರ ಶ್ರೀರಾಮಚಂದ್ರಭಾರತೀಸ್ವಾಮಿಗಳು ಹೃದಯಕಮಲದ ನಡುವೆ ಪ್ರಕಾಶಿಸುತ್ತಿರುವ ಶ್ರೀ ಕಾಶೀವಿಶ್ವನಾಥೇಶ್ವರನನ್ನು ದ್ವೈತಬುದ್ಧಿಯಿಲ್ಲದೇ ಸ್ವಸ್ವರೂಪವೆಂದು ಭಾವಿಸಿ ವಂದಿಸಿದರು ಈಶ್ವರನ ಸಂದರ್ಶನದಿಂದ ಅವರಿಗೆ ಸಕಲ ಮಾಯಾಗ್ರಂಥಿಗಳೂ ಕಳಚಿಹೋದವು, ಅವರು ಬಳಿಕ ಸಚ್ಚಿದಾನಂದಾನು-

ಭವಿಗಳಾಗಿ ಕೊಂಚಕಾಲ ಸಮಾಧಿಯೋಗದಲ್ಲಿದ್ದರು ತರುವಾಯ ಬಹಿರ್ಮುಖಿ ರಾಗಿ ಭಿಕ್ಷೆಯನ್ನು ಸ್ವೀಕರಿಸಿದರು

ಬುಧಕುವಲಯಚಂದ್ರೋ ರಾಮಚಂದ್ರೋ ಯತೀಂದ್ರಃ
ಕಿಲ ಪರಿಹೃತತಂದ್ರಸ್ತತ್ರ ವೀರೇಶ್ವರೀಯಮ್ ।
ವಿಮಲಪವನಸಾಂದ್ರಂ ಯೋಜುಷಂ ವೇದಗೇಹಂ
ಕತಿಪಯದಿವಸಾನವ್ಯಧ್ಯವಾತ್ಸೀತ್ ಸ ಕಾಶ್ಯಾಮ್ ॥ ೪೪

ವಿದ್ವಾಂಸರೆಂಬ ಕನ್ನೈದಿಲೆಗಳ ಸರೋವರಕ್ಕೆ ತಂಪೆರೆಯುವ ತಂಗದಿರನೆಂದು ಎನಿಸಿರುವ, ಯತೀಶ್ವರರಾದ ಶ್ರೀರಾಮಚಂದ್ರಭಾರತೀಸ್ವಾಮಿಗಳು ಕಾಶಿಯಲ್ಲಿ ಬೇಸರವಿಲ್ಲದೆ ಉಲ್ಲಾಸದಿಂದ ಇದ್ದರು ಇವರು ಉಳಿದುಕೊಂಡ ವೀರೇಶ್ವರ ಕೃಷ್ಣಯಜುರ್ವೇದದ ಪಾಠಶಾಲೆಯ ಕಟ್ಟಡ ಚೆನ್ನಾಗಿತ್ತು ಆ ಕಟ್ಟಡದಲ್ಲಿ ಗಾಳಿ ಬೆಳಕುಗಳು ಧಾರಾಳವಾಗಿ ಇದ್ದುವು ಇಲ್ಲಿ ಸ್ವಾಮಿಗಳು ಕೆಲವು ಕಾಲ ತಂಗಿದರು.

ಅವಗತಹೃದಯಾರ್ತಿರ್ಧ್ಯಾನಯೋಗಾಭಿರಾಮಃ
ಸ ಚ ಕುಶಲಮುದಂತಂ ಕಂಚಿದಂತೇವಸಂತಮ್ ।
ಸಹೃದಯಮಧಿಕೃತ್ಯ ಸ್ವಸ್ತಿ ಚಾಭಾಷ್ಯ ತಸ್ಮೈ
ವ್ಯಲಿಖದಿತಿ ಸುಬೋಧಂ ದೂತಕಲ್ಪಂ ಸುಪತ್ರಮ್ ॥ ೪೫

ಕಾಶಿಯಲ್ಲಿರುವಾಗ ಗುರುಗಳಿಗೆ ಅಂತರಂಗದ ಶಾಂತಿಯಿತ್ತು ಅವರು ಚಿತ್ತ ವಿಕ್ಷೇಪವನ್ನು ಹೊಂದದ ಪ್ರತಿನಿತ್ಯವೂ ಬ್ರಹ್ಮಚಿಂತನೆಯ ಆನಂದದಲ್ಲಿ ರಮಿಸುತ್ತಿದ್ದರು ಹೀಗಿರಲು ಅವರು ಒಂದು ದಿನ ಉತ್ತರ ಕರ್ನಾಟಕದ ಕೆಕ್ಕಾರುಮಠದ ಹತ್ತಿರ ವಾಸಿಸುತ್ತಿದ್ದ ಸಹೃದಯರಾದ ತಮ್ಮ ಆಪ್ತಶಿಷ್ಯರೊಬ್ಬರಿಗೆ ಹರಸಿ ಪತ್ರ ವೊಂದನ್ನು ಬರೆದರು ಆ ಪತ್ರದ ಒಕ್ಕಣೆ ಸರಳವಾಗಿತ್ತು. ಆ ಪತ್ರ ದೂತನ ಪ್ರತಿನಿಧಿಯಂತಿತ್ತು.

ಗುರುಕುಲಸದೃಶೀ ಯಾ ಸ್ಥಾಪಿತಾ ಸಾಂಗವೇದಾ-
ಧ್ಯಯನಮಭಿಲಷದ್ಭ್ಯೋ ಧಾರ್ಮಿಕೀ ಪಾಠಶಾಲಾ ।
ವಿಲಸತಿ ಕಿಲ ಸಾಲಿಗ್ರಾಮರಾಮಾಭಿಧಾನಾ
ಕವಿಕುಲಬಹುಮಾನ್ಯಾ ಛಾತ್ರವೃಂದೈರುಪಾಸ್ಯಾ ॥ ೪೬

ಕಾಶಿಯಲ್ಲಿ ರಾಮಘಾಟಿನಲ್ಲಿ ಶ್ರೀ ವಲ್ಲಭರಾಮಸಾಲಿಗ್ರಾಮಸಾಂಗವೇದ ವಿದ್ಯಾಲಯವೆಂಬ ಪಾಠಶಾಲೆಯು ಸಾಂಗವೇದ ವಿದ್ಯಾಭ್ಯಾಸಿಗಳಿಗಾಗಿ ತೆರೆಯಲ್ಪ

ಟ್ಟಿವೆ ಇದು ಪ್ರಾಚೀನ ಗುರುಕುಲದ ಮಾದರಿಯದು ಇಲ್ಲಿ ವಿದ್ಯಾರ್ಥಿ ವೃಂದವೂ ನಾಕಷ್ಟು ಇದೆ ಇದು ವಿದ್ವಾಂಸರ ಮನ್ನಣೆಯನ್ನೂ ಪಡೆದಿದೆ.

ಋಷಿರಿವ ಕೃತತೀರ್ಥಃ* ಶಾಸ್ತ್ರವಾರಾಶಿಚಂದ್ರಃ
ಕವಿಸಹೃದಯಮಾನ್ಯೋ ಲಬ್ಧವರ್ಣಪ್ರಕಾಂಡಃ ।
ಗುರುರಿವ ಪುರುವಿದ್ಯಃ ಶ್ರೋತ್ರಿಯೋ ವಾಗ್ಮಿವರ್ಯಃ
ಕುಲಪತಿರತಿದಕ್ಷೋ ಯತ್ರ ರಾಜೇಶ್ವರಾಖ್ಯಃ ॥ ೪೭

ಈ ಸಾಂಗವೇದವಿದ್ಯಾಲಯದಲ್ಲಿ ಪಂಡಿತರಾಜ ಶ್ರೀ ರಾಜೇಶ್ವರಶಾಸ್ತ್ರಿದ್ರಾವಿಡ ಎಂಬುವರು ಕುಲಪತಿಗಳಾಗಿದ್ದಾರೆ ಅವರು ಋಷಿಗಳಂತೆ ಕೃತತೀರ್ಥರು- (ಅಂದರೆ ಸತ್ಯ ಕ್ಷಮೆ, ಇಂದ್ರಿಯಜಯ, ದಯೆ. ಆರ್ಜವ, ದಾನ, ದಮ ಸಂತೋಷ, ಬ್ರಹ್ಮಚರ್ಯ, ಪ್ರಿಯವಾದಿತ್ವ, ಜ್ಞಾನ, ಧೃತಿ ಪುಣ್ಯಗಳೆಂಬ ತೀರ್ಥಗಳನ್ನು (ಸದ್ಗುಣ) ಪಡೆದವರು ) ಮತ್ತು ಅತ್ಯುತ್ತಮರಾದ ಉಪಾಧ್ಯಾಯರು ಅವರು ಶಾಸ್ತ್ರ ಸಮುದ್ರವನ್ನು ಉಕ್ಕೇರಿಸುವ ಚಂದ್ರಮರೂ ಆಗಿದ್ದಾರೆ. ಪಂಡಿತ ಶ್ರೇಷ್ಠರಾದ ಅವರು ಬೃಹಸ್ಪತ್ಯಾಚಾರ್ಯರಂತೆ ಬಹುವಿದ್ಯಾ ಪಾರಂಗತರು ಅವರು ಶ್ರೋತ್ರೀಯರೂ ವಾಗ್ಮಿವರ್ಯರೂ ದಕ್ಷರೂ ಆಗಿರುತ್ತಾರೆ.

ಗಣಪತಿರಿತಿ ಹೆಬ್ಬಾರಾಹ್ವಯಃ ಶಿಷ್ಯಧುರ್ಯೋ
ನಿಶಿತಮತಿರಥಾಸ್ಯಾಚಾರ್ಯವರ್ಯಸ್ಯ ತಸ್ಯ ।
ಸದಸಿ ವಿವದಿಷೂಣಾಂ ತಸ್ಯ ವಾಕ್ಯಾರ್ಥಧಾಟೀ
ವ್ಯತರದಿವ ಸಮಾಧಿಂ ಗೀಷ್ಪತೇಶ್ಚಾಪಿ ಶಾಸ್ತ್ರೇ ॥ ೪೮

ಆಚಾರ್ಯರಾದ ಪಂಡಿತರಾಜ ರಾಜೇಶ್ವರಶಾಸ್ತ್ರಿದ್ರಾವಿಡ ಇವರ ಶಿಷ್ಯಪ್ರಧಾನರೊಳಗೆ ಗಣಪತಿಶಾಸ್ತ್ರಿ ಹೆಬ್ಬಾರ ಎಂಬುವರೂ ಒಬ್ಬರು ಶಾಸ್ತ್ರ ವಿಷಯದಲ್ಲಿ ವಾದಮಾಡಲು ಬಯಸುವ ಪಂಡಿತರ ಸಭೆಯಲ್ಲಿ ಗಣಪತಿಶಾಸ್ತ್ರಿ ಹೆಬ್ಬಾರ ಇವರು ವಾದಿ ಶ್ರೇಷ್ಠರು ಇವರು ಪ್ರತಿವಾದಿ ಭಯಂಕರರೂ ಹೌದು, ಸುರಗುರುವಾದ ಬೃಹಸ್ಪತ್ಯಾಚಾರ್ಯರೇ ಪ್ರತಿವಾದಿಯಾಗಿ ಪೂರ್ವಪಕ್ಷದ ಶಂಕೆಗಳನ್ನು ಎತ್ತಿ ಆಕ್ಷೇಪಿಸಿದರೆ ಅವರ ಶಂಕೆಗಳಿಗೆ ತಕ್ಕ ಸಮಾಧಾನವಿತ್ತು ಅವರನ್ನು ನಿರುತ್ತರವಾಗಿಸುವುದೋ ಎನ್ನುವಂತಿತ್ತು ಗಣಪತಿಶಾಸ್ತ್ರಿ ಹೆಬ್ಬಾರ ಇವರ ಶಾಸ್ತ್ರ ವಾಕ್ಯಾರ್ಥದಲ್ಲಿನ ವಾಕ್‌ಚಾತುರ್ಯವು.

---

* ಅನುಬಂಧವನ್ನು ನೋಡಿ-3

ಗುರುಗಣಪತಿಹೆಬ್ಬಾರಾಹ್ವಯಸ್ಯ ದ್ವಿಜಾತೇ-
ರಹಮಹಮಿಕಯೈವಾಯಾತ್ಯಂತಿಕಂ ತಸ್ಯ ನಿತ್ಯಮ್ ।
ಪಠಿತುಮಿಹ ಕಣಾದೋಪಜ್ಞ ಪಾಣಿನ್ಯುಪಜ್ಞ-
ಪ್ರಭೃತಿ ನಿಖಿಲಶಾಸ್ತ್ರಾಣ್ಯತ್ರ ವಿದ್ಯಾರ್ಥಿಲೋಕಃ ॥ ೪೯

ನ್ಯಾಯ, ವೈಶೇಷಿಕ, ಪಾಣಿನೀಯವ್ಯಾಕರಣ ಮೊದಲಾದ ಎಲ್ಲಾ ಶಾಸ್ತ್ರಗಳನ್ನೂ ಓದುವುದಕ್ಕಾಗಿ ವಿದ್ಯಾರ್ಥಿಗಳ ವೃಂದವು ಬ್ರಾಹ್ಮಣರೂ ಗುರುಗಳೂ ಆದ ಗಣಪತಿಶಾಸ್ತ್ರಿ ಹೆಬ್ಬಾರ ಇವರ ಹತ್ತಿರ ಪ್ರತಿ ದಿನವೂ ತಾನು ಮುಂದ ತಾನು ಮುಂದೆ ಎಂದು ಬರುತ್ತಿರುತ್ತದೆ.

ಪ್ರಕಥನಗುಣಶೀಲಾ ವಿಶ್ವಸಂಚಾರಿಣೀ ಸಾ
ಪ್ರಚುರಗುಣಗರಿಮ್ಣಾ ಪ್ರೀಯಮಾಣೇವ ವಾಣೀ ।
ಕ್ವಚಿದಪಿ ವಸತಾಂ ನಃ ಕರ್ಣಮೂಲಂ ಪ್ರವಿಶ್ಯ
ಹ್ಯಕಥಯದಿವ ಚೈತತ್ಪಾರಶಾಲಾ ಮಹತ್ತ್ವಮ್ ॥ ೫೦

ಜಗತ್ತನ್ನು ಸುತ್ತುವ, ಮಾತುಗಾರ್ತಿಯಾದ ಆ ಸರಸ್ವತಿಯು ಈ ಸಾಂಗವೇದ ವಿದ್ಯಾಲಯದ ಪ್ರಸಿದ್ಧವಾದ ಗುಣಗಳ ಗರಿಮೆಯಿಂದ ಪ್ರೀತಳಾದವಳೋ ಎಂಬಂತೆ ಕಾಶಿಯಲ್ಲಿ ಎಲ್ಲಿಯೋ ಒಂದೆಡೆ ವಾಸಿಸುತ್ತಿರುವ ನಮ್ಮ ಹತ್ತಿರ ಬಂದು ಕಿವಿಯಲ್ಲಿ ಈ ಪಾರಶಾಲೆಯ ಮಹತ್ತನ್ನು ಹೇಳಿದಳು

ಹತಕಲಿಕೃತ ದೋಷಾದ್ವೈದಿಕಃ ಸಂಪ್ರದಾಯಃ
ಕಲುಷಿತ ಇತರತ್ರ ಪ್ರಾಯಶಃ ಕಿಂತು ಚಾತ್ರ ।
ವಿಮಲಮಖಿಲಶಾಸ್ತ್ರಾಧ್ಯಾಪನಂ ಸಂಪ್ರದಾಯ-
ಕ್ರಮಿಕಮಿತಿ ಯದೇತನ್ಮಾನಸಂ ನೋ ಧಿನೋತಿ ॥ ೫೧

ಈಗ ಬಹುಶಃ ವೈದಿಕಪ್ರಾಚೀನಗುರುಕುಲಸಂಪ್ರದಾಯವು ಹಾಳಾದ ಕಲಿಪುರುಷನ ದೋಷದಿಂದ ಇತರ ವಿದ್ಯಾಲಯಗಳಲ್ಲಿ ಅಪರಿಶುದ್ಧವಾಗಿದೆ ಆದರೆ ಈ ಸಾಂಗವೇದವಿದ್ಯಾಲಯದಲ್ಲಿ ಎಲ್ಲಾ ಶಾಸ್ತ್ರಾಧ್ಯಾಪನವಿಧಾನವೂ ನಮ್ಮ ಪ್ರಾಚೀನ ಸಂಪ್ರದಾಯದ ಪರಂಪರೆಗೆ ಅನುಸಾರವಾಗಿ ಇದ್ದು, ಪರಿಶುದ್ಧವಾಗಿದೆ ಆದುದರಿಂದ ಇಲ್ಲಿನ ಅಧ್ಯಾಪನವು ನಮ್ಮ ಮನಸ್ಸಿಗೆ ಅತಿಶಯವಾದ ಪ್ರೀತಿಯನ್ನು ಉಂಟುಮಾಡಿದೆ.

ತದನುಮಿಹ ಯಮಾಕಸ್ಮದ್ರಾಮಚಂದ್ರಾರ್ಯಪೀಠಾ–
ಧಿಕೃದಭಿನವಶಿಷ್ಯೋ ಭಾರತೀ ರಾಘವೇಂದ್ರಃ ।
ಶುಭಮತಿರಧಿಕಾಶ್ಯಧ್ಯೇತು ಸರ್ವಾಣಿಶಾಸ್ತ್ರಾ–
ಣ್ಯಭಿನರತು ಯದಿಸ್ಯಾದೈಕಮತ್ಯಂ ಸಮಿತ್ಯಾಃ ॥ ೫೨

'ನಮ್ಮ ಮಠದ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರು ಒಪ್ಪಿಗೆ ನೀಡುವ ಪಕ್ಷಕ್ಕೆ ನಮ್ಮ ಮಠದ ಉತ್ತರಾಧಿಕಾರಿಗಳೂ, ತರುಣರೂ, ಮಂಗಳಮತಿಯುವರೂ ನಮ್ಮ ಶಿಷ್ಯರೂ ಆಗಿರುವ ಕಿರಿಯ ಗುರುಗಳಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಕಾಶಿಯಲ್ಲಿ ಈ ವಿದ್ಯಾಲಯದಲ್ಲಿ ಎಲ್ಲಾ ಶಾಸ್ತ್ರಗಳನ್ನೂ ಕಲಿಯಲಿ" ಎಂದು ಬರೆದಿದ್ದರು

ಗುರುರಥ ಸ ಕದಾಚಿತ್ ಕೇನಚಿಚ್ಚಾಗತೇನ ।
ಪ್ರಣತಿವಿನಯಭಾಜಾ ಚಾಪ್ತಶಿಷ್ಯೇಣ ದತ್ತಮ್
ಅದಧತ ಗುರುವರ್ಯ್ಯಾದ್ರಾಮಚಂದ್ರಾಚ್ಚ ಕಾಶ್ಯಾಃ
ಪ್ರಣಿಹಿತಮುಧಿಮುದ್ರಂ ಲೇಖನಂ ರಾಘವೇಂದ್ರಃ ॥ ೫೩

ಇತ್ತಲಾಗಿ ಯಾವುದೋ ಒಂದು ಸಲ ಯಾರೋ ಒಬ್ಬ ಮಠದ ಆಪ್ತ ಶಿಷ್ಯರು ಶ್ರೀರಾಮಚಂದ್ರಾಪುರದ ಮಠಕ್ಕೆ ಬಂದರು, ಕಿರಿಯ ಗುರುಗಳಾದ ಶ್ರೀ ರಾಘವೇಂದ್ರ ಭಾರತೀಗಳಿಗೆ ಭಕ್ತಿಶ್ರದ್ಧೆಯಿಂದ ಪ್ರಣಾಮಮಾಡಿದರು ದೊಡ್ಡ ಗುರುಗಳು ಕಾಶಿಯಿಂದ ಕಳುಹಿಸಿದ್ದ ಮಠದ ಮುದ್ರೆಯಿರುವ ಅಂಟುಹಾಕಿ ಮುಚ್ಚಿದ ಕವರಿನ ಪತ್ರವೊಂದನ್ನು ಅವರಿಗೆ ಕೊಟ್ಟರು.

ಸ ಚ ವಿದಿತಯಥಾರ್ಥಃ ಸ್ವಾಶಯಸ್ಯಾನುರೂಪಂ
ತದಿತಿ ಮನಸಿ ಕೃತ್ವಾ ಮೌನ ಮಾಸ್ಥಾಯ ತಸ್ಥೌ ।
ಅವಗತಮಿವ ತಸ್ಯ ಪ್ರಾತರರ್ಕಾಂಶುಭಿನ್ನಾಂ –
ಬುಜದಳರುಚಿನಾ ತಚ್ಚಕ್ಷುಷಾ ಪಾರಿಷದ್ಯೈಃ ॥ ೫೪

ಅನಂತರ ಗುರುಗಳು ಪತ್ರದ ಕವರನ್ನು ಒಡೆದು ಪತ್ರವನ್ನು ಮಾನಸಿಕವಾಗಿ ವಾಚಿಸಿ, ಅದರ ಅಭಿಪ್ರಾಯವು ತಮ್ಮ ಆಶಯಕ್ಕೆ ಅನುಗುಣವಾಗಿಯೇ ಇರುವುದನ್ನು ನಿಶ್ಚಯಿಸಿ ಸುಮ್ಮನೆ ಪೀಠದಲ್ಲಿ ಮಂಡಿಸಿದ್ದರು ಆದರೂ ಅಂದಿನ ಸಭೆಯಲ್ಲಿ ಇದ್ದ ಸಭಾಸದರು ಬೆಳಿಗ್ಗೆ ಸೂರ್ಯಕಿರಣಸಂಪರ್ಕದಿಂದ ಅರಳಿದ ಕಮಲದ ದಳದ ಎಸಳಿನ ಕಾಂತಿಯಂತಿರುವ ಗುರುಗಳ ಕಣ್ಣುಗಳಿಂದ ಪತ್ರದ ಸಂಗತಿ ಕಯು ಗುರುಗಳಿಗೆ ಹರ್ಷದಾಯಕವಾಗಿದೆ ಎಂಬ ಇಂಗಿತವನ್ನು ತಿಳಿದಿರಬಹುದು.

ಜಗದುರಪಿ ಚ ಸೂಕ್ಷ್ಮಗ್ರಾಹಿಣಸ್ತೇ ಸದಸ್ಯಾಃ
ಸಮಿತಿರಿಹ ವಿಧತ್ತಾಂ ಚಾರ್ಥಿಕಂ ಚಾನುಕೂಲ್ಯಮ್ ।
ಕಿಯದಭಿಲಷಿತಂ ಸ್ಯಾದ್ಯಂತು ಕಾಶೀಂ ಭವಂತೋ
ಗುರವ ಇತಿ ತತೋಽಸೌ ತತ್ವರೇ ಬೇಲಿಕೇಂದ್ರಃ ॥ ೫೫

ಅನಂತರ ಸೂಕ್ಷ್ಮಗ್ರಾಹಿಗಳಾದ ಮಠದ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರು ಸ್ವಾಮಿಗಳನ್ನು ಕುರಿತು. ಗುರುಗಳೇ! ತಾವು ಪ್ರೌಢಶಾಸ್ತ್ರ ವಿದ್ಯಾಭ್ಯಾಸಕ್ಕಾಗಿ ಕಾಶಿಗೆ ಹೋಗಬಹುದು. ತಮಗೆ ಬೇಕಾದ ದ್ರವ್ಯಾನುಕೂಲ್ಯವನ್ನು ಸಮಿತಿಯು ಏರ್ಪಡಿಸಲಿ ಎಂದು ಬಿನ್ನವಿಸಿದರು ಬಳಿಕ ಗುರುವರ್ಯರಾದ ಶ್ರೀ ರಾಘವೇಂದ್ರಭಾರತೀಗಳು ಕಾಶಿಯ ಪ್ರಯಾಣದ ಸಿದ್ಧತೆಗಾಗಿ ತ್ವರೆಮಾಡಿದರು

ವಸುರಸವಸುಚಂದ್ರಖ್ಯಾಪಿತೇ ಪಾರ್ಥಿವೇಽಬ್ದೇ
ವಿಕಸಿತಮುಖಚಂದ್ರಃ ಫಾಲ್ಗುನೇ ಮಾಸಿ ಕೃಷ್ಣೇ ।
ಸಹೃದಯ ಹೊಸಬಾಳೇಸುಬ್ಬರಾಯೇಣ ಕಾಶೀಂ
ತ್ರಿಚತುರಪರಿವಾರಃ ಸಾಕಮಾಯೋರ್ಗ ಡುಢೌಕೇ ॥ ೫೬

ಶಾಲೀವಾಹನಶಕ ೧೮೬೮ ನೆಯ ಪಾರ್ಥಿವ ಸಂವತ್ಸರದ ಫಾಲ್ಗುಣ ಬಹುಳದಲ್ಲಿ ಅಂದರೆ ೧೯೪೬ ನೆಯ ಏಪ್ರಿಲ್ ಮಾಹೆಯಂದು ಹರ್ಷಗೊಂಡ ಕಿರಿಯ ಗುರುಗಳು ಸಜ್ಜನರಾದ ಹೊಸಬಾಳೆ ಸುಬ್ಬರಾಯರೊಡನೆ ಮೂರೋ ನಾಲ್ಕೋ ಪರಿಚಾರಕರನ್ನು ಕೂಡಿಕೊಂಡು ಕಾಶಿಗೆ ಪ್ರಯಾಣ ಮಾಡಿದರು,

ಜನನ ಮರಣಚಕ್ರವ್ಯೂಹಸನ್ನದ್ಧ ಚಿತ್ತಾ-
ನಮೃತಸಲಿಲಸೇಕಾನ್ಮೋಚಯಂತೀ ಮುಮುಕ್ಷೂನ್ ।
ಅಯಮನುದಿನಮಾರಾದ್ಯೋಜಯಂತೀ ಚ ವಿಷ್ಣೋಃ
ಪದಮನುಪದಮಾಪದ್ಯಾಜಯತ್ಯಾಪಗಾಂ ತಾಮ್ ॥ ೫೭

ಯಾವಳು ಹುಟ್ಟು ಸಾವುಗಳೆಂಬ ಚಕ್ರಗಳ ಸಮೂಹದೊಳಗೆ ಸಿಕ್ಕಿಕೊಂಡ ಚಿತ್ತವುಳ್ಳ ಮುಮುಕ್ಷುಗಳನ್ನು ಪ್ರತಿದಿವಸವೂ ತನ್ನ ಅಮೃತಮಯವಾದ ನೀರೆರಚಿ ಬಂಧನದಿಂದ ಬಿಡಿಸುತ್ತಾ ದೂರದಲ್ಲಿರುವ ವಿಷ್ಣುಪದಕ್ಕೆ ಅಂದರೆ ಮೋಕ್ಷಕ್ಕೆ ಸೇರಿಸುತ್ತಾ ಸರ್ವೋತ್ಕರ್ಷದಿಂದ ಶೋಭಿಸುವಳೋ ಆ ಭಾಗೀರಥೀ ನದಿಯ ತೀರಕ್ಕೆ ಗುರುಗಳು ಬಂದು ತಲುಪಿದರು.

**ನಿಯಮಿತ ನಿಯಮಿತದುಷ್ಕರ್ಮಶಯಾನಾಂ ಲವಿತ್ರೀಂ**
**ಭವಜಲನಿಧಿಮೋಹಾವರ್ತನಾನಾಂ ನಿಹಂತ್ರೀಮ್ ।**
**ಪರಮಪುರುಷಸಾಕ್ಷಾತ್ಕಾರಮಾಪೂರಯಿತ್ರೀಂ**
**ಗುರುರಯಮಧಿಕಾಶೀಂ ಪಾವನೀಂ ಸಂದದರ್ಶ ॥** ೫೮

ಆಮೇಲೆ ಪರಮ ಪವಿತ್ರವಾದ ಕಾಶೀಕ್ಷೇತ್ರದ ಸಂದರ್ಶನ ಮಾಡಿದರು. ಕಾಶಿಯು ಪುಣ್ಯಕ್ಷೇತ್ರ ತಮ್ಮ ತಮ್ಮ ಅದೃಷ್ಟವಿಶೇಷದಿಂದ ಜೀವಿಗಳು ಅವಶ್ಯ ಅನುಭವಿಸಲೇಬೇಕಾದ ಪ್ರಾರಬ್ಧದುಷ್ಕರ್ಮಗಳ ದುಸ್ಸಂಸ್ಕಾರಗಳನ್ನು ಕಾಶೀನಿವಾಸವು ಹೋಗಲಾಡಿಸುತ್ತದೆ ಅದು ಸಂಸಾರಸಾಗರದ ಸುಳಿಗಳಾದ ಪುತ್ರ ಮಿತ್ರರ ಕಲತ್ರಗಳ ಮೇಲಣ ಮೋಹದ ಸುಳಿಯಿಂದ ಜೀವಿಗಳನ್ನು ಬಿಡಿಸಿ ಕಾಪಾಡುವುದು. ಬ್ರಹ್ಮಸಾಕ್ಷಾತ್ಕಾರದ ಆನಂದಪೂರದ ಪೂರ್ಣಾನುಭವವು ಕಾಶಿಯವಾಸದಿಂದ ಲಭಿಸುವುದು. ಆದುದರಿಂದ ಕಾಶಿಯು ಪಾವನವಾಗಿದೆ

**ವಿಷಮವಿಷಯವಲ್ಲೀವಲ್ಲವಾಘ್ರಾಣಮೂರ್ಛಾ-**
**ವಿಕಲಗತಿಚಿಕಿತ್ಸಾವಿಜ್ಞಮವ್ಯಾಜಬಂಧುಮ್ ।**
**ತ್ರಿಭುವನಗುರುಮೀಶಂ ಸರ್ವಗಂ ಶಂಭುಮೀಡ್ಯಂ**
**ತ್ರಿಪುರಹರಮುಮೇಶಂ ವಿಶ್ವನಾಥಂ ನನಾಮ ॥** ೫೯

ಅನಂತರ ಶ್ರೀ ರಾಘವೇಂದ್ರಭಾರತೀಗಳು ಕಾಶಿಯ ವಿಶ್ವೇಶ್ವರಸ್ವಾಮಿಯ ದರ್ಶನಮಾಡಿ ಸ್ವಾಮಿಗೆ ವಂದಿಸಿದರು ಶ್ರೀ ವಿಶ್ವೇಶ್ವರನು ಎಲ್ಲರಿಗೂ ಅವ್ಯಾಜ ಬಂಧು ಅವನು ದುಷ್ಪರಿಣಾಮಕಾರಿಗಳಾದ ಇಂದ್ರಿಯಸುಖಗಳೆಂಬ ವಿಷದ ಬಳ್ಳಿಗಳ ಗಾಳಿಯನ್ನು ಸೇವಿಸಿ ಎಚ್ಚರತಪ್ಪಿಬುದ್ಧಿಗೆಟ್ಟಿರುವ ರೋಗಿಗಳಿಗೆ ಕೂಡಲೇ ಮದ್ದುಕೊಟ್ಟು ಚಿಕಿತ್ಸೆ ಮಾಡುವುದರಲ್ಲಿ ನಿಪುಣನಾದ ಭವರೋಗವೈದ್ಯ. ಅಣಿಮಾದಿ ಐಶ್ವರ್ಯಗಳು ಇವನ ಅಧೀನ. ಸರ್ವತ್ರ ವ್ಯಾಪಕನಾದ ಅವನು ಮೂರು ಲೋಕದ ಗುರು. ಮಂಗಳಮಯನೂ ತ್ರಿಪುರಸಂಹಾರಿಯೂ ಆದ ಅವನು ಉಮಾರಮಣನೂ ಸ್ತುತ್ಯನೂ ಆಗಿರುತ್ತಾನೆ.

**ಉದವಸಿತಮುಪೇತ್ಯಾಚಾರ್ಯವರ್ಯಸ್ಯ ತಸ್ಯ**
**ಪ್ರಯತಚರಣಯುಗ್ಮಂ ಪ್ರಾಣಮದ್ರಾಘವೇಂದ್ರಃ ।**
**ಗುರುರಪಿ ನಿಜಶಿಷ್ಯಸ್ಯೋತ್ತಮಾಂಗೇಽಸ್ಯ ಪಾತ್ರೈ-**
**ರಕಚಯದಿವ ಭೂಯೋ ಯೋಗಪಟ್ಟಾಭಿಷೇಕಮ್ ॥** ೬೦

ದೇವರ ದರ್ಶನ ಮಾಡಿದಬಳಿಕ ಶ್ರೀ ರಾಘವೇಂದ್ರಭಾರತೀಗಳು ಹಿರಿಯ ಗುರುಗಳಾದ ಶ್ರೀ ರಾಮಚಂದ್ರಭಾರತೀಗಳು ಇಳಿದುಕೊಂಡಿದ್ದ ಮನೆಗೆ ಹೋದರು ಅಲ್ಲಿ ಅವರು ಪರಿಶುದ್ಧವಾದ ಗುರುಗಳ ಪಾದಗಳಿಗೆ ವಿಧಿವತ್ತಾಗಿ ದೀರ್ಘದಂಡ ಪ್ರಣಾಮವನ್ನು ಸಲ್ಲಿಸಿದರು. ಶಿಷ್ಯವತ್ಸಲರಾದ ಗುರುಗಳು ತಮ್ಮ ಶಿಷ್ಯನ ಶಿರಸ್ಸಿನ ಮೇಲೆ ತಮ್ಮ ಕಣ್ಣುಗಳಿಂದ ಧಾರಾಕಾರವಾಗಿ ಸೋರುತ್ತಿರುವ ಆನಂದಬಾಷ್ಪಗಳಿಂದ ಮತ್ತೆ ಯೋಗ ಪಟ್ಟಾಭಿಷೇಕವನ್ನು ಮಾಡಿದರೋ ಎನ್ನುವಂತೆ ಇತ್ತು.

**ಗುರುರಯಮುಪಲಭ್ಯಾಚಾರ್ಯಪಾದಾಭ್ಯನುಜ್ಞಾಂ**
**ನ್ಯವಸದಿತರವೀಥ್ಯಾಂ ಸ್ವಾನುಕೂಲೇ ನಿಕಾಯೇ ।**
**ಪರಿಚರಣಚಣೇನಾಪ್ಯತ್ರ ವೆಂಕಪ್ಪ ಭಟ್ಟ-**
**ಪ್ರಭೃತಿ ನಿಜಜನೇನಾಯೋಜಿತಾಧ್ಯಾತ್ಮಕೃತ್ಯಃ ॥** ೬೧

ತರುವಾಯ ಕಿರಿಯಗುರುಗಳು ದೊಡ್ಡಗುರುಗಳ ಅಪ್ಪಣೆಪಡೆದು ಕಾಶಿಯ ಬೇರೆ ಗಲ್ಲಿಯಲ್ಲಿ ತಮಗೆ ಅನುಕೂಲವಾದ ಕಟ್ಟಡವೊಂದರಲ್ಲಿ ತಂಗಿದರು ದೊಡ್ಡವರ ಸೇವೆಯಿಂದ ಖ್ಯಾತಿಪಡೆದಿದ್ದ ಗುರುಗಳ ಆಗಮನಕ್ಕೆ ಪೂರ್ವದಲ್ಲಿಯೇ ಕಾಶಿಯಲ್ಲಿ ನೆಲಸಿದ್ದ ನಾಗರ ತಾಲ್ಲೂಕಿನ ಕಲಸೆ ಗ್ರಾಮದ ಶ್ರೀ ವೆಂಕಪ್ಪಭಟ್ಟರೆಂಬ ಬ್ರಹ್ಮಚಾರಿಯೇ ಮುಂತಾದ ಪರಿಜನರು ಗುರುಗಳಿಗೆ ಸ್ನಾನ ಧ್ಯಾನಾದಿ ಕಾರ್ಯಗಳಿಗೆ ಅಣಿಮಾಡಿಕೊಟ್ಟು ಸಹಕರಿಸುತ್ತಿದ್ದರು

**ಅಥ ಯತಿಕುಲಚಂದ್ರೋ ರಾಮಚಂದ್ರಾಹ್ವಭಾರ-**
**ತ್ಯಪಿ ಕಿಲ ವಿಹಿತೋದ್ಗೀಥಾದಿ* ಜಪ್ತ್ವಾ ಯಥೇಚ್ಛಮ್ ।**
**ದಿಶಿ ದಿಶಿ ಕೃತದೀಪ್ತಿಃ ಶ್ರಾಂತವಾಹೋ ದಿನಾಂತೇ**
**ಹರಿರಿವ ವಿನಿವೃತ್ತೋ ವಾರಣಾಸ್ಯಾಃx ಸ್ವಧಾಮ ॥** ೬೨

ಇತ್ತ ಯತಿ ಕುಲಚಂದ್ರರೂ ದೊಡ್ಡಗುರುಗಳೂ ಆದ ಶ್ರೀ ರಾಮಚಂದ್ರ ಭಾರತೀ ಸ್ವಾಮಿಗಳು ಶಾಸ್ತ್ರವಿಹಿತವಾದ ಪ್ರಣವವೇ ಮುಂತಾದುವನ್ನು ಕಾಶಿಯಲ್ಲಿ ಯಥೇಚ್ಛವಾಗಿ ಜಪಿಸಿದರು ಬಳಿಕ ತೇಜಸ್ವಿಗಳಾದ ಅವರು ಸೂರ್ಯನು ಬೆಳಗಿನಿಂದ ಸಂಜೆಯತನಕ ದಿಕ್ಕು ದಿಕ್ಕುಗಳಲ್ಲಿ ಬೆಳಗಿ ವಾಹನವು ದಣಿಯಲು ತನ್ನ ಸಂಚಾರವನ್ನು ನಿಲ್ಲಿಸಿ ಹಿಂದಿರುಗುವಂತೆ ಕಾಶಿಯಿಂದ ಕರ್ನಾಟಕದ ಹೊನ್ನಾವರದ ಬಳಿಯಿರುವ ಕೆಕ್ಕಾರು ರಾಮಚಂದ್ರಾಪುರದ ಮಠಕ್ಕೆ ಮರಳಿದರು.

* ಉದ್ಗೀಥಾದಿ ಉಪಾಸನಾ = ಪ್ರಣವಾದಿ ಜಪಾನುಷ್ಠಾನ

x ವಾರಾಣಸೀತ್ಯಪಿಪ್ರೋಕ್ತಾ ವಾರಣಾಸೀ ವರಾಣಸೀ(ಶಬ್ದಾರ್ಥಕಲ್ಪದ್ರುಮಃ)

ವರಿಕರ ಕೃತಶೋಭಾ ರಾಮಘಟ್ಟೇ ಸ್ಥಿತಾ ಯಾ
ಗುರುಭಿರುಷಿತಪೂರ್ವಾ ಯೋಜುಷೀ ವಾರಶಾಲಾ ।
ಯದಹನಿ ವಿಶೀರ್ಣಾ ದೇಶಿಕೇಂದ್ರೇಣ ತಾವ-
ತ್ತದಹನಿ ಮುದಿತಸ್ತಾಂ ರಾಘವೇಂದ್ರೋಽಧ್ಯವಾತ್ಸೀತ್ ॥ ೬೩

ಇತ್ತ ಶ್ರೀ ರಾಘವೇಂದ್ರ ಭಾರತೀಗಳು ಹಿಂದೆ ದೊಡ್ಡ ಗುರುಗಳು ವಾಸಿಸುತ್ತಿದ್ದ ರಾಮಘಟ್ಟದಲ್ಲಿರುವ, ದಿಬ್ಬಕಟ್ಟು ಸಲಕರಣೆಗಳಿಂದ ಮನೋಹರವಾದ ವೀರೇಶ್ವರಕೃಷ್ಣಯಜುರ್ವೇದವಾರಶಾಲೆಯ ಕಟ್ಟಡಕ್ಕೆ ದೊಡ್ಡಗುರುಗಳು ಬಿಟ್ಟು ಹೋದ ದಿನವೇ ಬಂದು ವಾಸಿಸಿದರು.

ಗುರುವಿರಹಸಮುತ್ಥೋ ರಾಘವೇಂದ್ರಸ್ಯ ಕಾಶ್ಯಾ-
ಮುಭವದತಿಮನೋವೈಕ್ಲವ್ಯಹೇತುರ್ನ ಶೋಕಃ ।
ಯಮಯತಿ ಹಿ ಬುಧಾನಾಂ ಸ್ವಾತಿಕೀ ಚಿತ್ತವೃತ್ತಿಃ
ಪರಿಧೃತಕೃತಿನಿರ್ವಾಹಸ್ಯ ವಿಕ್ಷೇಪಹೇತೂನ್ ॥ ೬೪

ಕಾಶಿಯಲ್ಲಿರುವ ಶ್ರೀರಾಘವೇಂದ್ರಭಾರತೀ ಸ್ವಾಮಿಗಳಿಗೆ ತಮ್ಮ ಗುರುಗಳು ಕಾಶಿಯಿಂದ ಹಿಂದಿರುಗಿ ಹೋದ ಅಗಲಿಕೆಯು ಹೆಚ್ಚಿನ ಮನೋವೈಕ್ಲವ್ಯಕ್ಕೆ ಕಾರಣ ವಾಗಲಿಲ್ಲ ಏಕೆಂದರೆ, ವಿದ್ವಾಂಸರ ಮನೋಧರ್ಮವು ತಾವು ನಿಶ್ಚಯಿಸಿದ ಉದ್ದಿಷ್ಟಕಾರ್ಯದ ನಿರ್ವಹಣೆಗೆ ಅಡ್ಡಿಯಾಗುವಕಾರಣ ಸಾಮಗ್ರಿಯನ್ನು ತಡೆಯ ಬಲ್ಲುದಷ್ಟೆ

ಅನಲಸಮತಿರಾರ್ಯಶ್ಚಾಥಿಗಂಗಂ ವಿಗಾಹ್ಯ
ತ್ರಿಷವಣವಿಧಿನಾಜಂ ರಾಘವಂ ಧ್ಯಾಯತಿ ಸ್ಮ ।
ಸಮಯಕೃತವಿವೇಕಸ್ತತ್ತದಭ್ಯಾಸಯೋಗೈ-
ರತನುತ ಯತಿಧರ್ಮಂ ರಾಘವೇಂದ್ರಃ ಸುಧೀಂದ್ರಃ ॥ ೬೫

ಸುಧೀಂದ್ರರಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಆಲಸ್ಯಗೊಳ್ಳದ ಪ್ರತಿ ದಿವಸವೂ ಬೆಳಿಗ್ಗೆ ಮಧ್ಯಾಹ್ನ ಸಂಜೆ ಈ ಮೂರುಹೊತ್ತು ಶಾಸ್ತ್ರೋಕ್ತ ಮಾರ್ಗದಂತೆ ಗಂಗೆಯಲ್ಲಿ ಅವಗಾಹನಮಾಡಿ ಜನ್ಮವರ್ಜಿತನಾದ ಶ್ರೀರಾಮನನ್ನು ಧ್ಯಾನಿಸುತ್ತಿದ್ದರು, ಇವರು ವೇಳೆಯನ್ನು ವೃಥಾ ಕಳೆಯದೆ ಜಾಗರೂಕರಾಗಿ ಸಂನ್ಯಾಸ ಧರ್ಮವಾದ ಬ್ರಹ್ಮೋಪಾಸನೆಯನ್ನು ಚಿರಕಾಲದ ಧ್ಯಾನದಿಂದುಂಟಾದ ಚಿತ್ತೈಕಾಗ್ರತೆಯಿಂದ ವಿಸ್ತರಿಸುತ್ತಿದ್ದರು.

ವ್ಯತಿಷಜತಿ ಪದಾರ್ಥಾನಾಂತರಃ ಕೋಽಪಿ ಹೇತು-
ರ್ನ ಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೇ ।
ಇತಿ ಕವಿವಚಸೇವ ಪ್ರಾಕ್ ದ್ರವೀಭೂತ ಚಿತ್ತ-
ಸ್ತ್ವವಿಶದಥ ಸ ಸಾಂಗಾಮ್ನಾಯ ವಿದ್ಯಾಲಯಂ ತಮ್ ॥ ೬೬

ಲೋಕದಲ್ಲಿ ಅಂತರಂಗಿತವಾದ ಯಾವುದೋ ಕಾರಣವು ವ್ಯಕ್ತಿಗಳನ್ನು ಅನ್ಯೋನ್ಯವಾಗಿ ಸೇರಿಸುತ್ತದೆ. "ಸ್ನೇಹವು ಹೊರಗಣ ಕಾರಣಸಾಮಗ್ರಿಗಳನ್ನು ಆಶ್ರಯಿಸುವುದಿಲ್ಲ" ಎಂಬ ಕವಿಯ ಮಾತಿನಿಂದಲೋ ಎಂಬಂತೆ ಕಿರಿಯ ಗುರುಗಳು ವೇದವಿದ್ಯಾಲಯದ ಮೇಲಣ ಸ್ನೇಹದಿಂದ ಮನಸ್ಸು ಕರಗಿದವರಾಗಿ ಹಿಂದೆ ಹೇಳಿದ ಸಾಂಗವೇದ ವಿದ್ಯಾಲಯದ ಒಳಹೊಕ್ಕರು.

ಗಣಪತಿರಿತಿವಿಜ್ಞಃ ಶಾಸ್ತ್ರಿಹೆಬ್ಬಾರುಪಾಹ್ವಃ
ಕುಲಪತಿರತಿದಕ್ಷೋ ದಾಕ್ಷಿಣಾತ್ಯಸ್ತಮೇನಮ್ ।
ಪ್ರತಿನಿಧಿರಿತಿ ಭಕ್ತ್ಯಾ ಶಂಕರಾಚಾರ್ಯಪೀಠೇ
ಯತಿಪತಿರಿತಿ ಬುದ್ಧ್ವಾ ಸ್ವಾಗತಾರ್ಚಾಂ ಚಕಾರ ॥ ೬೭

ಅಲ್ಲಿ ಆಚಾರ್ಯಮುಖ್ಯರು ದಾಕ್ಷಿಣಾತ್ಯರೂ ದಕ್ಷರೂ ಆದ ಪಂಡಿತ ಗಣಪತಿ ಶಾಸ್ತ್ರಿ ಹೆಬ್ಬಾರ ಎಂಬುವವರಿದ್ದರು. ಇವರನ್ನು ಕಂಡು ಶ್ರೀಶಂಕರಾಚಾರ್ಯರ ಪೀಠದ ಆಚಾರ್ಯರೆಂದು ತಿಳಿದು ಭಕ್ತಿಯಿಂದ ಹೆಬ್ಬಾರರು ಸ್ವಾಗತಿಸಿ ಗೌರವಿಸಿದರು,

ಪದನಯವಿಷಯೇಹಾಂ ಸತ್ ಸ್ವಭಾವಂ ಚ ಭಿಕ್ಷೋಃ
ನಿಶಿತಮತಿರಮುಷ್ಯಾಧ್ಯಾತ್ಮವಿದ್ಯಾರ್ಜನೇಚ್ಛಾಮ್ ।
ಕವಿಪತಿರವಗತ್ಯಾಕಾರಗತ್ಯಾ ಹ್ಯಮುಷ್ಯ-
ಶ್ರುತಿನಿಗಮನಿಕೇತೇ ಶಿಷ್ಯತಾಮನ್ವಮಂಸ್ತ ॥ ೬೮

ಪಂಡಿತಶ್ರೇಷ್ಠರಾದ ಗಣಪತಿಶಾಸ್ತ್ರಿಹೆಬ್ಬಾರ್‌ರವರು ಸಂನ್ಯಾಸದೀಕ್ಷೆಧರಿಸಿದ ಶ್ರೀರಾಘವೇಂದ್ರ ಭಾರತೀಗಳ ಒಳ್ಳೆಯಸ್ವಭಾವ, ಇವರಿಗೆ ಇರುವ ವ್ಯಾಕರಣ-ನ್ಯಾಯ ವೈಶೇಷಿಕ ವೇದಾಂತ ಮುಂತಾದ ಶಾಸ್ತ್ರಗಳ ಅಭ್ಯಾಸದ ವಿಷಯದಲ್ಲಿ ಉತ್ಕಟೇಚ್ಛೆಯನ್ನು ಆಕಾರೇಂಗಿತಗಳಿಂದ ತಿಳಿದು ತಮ್ಮ ಸಾಂಗವೇದವಿದ್ಯಾಲಯದಲ್ಲಿ ಇವರಿಗೆ ಶಿಷ್ಯವೃತ್ತಿಯನ್ನು ಕೊಡಲು ಸಮ್ಮತಿಸಿದರು.

ಅಥ ಗಣಪತಿಹೆಬ್ಬಾರಾದಯಃ ಪಂಡಿತಾಸ್ತೇ
ಸ್ವಯಮತಿಶಯಭಕ್ತಾಃ ಶಂಕರಾಚಾರ್ಯಪೀಠೇ ।
ಭವನಮಿದಮುಪೇತ್ಯಾಚಾರ್ಯಮೇನಂ ಪ್ರಣಮ್ಯ
ಶ್ರುತಿವಚನನಿಕೇತೇಽಧ್ಯಾಪನಂ ಚೋಪಚಕ್ರುಃ ॥ ೬೯

ತರುವಾಯ ಗಣಪತಿ ಶಾಸ್ತ್ರಿ ಹೆಬ್ಬಾರ, ಹೊಸಮನೆ ರಾಮಚಂದ್ರಶಾಸ್ತ್ರಿ ಗೋಕರ್ಣ ಮುಂತಾದ ಪಂಡಿತರು ಶ್ರೀಶಂಕರಾಚಾರ್ಯಪೀಠದ ಗುರುವರ್ಯರ ವಿಷಯದಲ್ಲಿ ಸ್ವಯಂ ಪರಮಭಕ್ತರಾಗಿದ್ದರು, ಅವರು ಗುರುಗಳು ಉಳಿದಿದ್ದ ಮನೆಗೆ ಬಂದು ಗುರುಗಳಿಗೆ ನಮಸ್ಕರಿಸಿ, ಸಾಂಗವೇದ ವಿದ್ಯಾಲಯದಲ್ಲಿ ಗುರುಗಳಾದ ಶ್ರೀರಾಘವೇಂದ್ರಭಾರತೀಗಳಿಗೆ ಪಾಠಪ್ರವಚನ ಮಾಡಲು ಆರಂಭಿಸಿದರು

**ತದಹನಿ ಚ ತದಾದ್ಯಾತ್ಕಾಳಿದಾಸಸ್ಯ ಕಾವ್ಯಾ-**
**ನ್ಯಪಠದಪಿ ಚ ಮಾಘಂ ನೈಷಧೀಯಂ ಕ್ರಮೇಣ ।**
**ಸರಸಸರಲಚಂಪೂನಾಟಕಾದಿಪ್ರಬಂಧಾನ್**
**ಕುಶಲಮತಿರಸೌ ಕಾವ್ಯಾರ್ಥತತ್ತ್ವಂ ಪರೀಪ್ಸುಃ ॥** ೭೦

ಕಾವ್ಯಾರ್ಥತತ್ತ್ವವನ್ನು ಅರಿತುಕೊಳ್ಳಲು ಬಯಸಿದ ಕುಶಾಗ್ರಮತಿಯಾದ ಕಿರಿಯ ಗುರುಗಳು ಅದೇದಿನ ಅಂದೇ ಮೊಟ್ಟಮೊದಲಾಗಿ ಕಾಳಿದಾಸ ಮಹಾಕವಿಯ ರಘುವಂಶ, ಕುಮಾರ ಸಂಭವ ಕಾವ್ಯಗಳನ್ನು ಓದಿದರು. ಬಳಿಕ ಮಾಘಕವಿಯ ಶಿಶುಪಾಲವಧವನ್ನೂ ಶ್ರೀಹರ್ಷನ ನೈಷಧೀಯಚರಿತ ಎಂಬ ಪದ ಕಾವ್ಯಗಳನ್ನು ಓದಿದರು ತರುವಾಯ ರಸಭರಿತವೂ ಸರಳವೂ ಆದ ಚಂಪೂರಾಮಾಯಣ, ಚಂಪೂಭಾರತ ಮುಂತಾದವನ್ನು ಅಭ್ಯಸಿಸಿ ನಾಟಕವೇ ಮುಂತಾದ ಪ್ರಬಂಧಗಳನ್ನೂ ಓದಿದರು.

**ಅಪಸರದಪಶಬ್ದಾ ಶಾಬ್ದಸಿದ್ಧಾಂತಕೌಮು-**
**ದ್ಯಪಿ ದಿನಕರಟೀಕಾ ನ್ಯಾಯಮುಕ್ತಾವಳೀ ಚ ।**
**ಅತಿಶಯಿತ ಸಿತಾಭಾ ತಸ್ಯ ಕಂಠೇ ಲುಠಂತೀ**
**ಹ್ಯರಮಯದಿತರ ಛಾತ್ರಾಳಿಮೇಕಾವಳೀವ ॥** ೭೧

ಶ್ರೀರಾಘವೇಂದ್ರಭಾರತೀಗಳಿಗೆ ಸಾಧುಶಬ್ದನಿಷ್ಪತ್ತಿಯುಳ್ಳ ವ್ಯಾಕರಣಸಿದ್ಧಾಂತಕೌಮುದೀ, ನ್ಯಾಯಸಿದ್ಧಾಂತಮುಕ್ತಾವಳೀ, ದಿನಕರೀಟೀಕಾ ಇವು ಅತ್ಯಂತ ಶುಭ್ರವಾದ ಮುತ್ತುಪೋಣಿಸಿದ ಏಕಾವಳಿಯಂತೆ ಕಂಠಸ್ಥವಾಗಿದ್ದವು. ಪಾಠಶಾಲೆಯ ಇತರ ವಿದ್ಯಾರ್ಥಿಗಳ ಮನಸ್ಸನ್ನೂ ಇವು ಆಕರ್ಷಿಸುತ್ತಿದ್ದವು

**ಅನುಪಹತಸಮಾಧಿಃ ಕಾಣಭಕ್ಷಾಕ್ಷಪಾದ-**
**ಪ್ರಣಿಗದಿತ ವಿಶೇಷನ್ಯಾಯಶಾಸ್ತ್ರೇಷ್ವಧೀತೀ ।**
**ಪುನರಪಿ ಚಿರವಿದ್ಯಾಭ್ಯಾಸವಿಚ್ಛಿತ್ತಿಹೇತುಂ**
**ನಿಜಗುರುಕೃತದೇಹತ್ಯಾಗಮಾಕರ್ಣಯತ್ ಸಃ ॥** ೭೨

ತಮ್ಮ ನ್ಯಾಯಾಧ್ಯಯನವನ್ನು ತಪ್ಪದೇ ನಡೆಸಿಕೊಂಡು ಬರುತ್ತಿರುವ ಕಿರಿಯಗುರುಗಳು ವೈಶೇಷಿಕಶಾಸ್ತ್ರಗಳಲ್ಲಿ ಪ್ರೌಢಗ್ರಂಥಗಳನ್ನು ಓದುತ್ತಿರುವ ಸಮಯದಲ್ಲಿ ಮಾತ್ರ ತಮ್ಮ ವಿದ್ಯಾಭ್ಯಾಸದ ವಿಚ್ಛಿತ್ತಿಗೆ ಕಾರಣವಾದ ದೊಡ್ಡಗುರುಗಳ ದೇಹಬಿಟ್ಟ ಸುದ್ದಿಯನ್ನು ಕೇಳಿದರು

**ಶ್ರವಣಪುಟನಿಷಿಕ್ತಂ ತಪ್ತತೈಲೋಪಮಾನಂ**
**ವಚನಮಿದಮತೀವಾರಂತುದಂ ಪ್ರಾಪ್ಯ ಧೀರಃ ।**
**ಇತಿ ನಿಜಗುರುವರ್ಯಂ ಭಾರತೀಂ ರಾಮಚಂದ್ರಂ**
**ಪ್ರತಿವಿಗಲಿತಹರ್ಷಃ ಸ್ವಾತ್ಮನಾಽಚಿಂತಯತ್ ಸಃ ॥** ೭೩

ಕಾದ ಎಣ್ಣೆಯಂತೆ ಕಿವಿದೆರೆಗೆ ಎರೆಯಲ್ಪಟ್ಟ, ಅತಿಶಯವಾಗಿ ನೋವನ್ನುಂಟು ಮಾಡುವ ಗುರುಗಳು ದೇಹಬಿಟ್ಟ ಸುದ್ದಿಯನ್ನು ಕೇಳಿ, ಕಿರಿಯಗುರುಗಳು ಎದೆಗುಂದಲಿಲ್ಲ ಆದರೂ ತಮ್ಮ ಗುರುವರ್ಯರಾದ ರಾಮಚಂದ್ರಭಾರತೀಗಳ ವಿಷಯದಲ್ಲಿ ಮನಸೊಂದು ತಮ್ಮಷ್ಟಕ್ಕೆ ತಾವೇ ಆಲೋಚಿಸಿದರು

**ಪುರಮಭಿವಿನಿವೃತ್ತೋ ದೇಶಿಕೇಂದ್ರೋ ಜರಾಯಾಃ**
**ಶಿಥಿಲಶಿಥಿಲಗಾತ್ರೋ ವ್ಯಾಧಿನಾ ಗ್ರಸ್ತ ಆಸ್ತ ।**
**ಸ ಚ ಭೃಶಮಭಿಯುಕ್ತೇನಾಪಿ ವೈದ್ಯೇನ ರೋಗೋ**
**ರಿಪುರಿವ ಸುಬಲಿಷ್ಠೋ ದುಶ್ಚಿಕಿತ್ಸ್ಯೋ ಬಭೂವ ॥** ೭೪

ಗುರುಗಳು ಅಂದು ಇಲ್ಲಿಂದ ಊರಿಗೆ ಹಿಂದಿರುಗುವಾಗ ಅವರಿಗೆ ಆರೋಗ್ಯವಿರಲಿಲ್ಲ. ಮುಪ್ಪಿನಿಂದ ಮೊದಲೇ ನಿತ್ರಾಣವಾಗಿದ್ದ ಅವರ ಅಂಗೋಪಾಂಗಗಳು ಮತ್ತಷ್ಟು ದುರ್ಬಲವಾಗಿದ್ದವು, ವೈದ್ಯವಿದ್ಯೆಯಲ್ಲಿ ಪರಿಣತರೂ ಅನುಭವಿಗಳೂ ಆದ ವೈದ್ಯರು ಅವರಿಗೆ ಚಿಕಿತ್ಸೆ ಮಾಡಿದರೂ ಬಲಿಷ್ಠನಾದ ಹಗೆಯಂತೆ ರೋಗ ಹತೋಟಿಗೆ ಬರಲಿಲ್ಲ.

(ಮಂದಾಕ್ರಾಂತಾವೃತ್ತಮ್)

**ಇಂದೂದನ್ವದ್ವಸುಶಶಿಮಿತೇ ವತ್ಸರೇ ಸರ್ವಧಾರಿ–**
**ಣ್ಯೈರ್ಝುತ್ಕಾಯಂ ಯತಿಪತಿರಸೌ ಫಾಲ್ಗುಣೇ ಪೂರ್ಣಿಮಾಯಾಮ್ ।**
**ಸ್ಮಾರಂ ಸ್ಮಾರಂ ದಶಮುಖರಿಪುಂ ಪ್ರೋದ್ಯಮಾನಸ್ಯ ಚೇಂದೋ-**
**ರ್ಜ್ಯೋತಿಷ್ಯಂತರ್ಹಿತ ಇವ ಚಿರಾಯಾಸ್ಮದಕ್ಷ್ಣೋಃ ಪರೋಽಭೂತ್ ॥**

ಶ್ರೀರಾಮಚಂದ್ರಾಪುರದ ಮಠಾಧೀಶ್ವರಾದ ಶ್ರೀಶಂಕರಾಚಾರ್ಯ ಶ್ರೀರಾಮಚಂದ್ರಭಾರತೀಸ್ವಾಮಿಗಳು ಶಾಲಿವಾಹನ ಶಕ ೧೮೭೧ನೆಯ ಸರ್ವಧಾರಿ ಸಂವತ್ಸರದ ಫಾಲ್ಗುಣಶುಕ್ಲಪೂರ್ಣಿಮಾತಿಥಿಯಂದು (೧೪–೩–೧೯೪೯) ಸಂಜೆ ಉದಯಿಸಿಮೇಲೆ ಬರುತ್ತಿರುವ ಚಂದ್ರನ ಬೆಳಕಿನಲ್ಲಿ. ಅಡಗಿದರೋ ಎಂಬಂತೆ ತಮ್ಮ ಭೌತಿಕ ಶರೀರವನ್ನು ತ್ಯಜಿಸಿ ನಮ್ಮ ಕಣ್ಮರೆಯಾದರು

(ಮಾಲಿನೀ ವೃತ್ತಮ್)

ಅಹಹ ಗುರುವಿಯೋಗೋ ದುಃಸಹೋ ದೇಹಿನಾ ತು
ಕ್ಷಣಮಿಹ ಪರಿಹಾತುಂ ಶಕ್ಯತೇ ಮೃತ್ಯುಯೋಗಃ ।
ಜನನಮರಣಧರ್ಮೌ ಚಾಸ್ಯ ದೇಹಸ್ಯ ನಿತ್ಯಾ-
ವಯಮಪಿ ನಿರುಪಾಧಿಃ ಕೇವಲಃ ಶುದ್ಧ ಆತ್ಮಾ ॥ ೭೬

ಆಹಾ! ಗುರುಗಳ ವಿಯೋಗದ ಅಳಲನ್ನು ಸಹಿಸುವುದು ಸುಲಭವಲ್ಲ, ದೇಹೋಪಾಧಿಕನಾದ ಜೀವಿಗೆ ಮರಣವನ್ನು ಕೊಂಚಕಾಲವೂ ತಪ್ಪಿಸಿಕೊಳ್ಳಲು ಆಗುವುದಿಲ್ಲ. ಈ ದೇಹಕ್ಕೆ ಹುಟ್ಟುಸಾವುಗಳು ನಿಯತ. ಆತ್ಮನು ಉಪಾಧಿ ರಹಿತನೂ ಶುದ್ಧನೂ ಆಗಿರುವನು.

ವಪುರಿದಮಪುನರ್ಭಾವಾಯ ತೇ ದೇಶಿಕೇಂದ್ರಾಃ
ಸಪದಿ ಗಲಿತವಸ್ತ್ರತ್ಯಾಗ ಮತ್ಯಾಕ್ಷುರದ್ಧಾ ।
ಉದಕಮಿವ ಪಯೋಧೌ ಬ್ರಹ್ಮಣಿ ಸ್ವ ಸ್ವರೂಪೇ
ದಧತಿ ಖಲು ವಿಶೋಕಾ ಜ್ಞಾನಿನಃ ಸಾಮರಸ್ಯಮ್ ॥ ೭೭

ಆ ಗುರುಗಳು ಈ ಶರೀರವನ್ನು ಹರಿದಬಟ್ಟೆ ಕಳಚುವಹಾಗೆ ಕಳಚಿಹಾಕಿ ದರಲ್ಲವೆ! ಶೋಕಮೋಹಗಳನ್ನು ಬಿಟ್ಟಿರುವ ಜ್ಞಾನಿಗಳು ತಮ್ಮ ನಿಜಸ್ವರೂಪವಾದ ಸಚ್ಚಿದಾನಂದ ಬ್ರಹ್ಮದಲ್ಲಿ ಸಮುದ್ರದಲ್ಲಿ ನೀರು ಬೆರೆತು ಹೋಗುವಂತೆ ಐಕ್ಯವಾಗಿ ಹೋಗುವರಷ್ಟೆ!

ಸ ಚ ಸಹಜಕೃಪಾವಾನ್ ಸರ್ವದಾಽಶೇಷಶಿಷ್ಯೇ-
ಷ್ವಪಿ ಮಯಿ ಸವಿಶೇಷಂ ದೇಶಿಕೇಂದ್ರಃ ಕಿಲಾಭೂತ್ ।
ಗುರುಕೃತಪರಮಾರ್ಥಜ್ಞಾನದಾನಸ್ಯ ಕೋಽಪಿ
ಪ್ರತಿನಿಧಿರಿಹ ಲೋಕೇ ನಿಷ್ಕೃತಿಶ್ಚಾಪಿ ನಾಸ್ತಿ ॥ ೭೮

ಆ ಗುರುಗಳು ಸಮಸ್ತ ಶಿಷ್ಯರಮೇಲೆ ಅವ್ಯಾಜಕೃಪೆಯಿದ್ದವರು. ಆದರಲ್ಲೂ ನಮ್ಮ ಮೇಲೆ ಅವರ ಕೃಪೆ ವಿಶೇಷವಾದುದ್ದು. ಗುರುಗಳು ಶಿಷ್ಯರಿಗೆ ಮಾಡಿದ ಆಧ್ಯಾತ್ಮಜ್ಞಾನೋಪದೇಶಕ್ಕೆ ಸರಿಸಾಟಿಯಾದದ್ದು ಈ ಲೋಕದಲ್ಲಿ ಬೇರೆ ಇಲ್ಲ ಗುರುಗಳ ಈ ಋಣ ತೀರಿಸಲು ಶಕ್ಯವಲ್ಲ.

ಪ್ರಚಲತು ಸಮಯೋಽಸ್ಮಿನ್ ಶ್ರೇಯಸೇ ನಃ ಸಮೇಷಾ-
ಮಪಿ ಮೃತಯತಿಸಂಸ್ಕಾರಾದಿ ಶಾಸ್ತ್ರಾನುಸಾರಮ್ ।
ಇತಿ ವಿಹಿತವಿಚಾರೋ ರಾಘವೇಂದ್ರಃ ಸಶಿಷ್ಯ-
ಸ್ತ್ವರಿತ ಗತಿರಯಾಸೀದ್ಧಾಮ ಕೆಕ್ಕಾರುನಾಮ ॥ ೭೯

ಈ ಸಮಯದಲ್ಲಿ "ಸಮಸ್ತ ಶಿಷ್ಯರ ಶ್ರೇಯಸ್ಸಿಗಾಗಿ ಮೃತಯತಿಶರೀರ ಸಂಸ್ಕಾರಾದಿಗಳು ಶಾಸ್ತ್ರಾನುಸಾರಿಯಾಗಿ ನಡೆಯಬೇಕು" ಎಂದು ಮನಸ್ಸಿನಲ್ಲಿ ವಿಚಾರಮಾಡಿದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಕೂಡಲೇ ಪರಿವಾರದೊಂದಿಗೆ ಕಾಶಿಯಿಂದ ಹೊರಟು ಉತ್ತರಕರ್ನಾಟಕದಲ್ಲಿರುವ ಕೆಕ್ಕಾರಿನ ರಘೂತ್ತಮ ಮಠಕ್ಕೆ ಬಂದರು

**ತದನು ಸವಿಧಿ ಯತ್ಯಾರಾಧನಂ ಕಾರಯಿತ್ವಾ**
**ಮಿಲಿತನಿಖಿಲಭಕ್ತಾನಾಶಿಷಾ ಚಾನ್ವಗೃಹ್ಣಾತ್ ।**
**ಮಠನಿಗಮ ನಿಬಂಧಾನ್ ಲೌಕಿಕಾನ್ ಪ್ರೇಕ್ಷ್ಯ ಶಿಷ್ಯಾನ್**
**ಪ್ರಕೃತ ಸಮುಚಿತೋಕ್ತೀರ್ದೇಶಿಕೇಂದ್ರೋ ಜಗಾದ ॥ ೮೦**

ಅನಂತರ ವಿಧಿವತ್ತಾಗಿ ಬ್ರಹ್ಮೀಭೂತರಾದ ಗುರುಗಳ ಆರಾಧನೆಯನ್ನು ನೆರವೇರಿಸಿ, ಅಲ್ಲಿ ನೆರೆದ ಎಲ್ಲಾ ಭಕ್ತರಿಗೂ ಮಂತ್ರಾಕ್ಷತೆಕೊಟ್ಟು ಹರಸಿ ಅನುಗ್ರಹಿಸಿದರು ಅನಂತರ ಅವರು ಮಠದ ಎಲ್ಲಾ ವ್ಯಾವಹಾರಿಕ ದಾಖಲೆಗಳನ್ನು ಪರಿಶೀಲಿಸಿ ಶಿಷ್ಯರಾದ ಮಠೀಯ ಆಡಳಿತ ವರ್ಗಕ್ಕೆ ಸೇರಿದ ಮುಖ್ಯಸ್ಥರಿಗೆ ಪ್ರಕೃತಕ್ಕೆ ಉಚಿತವಾಗಿ ಹೇಳಬೇಕಾಗಿದ್ದ ಅಂಶಗಳನ್ನು ತಿಳಿಯಹೇಳಿದರು ಶ್ರೀರಾಘವೇಂದ್ರಭಾರತೀಗಳು ಬಳಿಕ ಮಠದ ಎಲ್ಲಾ ವ್ಯವಹಾರಗಳಿಗೂ ಪ್ರಧಾನ ನಿರ್ದೇಶಕರಾದರು.

**ಧನಮಿದಮನಿವರ್ತ್ಯಂ ಪಾತ್ರವಿಶ್ರಾಣನಾರ್ಹಂ**
**ಪರಮ ಸುಕೃತಲಭ್ಯಂ ಶಿಷ್ಯವಾತ್ಸಲ್ಯರೂಪಮ್ ।**
**ಋಣಮಿವ ಗುರುರಂತೇವಾಸಿ ನಿಕ್ಷೇಪಕೋಶೇ-**
**ಷ್ವಪಿ ಚ ಸ ವಿನಿವೇಶ್ಯ ಸ್ವಾಂಘ್ರಿ ಭಕ್ತಿಂ ವೃಣೀತೇ ॥ ೮೧**

ಶಿಷ್ಯವಾತ್ಸಲ್ಯ ಅಥವಾ ಗುರುಕೃಪೆ ಅಮೂಲ್ಯ ಇದು ಅಪದ್ಧನ. ಸತ್ಪಾತ್ರರಿಗೆ ಮಾತ್ರ ಕೊಡಲು ಅರ್ಹವಾದದ್ದು. ಮತ್ತು ಪರಮಪುಣ್ಯವಿಶೇಷದಿಂದ ಶಿಷ್ಯರಿಗೆ ಈ ಹಣ ಲಭ್ಯ ಗುರವು ಶಿಷ್ಯವಾತ್ಸಲ್ಯ ರೂಪವಾದ ಧನವನ್ನು ಶಿಷ್ಯರೆಂಬ ಕೋಶದಲ್ಲಿ ಅಧಮರ್ಣರಿಗೆ ಸಾಲದಂತೆ ಕೊಟ್ಟು ಅದನ್ನು ಅನೇಕ ಕಾಲಾವಧಿಯ ಠೇವಣಿಯಾಗಿ ಇಡುವನಷ್ಟೆ, ಹೀಗೆ ರಕ್ಷಿತವಾದ ಹಣಕ್ಕೆ ಗುರುಭಕ್ತಿಯೆಂಬ ಬಡ್ಡಿಯನ್ನು ಶಿಷ್ಯರಿಂದ ಪಡೆಯಬಯಸುತ್ತಾನೆ

**ವಿಷಯ ಸುಖವಿರಕ್ತಿರ್ಬ್ರಹ್ಮಚಿಂತಾನುರಕ್ತಿಃ**
**ಕುಟಿಲ ಹೃದಯಶಿಕ್ಷಾ ಸಜ್ಜನಾನಾಂ ಚ ರಕ್ಷಾ ।**
**ಸವಿನಯ ಪರಿಚರ್ಯಾ ಸದ್ಗುರೂಣಾಂ ಸಪರ್ಯಾ**
**ಪ್ರಭವತಿ ಗುರು ಶಿಷ್ಯಾನ್ಯೋನ್ಯ ಭೂತ್ಯೈ ಚಿರಾಯ ॥ ೮೨**

ಗುರುಶಿಷ್ಯರಿಬ್ಬರೂ ಒಬ್ಬರಿಗೊಬ್ಬರು ಹೊಂದಿಕೊಂಡು ನಡೆಯಬೇಕು. ಇಬ್ಬರವಿಷಯದಲ್ಲಿ ಇಬ್ಬರಿಗೂ ಅನ್ಯೋನ್ಯವಾಗಿ ಕೃಪೆ ಗೌರವಗಳು ಇರಬೇಕು. ಹಾಗೆ ಆಗುವಲ್ಲಿ ಗುರುಗಳಿಗೆ ವೈರಾಗ್ಯ, ಅಧ್ಯಾತ್ಮಜ್ಞಾನಪಿಪಾಸೆ, ಸಾಧು ಶಿಷ್ಯರ ಮೇಲೆ ಕೃಪೆ, ತಪಸ್ಸು, ವಂಚಕರ ಮೇಲೆ ನಿಗ್ರಹಬುದ್ಧಿ ಮುಂತಾದ ಗುಣಗಳು ಇರಬೇಕಾದುದು ಮುಖ್ಯ ಶಿಷ್ಯರಿಗೂ ಗುರುಗಳ ಸದ್ಗುಣಗಳನ್ನು ಕೇಳಿ ತಿಳಿದು ಕೊಳ್ಳುವುದು ಇವರು ದೊಡ್ಡವರು ಎಂಬ ಭಕ್ತಿ ನಿಷ್ಕಪಟ ಬುದ್ಧಿಯಿಂದ ಗುರುಗಳ ಸೇವೆ ಮಾಡುವ ಮನೋಧರ್ಮ ವಿನಯ ಇವು ಅತ್ಯಾವಶ್ಯಕ ಹೀಗೆ ಗುರುಶಿಷ್ಯರ ಮನೋಧರ್ಮ ಅನುಗ್ರಾಹ್ಯ ಅನುಗ್ರಾಹಕ ಭಾವವನ್ನು ಪುಷ್ಟೀಕರಿಸು ವಂತಾದರೆ ಅದರಿಂದ ಗುರು ಶಿಷ್ಯರಿಬ್ಬರ ಶ್ರೇಯಸ್ಸು ಸಾಧಿತವಾಗ ಬಲ್ಲದು.

**ಇತಿ ಸ ಮನಸಿ ಕೃತ್ವಾ ಭಾರತೀರಾಘವೇಂದ್ರಃ**
**ಕತಿಚನ ಸವಿಮರ್ಶಸ್ತತ್ರ ನೀತ್ವಾ ದಿನಾನಿ ।**
**ವ್ಯಚಲದಥ ದಿದೃಕ್ಷುಃ ಸ್ವೀಯಮಾಚಾರ್ಯಪೀಠಂ**
**ಸಹ ಮಿತಪರಿವಾರೈಸ್ತಚ್ಚ ಗೋಕರ್ಣತೀರ್ಥಮ್ ॥** ೮೩

ಹೀಗೆ ಆ ರಾಘವೇಂದ್ರಭಾರತೀಸ್ವಾಮಿಗಳು ಮನಸ್ಸಿನಲ್ಲಿ ನಿಶ್ಚಯಿಸಿ ಕೆಲವು ದಿವಸಗಳ ತನಕ ಕೆಕ್ಕಾರಿನ ಮಠದಲ್ಲಿ ವಿಚಾರಮಾಡುತ್ತಾ ಉಳಿದರು. ಅನಂತರ ಇವರು ತಮ್ಮ ಮೂಲವಾದ ಆಚಾರ್ಯಪೀಠವನ್ನು ನೋಡಬಯಸಿ ಮಿತಪರಿವಾರ ದೊಂದಿಗೆ ಗೋಕರ್ಣ ಕ್ಷೇತ್ರಕ್ಕೆ ಪ್ರಯಾಣ ಮಾಡಿದರು.

**ಜಯತಿ ಕಿಲ ರಘೂಣಾ ಮುತ್ತಮಾಖ್ಯಾಂ ದಧಾನಂ**
**ನಿಜಗುರುಕುಲಮೂಲಂ ಶಂಕರಾಚಾರ್ಯಪೀಠಮ್ ।**
**ತದಿಹ ಪತಯಾಲ್ವಾಲೋಕ್ಯ ಖಿನ್ನೋ ನಿತಾಂತಂ**
**ಝಟಿತಿ ತದುಪಧರ್ತುಂ ಕಾರ್ಯಮಾರಿಪ್ಸತಾಯಮ್ ॥** ೮೪

ಈ ಗೋಕರ್ಣದಲ್ಲಿ ತಮ್ಮ ಗುರುಪರಂಪರೆಗೆ ಮೂಲವಾದ ರಘೋತ್ತಮ ಮಠವೆಂಬ ಶ್ರೀಶಂಕರಾಚಾರ್ಯರ ಅದ್ವೈತ ಪೀಠವಿದೆಯಷ್ಟೆ. ಆ ಮಠದ ಕಟ್ಟಡವು ಕುಸಿದ ಬೀಳುವಹಾಗೆ ಇದ್ದದ್ದನ್ನುನೋಡಿ ಶ್ರೀರಾಘವೇಂದ್ರಭಾರತೀಗಳಿಗೆ ತುಂಬಾ ನೋವು ಆಯಿತು ಕೂಡಲೇ ಆ ಕಟ್ಟಡದ ಜೀರ್ಣೋದ್ಧಾರ ಕೆಲಸವನ್ನು ಮಾಡ ಬೇಕು ಎಂದು ಸಂಕಲ್ಪಿಸಿದರು.

ಅವನಿತಲ ಮುಪಶ್ಲಿಷ್ಯೋಚ್ಚಕೈಃ ಕ್ರೋಶಮಾನಂ
ವಿಚಲವಿಚಲವೀಚೀಬಾಹುಮಂಬೂದ್ವಮಂತಮ್ ।
ಧವಲಧವಲ ಫೇನೋದ್ಗಾರಿಣಂ ವಾರಿರಾಶಿಂ
ಗುರುರಿಹ ಪುರತೋಽಪಸ್ಮಾರಿಣಂ ಶಂಕತೇ ಸ್ಮ ॥ ೮೫

ಗುರುಗಳು ಗೋಕರ್ಣದಲ್ಲಿ ಸಮುದ್ರದ ತೀರಕ್ಕೆ ಬಂದರು ಸಮುದ್ರವನು ಕಂಡ ಅವರಿಗೆ ಇವನಾರೋ ಅಪಸ್ಮಾರಿ ರೋಗಿ ಎಂದು ಅನ್ನಿಸಿರಬಹುದು ಏಕೆಂದರೆ ಆ ವ್ಯಕ್ತಿ ನೆಲಕಚ್ಚಿ ಗಟ್ಟಿಯಾಗಿ ಕೂಗುತ್ತಿದ ಅದು ತನ್ನ ಹೆದ್ದೆರೆಯ ತೋಳುಗಳನ್ನು ಆಚೆಗೆ ಈಚೆಗೆ ಹೊರಳಾಡಿಸುತ್ತದೆ ಅದು ನೀರು ನೀರನ್ನೇ ವಮನ ಮಾಡುತ್ತಿದೆ ಮತ್ತು ಬಿಳಿ ಬಿಳಿಯ ನೊರೆಯನ್ನು ಬಾಯಿಂದ ಉಗುಳುತ್ತಿದೆಯಲ್ಲಾ! ಎಂಬ ಕಲ್ಪನೆ ಆಗ ಅವರ ಮನಸ್ಸಿಗೆ ಬಂದಿರಬೇಕು.

ಅಥ ಗುರುಮುಪಯಾಂತಂ ಶೋಕಮೋಹೌ ಹರಂತಂ
ವ್ಯಸೃಜದಿವ ಸ ದೃಷ್ಟ್ವಾ ಸಿಂಧುರುನ್ಮತ್ತಭಾವಮ್ ।
ಸ್ತಿಮಿತ ಸಲಿಲ ಭಂಗೇ ತತ್ರ ನಿರ್ಣೇ ಜಿತಾತ್ಮಾ
ಗುರುರಥ ಪರಮೇಶಂ ದ್ರಷ್ಟುಕಾಮೋ ನಿವೃತ್ತಃ ॥ ೮೬

ಆ ಸಮುದ್ರವು, ಶೋಕಮೋಹವನ್ನು ಹೋಗಲಾಡಿಸುವ ಗುರುವು ಹತ್ತಿರ ಬರುತ್ತಿದ್ದುದನ್ನು ನೋಡಿ ತನ್ನ ಉನ್ಮಾದ ರೋಗವನ್ನು ತ್ಯಜಿಸಿರಬಹುದು ಅಲೆಗಳ ಹೊಡೆದಾಟವಿಲ್ಲದೆ ಸ್ತಬ್ಧವಾದ ಆ ಸಮುದ್ರದಲ್ಲಿ ಗುರುಗಳು ವಿಧಿವತ್ತಾಗಿ ಸ್ನಾನಮಾಡಿದರು. ಬಳಿಕ ಗೋಕರ್ಣದ ಅಧಿದೇವತೆಯಾದ ಮಹಾಬಲೇಶ್ವರ ಸ್ವಾಮಿಯದರ್ಶನಕ್ಕಾಗಿ ಸಮುದ್ರದ ದಂಡೆಯಿಂದ ಹಿಂದಿರುಗಿದರು

ರಜತಶಿಖರಿಶೃಂಗಾದಾಹೃತಂ ರಾವಣೇನ
ಪ್ರಯತಮಿಭಮುಖೇನ ಸ್ಥಾಪಿತಂ ಹ್ಯಾತ್ಮಲಿಂಗಮ್ ।
ದಶಶತನಯನಾದ್ಯೈಃ ಸರ್ವದಾ ಸೇವ್ಯಮಾನಂ
ಶಿವಮಯಮನಘಂ ತಂ ಸ್ವಾತ್ಮದರ್ಶಂ ದದರ್ಶ ॥ ೮೭

ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳು ಗೋಕರ್ಣದ ಮಹಾಬಲೇಶ್ವರ ಸ್ವಾಮಿಯ ಗುಡಿಯ ಒಳಗೆ ಹೋದರು, ಅವರು ಅಲ್ಲಿ ಮಂಗಳಮಯನೂ, ಪರಿಶುದ್ಧನೂ ಆದ ಶಿವನನ್ನು ಸ್ವಸ್ವರೂಪವಂತೆ ದರ್ಶನಮಾಡಿದರು.

---

*ತಾಚ್ಛೀಲ್ಯವಯೋ ವಚನ ಶಕ್ತಿಷು ಚಾನಶ್ ಇತಿ ಚಾನಶ್ ಅಷ್ಟಾ ೩-೨-೧೨೯

ಹಿಂದೆ ಲಂಕಾಧಿಪತಿಯಾದ ರಾವಣನು ಶಿವನ ಅನುಗ್ರಹದಿಂದ ಪಡೆದ ಆತ್ಮಲಿಂಗವನ್ನು ಕೈಲಾಸಗಿರಿಯಿಂದ ಇಲ್ಲಿಗೆ ತಂದು, ವಟುವೇಷಧಾರಿಯಾಗಿ ಅಲ್ಲಿ ಸುಳಿದಾಡುತ್ತಿದ್ದ ಗಣಪತಿಯ ಹತ್ತಿರ ತಾನು ಸಂಧ್ಯಾಚಮನ ಮಾಡಿ ಹಿಂದಿರುಗುವಷ್ಟು ಕಾಲ ಹಿಡಿದುಕೊಳ್ಳಿರೆಂದು ಹೇಳಿ, ಅದನ್ನು ಅವನ ಕೈಮೇಲೆ ಇಟ್ಟನು. ಕಾಲವಿಳಂಬವನ್ನು ಸಹಿಸದ ವಿನಾಯಕನು ಆ ಆತ್ಮಲಿಂಗವನ್ನು ಇಲ್ಲಿ ಪ್ರತಿಷ್ಠಿಸಿದ್ದನಂತೆ. ಇಂದ್ರನೇ ಮೊದಲಾದ ದೇವಗಣಗಳಿಂದ ಸತತವೂ ಸೇವ್ಯನಾದ ಶ್ರೀಮಹಾಬಲೇಶ್ವರನು ಈ ಕ್ಷೇತ್ರದಲ್ಲಿ ಸನ್ನಿಹಿತನಾಗಿರುವನು.

**ಪರಮ ಶಿವಮಹಿಮ್ನಃ ಸ್ತಾವಕೈಃ ಸ್ತೂಯಮಾನಂ**
**ಮೃಡಮಪಿ ಚ ಕಣೇಹತ್ಯಾ* ಕ್ಷಿಯುಗ್ಮೇನ ಪೀತ್ವಾ ।**
**ಅನವರತಮುಪಾಜೇಕೃತ್ಯ* ತತ್ತೇಜಸಾ ಸ್ವಂ**
**ಸಮಯಮಿಹ ಸ ಕಂಚಿತ್ ಧ್ಯಾನಯೋಗೇನ ತಸ್ಥೌ ॥** ೮೮

ಬಳಿಕ ಗುರುಗಳು ಪರಮೇಶ್ವರನ ಮಹಿಮೆಗಳ ಸ್ತುತಿಪಾಠಕರಾದ ಭಕ್ತರಿಂದ ಯಾವಾಗಲೂ ಹೊಗಳಲ್ಪಡುತ್ತಿರುವ. ಜ್ಯೋತಿರ್ಲಿಂಗ ರೂಪಿಯಾದ ಆ ಮೃಡನನ್ನು ತಮ್ಮ ಎರಡು ಕಣ್ಣುಗಳಿಂದ ಪರ್ಯಾಪ್ತವಾಗಿ ಕುಡಿದು. ಸ್ವಯಂ ಪ್ರಕಾಶನಾದ ಅವನ ತೇಜಸ್ಸಿನಿಂದ ತಾವೂ ಚೈತನ್ಯಗೊಂಡು ಶಿವಲಿಂಗದ ಮುಂದೆ ಸ್ವಲ್ಪ ಹೊತ್ತು ಧ್ಯಾನಯೋಗದಲ್ಲಿ ಇದ್ದರು

**ಇತಿ ಗಿರಿಶಮುಪಸ್ಥಾಯಾರ್ಯವರ್ಯಸ್ತತೋಽಗಾತ್**
**ರಘುಪತಿಶರಘಾತಾದುದ್ಗತಾಯಾಸ್ತಟಿನ್ಯಾಃ ।**
**ತಟಭುವಮುಪಶಾಂತೇ ರಾಮಚಂದ್ರೇ ಪುರೇಽಸ್ಮಿ-**
**ನ್ನಗಮಯದಯಮಲ್ಪಾನ್ಯತ್ರ ಧೀರೋ ದಿನಾನಿ ॥** ೮೯

ಹೀಗೆ ಗೋಕರ್ಣದ ಮಹಾಬಲೇಶ್ವರನ ದರ್ಶನಮಾಡಿ ಆತನನ್ನು ಹಾಡಿ ಹೊಗಳಿ ಬಳಿಕ ಗೋಕರ್ಣದಿಂದ ಶ್ರೀರಾಘವೇಂದ್ರಭಾರತೀ ಸ್ವಾಮಿಗಳು ಶರಾವತೀ ನದಿಯ ತೀರಕ್ಕೆ ಬಂದರು. ಶ್ರೀಮದ್ರಾಮಚಂದ್ರಪುರದ ಮಠದಲ್ಲಿ ಪಂಡಿತರಾದ ಗುರುಗಳು ಕೆಲವು ದಿವಸಗಳನ್ನು ಕಳೆದರು. ಆಗ–

---

*ಕಣೇಹತ್ಯ = ತೃಪ್ತಿಯಾಗುವಂತೆ

*ಉಪಾಜೇಕೃತ್ಯ = ಚೈತನ್ಯಗೊಂಡು

ಅಧಿಪುರಮಪಿ ಸರ್ವಾಧ್ಯಕ್ಷಭಾವೇ ಸ್ಥಿತಾತ್ಮಾ
ಗುರುರಯಮಧಿಲೇಖ್ಯಾನ್ಯಾಧಮರ್ಣಾನ್ಯಧೀಯನ್ ।
ವಿಷಮಿತಪಸುಧಾಯಾಮಶ್ವವಾಹಸ್ಯ ಪುಂಸಃ
ಸ್ಖಲಿತಪದಸಮುತ್ಥಾಮವ್ಯವಸ್ಥಾಮಪಶ್ಯತ್ ॥ ೯೦

ಮಠದ ಸರ್ವಾಧ್ಯಕ್ಷ ಪೀಠದಲ್ಲಿರುವ ಶ್ರೀರಾಮಚಂದ್ರಭಾರತೀ ಸ್ವಾಮಿಗಳು ಮಠದ ಆಡಳಿತಕ್ಕೆ ಸಂಬಂಧಿಸಿದ ವ್ಯವಹಾರಗಳಲ್ಲಿ ಮುಂಗಡಸಾಲಪತ್ರಗಳನ್ನು ಪರಿಶೀಲಿಸುತ್ತಾ, ಹಳ್ಳ ತಿಟ್ಟುಳ್ಳ ನೆಲದಮೇಲೆ ಕುದುರೆಯನ್ನೇರಿ ಹೋಗುತ್ತಿರುವಾಗ ಕುದುರೆಯ ಕಾಲು ಜಾರಿದಾಗ ಸವಾರನಿಗಾದ ಅವ್ಯವಸ್ಥೆಯನ್ನು ಕಂಡರು

ಕ್ಷಯರುಗಿವ ಸಮಸ್ತಾ ಚಾರ್ಥಿಕೀ ದುರ್ವ್ಯವಸ್ಥಾ
ಋಣಬಹುಲತಯಾಸೌ ವೃದ್ಧಿವೃದ್ಧಿಂ ವಹಂತೀ ।
ಪ್ರತಿನಿಯತಸಪರ್ಯಾತಿಥ್ಯಕಾರ್ಯಾಣಿ ಧರ್ತುಂ
ಹ್ಯಭವದನಧಿಕಾಯಾ ನಿರ್ವ್ಯಪೇಕ್ಷಾ*ಽಸಮರ್ಥಾ ॥ ೯೧

ಮಠದ ದಾಖಲೆಗಳಲ್ಲಿ ಕಂಡ ಎಲ್ಲವಿಧವಾದ ಆರ್ಥಿಕ ಅವ್ಯವಸ್ಥೆಯು ಕ್ಷಯರೋಗದಂತೆ ಅನರ್ಥಕಾರಿಯಾಗಿತ್ತು. ಅಲ್ಲಿಯ ಆರ್ಥಿಕ ಸ್ಥಿತಿಯು ದಿನವೂ ಸಾಲ ಬೆಳೆಯುತ್ತಾ ಹೋದದ್ದರಿಂದ ಬಡ್ಡಿಗೆ ಬಡ್ಡಿ ತೆರುತ್ತಾ ಅವಶ್ಯ ನಡೆಯಲೇ ಬೇಕಾದ ಪ್ರತಿದಿನದ ಪೂಜಾದಿಗಳು, ಅತಿಥಿಸತ್ಕಾರ ಮುಂತಾದ ಕಾರ್ಯಗಳಿಗೆ ತಗಲುವ ವೆಚ್ಚವನ್ನು ಭರಿಸಲು, ಹೆಚ್ಚಿನ ವಾರ್ಷಿಕ ವರಮಾನವಿಲ್ಲದುದರಿಂದ ಅವರ ಆಸೆಯು ನಿರಾಶೆಯಾಯಿತು.

ಪುನರಪಿ ಸ ನಿದಧ್ಯಾವಾರ್ಥಿಕೀ ನೋ ವ್ಯವಸ್ಥಾ
ತ್ವಪಗುಣಿತಋಣಾರ್ಣಾ ನ್ಯಾಯ್ಯಸಂವರ್ಧಿತಾರ್ಥಾ ।
ಅನಿತರಕೃತಿತಂತ್ರಾ ಸತ್ಕ್ರಿಯಾದಾನಸರ್ಗಾ
ಸಕಲಸುಖವಿಧಾತ್ರೀ ಶಿಷ್ಯಧಾತ್ರೀ ಕಥಂ ಸ್ಯಾತ್ ॥ ೯೨

ಅವರು ಮತ್ತೆ ತಮ್ಮ ಮನಸ್ಸಿನಲ್ಲಿ ಮಠೀಯ ಆರ್ಥಿಕ ವ್ಯವಸ್ಥೆಯನ್ನು ಕುರಿತು ಹೀಗೆ ಆಲೋಚಿಸಿದರು. ಏನೆಂದರೆ, ಈಗಿನ ಮಠದ ಆರ್ಥಿಕ ಅವ್ಯವಸ್ಥೆಯನ್ನು ಹೇಗೆ ಹೋಗಲಾಡಿಸಬೇಕು? ಪ್ರಕೃತ ಮಾಡಿದ ಸಾಲದ ಹೊರೆಯನ್ನು ಇಳುಹಲು ಮತ್ತೆ ಸಾಲಮಾಡುವ ಪ್ರವೃತ್ತಿಯು ಕಡಿಮೆ ಯಾಗುವಂತಹ,

*ನಿರ್ವ್ಯಪೇಕ್ಷಾ . ಅಪೇಕ್ಷೆಯಿಲ್ಲದ

ಸ್ವಯಂಲಾಭ ಪಡೆಯುವ ವ್ಯಾವಹಾರಿಕ ಮಧ್ಯಸ್ಥರ ಪ್ರಾಧಾನ್ಯವಿರದೇ ಸ್ವತಂತ್ರವಾಗಿರುವಂತಹುದೂ ನ್ಯಾಯಮಾರ್ಗವನ್ನು ಬಿಡದೇ ವೃದ್ಧಿಹೊಂದುವಂತಹ ಆರ್ಥಿಕ ಮೂಲದ ಬೆಳವಣಿಗೆಯುಳ್ಳದ್ದೂ ಒಳ್ಳೆಯ ಕಾರ್ಯಗಳಿಗೆ ಸೂಕ್ತವಾದ ಕೊಡು ಕೊಳ್ಳುವುಗಳಿಗೆ ಸಾಕಾಗುವಂತಹುದೂ ಎಲ್ಲರ ಸುಖವನ್ನು ನಿರ್ವಹಿಸಬಲ್ಲುದೂ ಶಿಷ್ಟರನ್ನು ಪೋಷಿಸಬಲ್ಲದೂ ಆದ ಹಣಕಾಸಿನ ವ್ಯವಸ್ಥೆಯು ಹೇಗೆ ಆದೀತು ?

ಅಪಿ ಕಿಮಿದಮುಪೇಕ್ಷ್ಯೈ ನೋಚಿತಂ ಯತ್ಸನೇಷಾಂ
ಶುಭಮಿದಮುಪಹನ್ಯಾದ್ದುಸ್ಥಿತಂ ಕಾರ್ಯಜಾತಮ್ ।
ಶಿಥಿಲಿತಪರಿರಂಭೇ ಜೃಂಭಿತೇ ಸ್ತಂಭಮೂಲೇ
ನ ಭವತಿ ಪತಯಾಲೋರೋಕಸಃ* ಸೌಖ್ಯಲಾಭಃ ॥ ೯೩

ಇದನ್ನು ಉಪೇಕ್ಷಿಸೋಣವೆ? ಉಚಿತವಲ್ಲ ಏಕೆಂದರೆ, ಈ ದುರ್ವ್ಯವಸ್ಥೆಯ ಕೆಲಸವು ಎಲ್ಲರ ಯೋಗಕ್ಷೇಮವನ್ನು ಹಾಳುಮಾಡಬಹುದು ಕಂಬದ ಬುಡ ಸಡಿಲವಾಗಿ ಬಾಯಿಬಿಟ್ಟಿರುವಾಗ ಬೀಳಲು ತಯಾರಾದ ಮನೆಯಿಂದ ಯಾರಿಗೂ ಸೌಖ್ಯ ಲಾಭ ವಿಲ್ಲವಷ್ಟೆ

ವಯಮಿಹ ನಿವಸಾಮ ಕ್ಷೇಮಮತ್ರಾಧುನಾಸ್ಯಾಂ
ಪುರಿ ಕತಿಚನ ಮಾಸಾನ್ನಿತ್ಯಶಕ್ಯೈಃ ಪ್ರಯತ್ನೈಃ ।
ಮಮ ತು ಕಥಮಪೂರ್ಣಾಂ ಪಂಡಿತೈಃ ಪೂರಣೀಯಂ
ಶಶಿನಮಿವ ಕಲಾಭಿಃ ಶೇಮುಷೀಂ ಕಃ ಪಿಪರ್ತು ॥ ೯೪

ಸದ್ಯ ನಾವು ಮಠದ ಆರ್ಥಿಕವಾದ ಅವ್ಯವಸ್ಥೆಯನ್ನು ನಿವಾರಿಸಿ ಎಲ್ಲರ ಕ್ಷೇಮಕ್ಕಾಗಿ ರಾಮಚಂದ್ರಾಪುರದಲ್ಲಿಯೇ ಕೆಲವು ತಿಂಗಳ ತನಕ ವಾಸಮಾಡೋಣವೇ ? ಅದು ಶಕ್ಯವಾಗದು ಅರೆಬರೆಯಾದ ನನ್ನ ಓದು ವಿದ್ವಜ್ಜನರಿಲ್ಲದ ಇಲ್ಲಿ ಪೂರ್ಣವಾಗದು. ವಿದ್ವಾಂಸರು ವಿದ್ಯೆಯಿಂದ ನನ್ನ ಬುದ್ಧಿ ವೃತ್ತಿಯನ್ನು, ಕಲೆಗಳಿಂದ ಚಂದ್ರನನ್ನು ತುಂಬುವಂತೆ ತುಂಬಲು ಅರ್ಹರು, ಅಪೂರ್ಣವಾದ ನನ್ನ ವಿದ್ಯೆಯು ಇಲ್ಲಿ ಪೂರ್ಣವಾಗದು, ವಿದ್ಯಾಭ್ಯಾಸಕ್ಕೆ ಸೌಕರ್ಯವು ಇಲ್ಲಿ ಇಲ್ಲವಿರುವುದರಿಂದ ಮತ್ತೆ ಕಾಶಿಗೆ ಹೋಗುವುದು ಅನಿವಾರ್ಯ

*ಟಿಪ್ಪಣಿ : ಪತಯಾಲೋರೋಕಸ : – ಇಲ್ಲಿ ಓಕಸ್ ಶಬ್ದವು ಪುಲ್ಲಿಂಗದಲ್ಲಿ ಪ್ರಯೋಗಿಸಲ್ಪಟ್ಟಿದೆ.

ಇತಿ ಕೃತಮತಿಕಾರ್ಯೋ ನೂತನಾಂ ಕಾರ್ಯಕರ್ತ್ರೀಂ
ಪರಿಷದಮುಪಕಲ್ಪ್ಯ ಕ್ಷೇಮಕೃತ್ಯಂ ಮಠೀಯಮ್ ।
ನಿಖಿಲಮಪಿ ಪುನರ್ನಿರ್ದಿಶ್ಯ ತಸ್ಯೈ ಸ ಕಾಶೀಂ
ಪುನರಪಿ ಪರಿಸರ್ತುಂ ನಿಶ್ಚಿಕಾಯೇಷ್ಟಸಿದ್ಧ್ಯೈ ॥ ೯೫

ಎಂದು ಆಲೋಚಿಸಿ ಗುರುಗಳು ಹೊಸಕಾರ್ಯ ನಿರ್ವಾಹಕ ಸಮಿತಿಯನ್ನು ರಚಿಸಿದರು, ಆ ಸಮಿತಿಗೆ ತಮ್ಮ ವಿದ್ಯಾಭ್ಯಾಸದ ಅವಧಿಯಲ್ಲಿ ಮಠಕ್ಕೆಸಂಬಂಧಿಸಿದ ಯೋಗಕ್ಷೇಮದ ಎಲ್ಲಾ ವ್ಯಾವಹಾರಿಕ ಭಾರವನ್ನೂ ವಹಿಸಿದರು, ಬಳಿಕ ತಮ್ಮ ವಿದ್ಯಾಭ್ಯಾಸಕ್ಕಾಗಿ ಮತ್ತೆ ಕಾಶಿಗೆ ಹೋಗಲು ನಿಶ್ಚಯಿಸಿದರು,

ಇತಿ ವಿಹಿತಸುಕೃತ್ಯೋ ರಾಘವೇಂದ್ರೋ ಯತೀಂದ್ರೋ
ದಿನದಶಕಮುಷಿತ್ವಾ ರಾಮಚಂದ್ರೇ ಪುರೇಽಸ್ಮಿನ್ ।
ವ್ಯಚಲದಚಲಚಿತ್ತಸ್ತೀರ್ಥಹಳ್ಳೀಂ ಗತೋಽಸೌ
ರಸವಸುದಿವಸೇಭ್ಯೋಽನಂತರಂ ವಾರಣಾಸೀಮ್ ॥ ೯೬

ಯತೀಂದ್ರರಾದ ಶ್ರೀರಾಘವೇಂದ್ರಭಾರತೀಗಳು ಮಠೀಯ ಕಾರ್ಯಗಳಿಗೆ ವ್ಯವಸ್ಥೆಮಾಡಿದ ಬಳಿಕ ರಾಮಚಂದ್ರಾಪುರದಲ್ಲಿ ಹತ್ತುದಿವಸಗಳ ತನಕ ಇದ್ದರು. ದೃಢಚಿತ್ತರಾದ ಅವರು ತಮ್ಮ ನಿರ್ಧಾರವನ್ನು ಬದಲಾಯಿಸದೇ ರಾಮಚಂದ್ರಾಪುರದಿಂದ ತೀರ್ಥಹಳ್ಳಿಗೆ ಹೋದರು. ಅಲ್ಲಿ ಆರೆಂಟು ದಿವಸಗಳವರೆಗೆ ಇದ್ದು ಅನಂತರ ಕಾಶಿಗೆ ಪ್ರಯಾಣಮಾಡಿದರು.

ಪರಿಗಣಿತ ಪದಾರ್ಥಾಂಸ್ತತ್ ಪ್ರಮಾಣಪ್ರಮೇಯ-
ಪ್ರಭೃತಿ ವಿಷಯ ವಿಶ್ಲೇಷಾದ್ಯಥಾತ್ಮಾರ್ಥತತ್ತ್ವಾನ್ ।
ವಿಜಿತವಿಮತವಾದಾನ್ ಸರ್ವಶಾಸ್ತ್ರೋಪಕಾರಾ-
ನಯಮಧಿಗತವಾಂಸ್ತಾನ್ ನ್ಯಾಯಶಾಸ್ತ್ರ*ಪ್ರಬಂಧಾನ್ ॥ ೯೭

ಲೋಕದಲ್ಲಿರುವ ಪದಾರ್ಥಗಳನ್ನು ಪರಿಗಣಿಸಿ ಹದಿನಾರೆಂದು ಅಂಗೀಕರಿಸಿರುವ, ಪ್ರತಿವಾದ ನಿರಾಕರಣಪೂರ್ವಕವಾಗಿ ತಾವು ಅಂಗೀಕರಿಸಿದ ಪ್ರಮಾಣ ಪ್ರಮೇಯ ಮುಂತಾದ ವಸ್ತುಗಳಲ್ಲಿ ಪ್ರತಿಯೊಂದರ ಸೂಕ್ಷ್ಮವಿಶ್ಲೇಷಣದಿಂದ ವಸ್ತುಸ್ವರೂಪ ಸ್ವಭಾವಗಳನ್ನು ನಿರ್ಣೈಸುವ, ಸರ್ವಶಾಸ್ತ್ರಗಳಿಗೂ ಉಪಕಾರಕವಾದ ನ್ಯಾಯಶಾಸ್ತ್ರಗ್ರಂಥಗಳನ್ನು ಶ್ರೀರಾಘವೇಂದ್ರಭಾರತೀಸ್ವಾಮಿಗಳು ಅಧ್ಯಯನ ಮಾಡಿದರು.

---

ನ್ಯಾಯ ಶಾಸ್ತ್ರ ಅನುಬಂಧವನ್ನು ನೋಡಿ

ಪ್ರಕೃತಿಪುರುಷತತ್ತ್ವಖ್ಯಾಪಕಂ ಸಾಂಖ್ಯಶಾಸ್ತ್ರಂ*
ಕಪಿಲಮುನಿ ನಿರುಕ್ತಂ ದೇಶಿಕೇಂದ್ರಃ ಶಿಶಿಕ್ಷೇ ।
ಕುಶಲಮತಿರಸೌ ಪಾತಂಜಲಂ ಯೋಗಶಾಸ್ತ್ರಂ*
ಫಣಿಪತಿಕೃತಭಾಷ್ಯಂ ಪಾಣಿನೀಯಂ* ಚ ತಂತ್ರಮ್ ॥ ೯೮

ಬಳಿಕ ಆಚಾರ್ಯವರ್ಯರು ಪ್ರಕೃತಿ ಪುರುಷರ ತತ್ತ್ವವನ್ನು ಬೋಧಿಸಿರುವ ಕಪಿಲಮುನಿ ಪ್ರಣೀತವಾದ ಸಾಂಖ್ಯ ಶಾಸ್ತ್ರಗ್ರಂಥಗಳನ್ನು ಓದಿದರು. ತರುವಾಯ ಧೀಮಂತರಾದ ಇವರು ಪತಂಜಲಮುನಿ ಪ್ರಣೀತವಾದ ಯೋಗಶಾಸ್ತ್ರವನ್ನು ಪರಿಸಿದರು. ಬಳಿಕ ಮಹಾಶೇಷನ ಅವತಾರವೆಂದು ಪ್ರಸಿದ್ಧರಾದ ಪತಂಜಲಮುನಿಗಳು ಬರೆದ ವ್ಯಾಕರಣ ಶಾಸ್ತ್ರವನ್ನು ಓದಿದರು.

ನಿಗಮವಿಹಿತಯಜ್ಞೋಪಾಯಸಾಧ್ಯಾಪವರ್ಗಾ-
ದ್ಯತಿಶಯಪುರುಷಾರ್ಥಪ್ರಾಪ್ತಿತಾತ್ಪರ್ಯವಾದಮ್ ।
ಅಪಠದತಿವಿಮೃಷ್ಟಂ ಜೈಮಿನೀಯಂ* ಚ ಶಾಸ್ತ್ರಂ
ಗುರುಮತಮಪಿ ಭಾಟ್ಟಂ ಗ್ರಂಥಮಪ್ಯಧ್ಯಗೀಷ್ಟ ॥ ೯೯

ವೇದವಿಹಿತವಾದ ಯಜ್ಞಗಳಿಂದ ಸ್ವರ್ಗ, ಅಪವರ್ಗಗಳೇ ಮುಂತಾದ ಪುರುಷಾರ್ಥ ಲಾಭವೇ ಶ್ರುತಿಯ ತಾತ್ಪರ್ಯವೆಂದು ಸಿದ್ಧಾಂತಿಸಿರುವ ಜೈಮಿನಿ ಮುನಿ ಪ್ರಣೀತವಾದ ಮೀಮಾಂಸಾ ಶಾಸ್ತ್ರವನ್ನು ಈ ಶಾಸ್ತ್ರದ ಅವಾಂತರ ಭೇದವಾದ ಪ್ರಾಭಾಕರಮತ, ಭಾಟ್ಟಮತ ಇವುಗಳನ್ನು ಪ್ರತಿಪಾದಿಸಿರುವ ಗ್ರಂಥಗಳನ್ನೂ ಸಹ ಗುರುವರ್ಯರು ಕಾಶಿಯಲ್ಲಿ ಅಧ್ಯಯನ ಮಾಡಿದರು.

ಅಪಿ ಚ ಭಗವತೋಕ್ತಾಂ ಭಾಷ್ಯಯುಕ್ತಾಂ ಚ ಗೀತಾ-
ಮಪಠದುಪನಿಷದ್ಭಾಷ್ಯಾಣಿ ಸರ್ವಾಣಿ ಧೀಮಾನ್ ।
ತದನು ಮುನಿನಿರುಕ್ತ ಬ್ರಹ್ಮಸೂತ್ರಸ್ಯ ಭಾಷ್ಯಂ
ನಿರತಿಶಯಗಭೀರಂ ಶಾಂಕರಂ ಭಾಮತೀಂ ಚ ॥ ೧೦೦

ಬಳಿಕ ಶ್ರೀ ರಾಘವೇಂದ್ರಭಾರತೀಸ್ವಾಮಿಗಳು ಆನಂದಗಿರಿ ಟೀಕಾಸಹಿತವಾದ ಭಗವದ್ಗೀತೆಯ ಶಾಂಕರಭಾಷ್ಯವನ್ನೂ ಮತ್ತು ಆನಂದಗಿರಿ ವ್ಯಾಖ್ಯಾನ ಸಹಿತ ಎಲ್ಲಾ ಉಪನಿಷತ್ತುಗಳ ಶಾಂಕರಭಾಷ್ಯವನ್ನೂ ಓದಿದರು. ಅವರು ಬಾದರಾಯಣ (ವ್ಯಾಸ)ರಚಿತವಾದ ಬ್ರಹ್ಮಸೂತ್ರಗಳ ಶಾಂಕರಭಾಷ್ಯವನ್ನು ರತ್ನಪ್ರಭಾವ್ಯಾಖ್ಯಾನ ಸಹಿತವಾಗಿಯೂ ಮತ್ತು ವಾಚಸ್ಪತಿಮಿಶ್ರಕೃತ ಅತಿವಿಸ್ತೃತ ಮತ್ತು ಗಂಭೀರವಾದ ಭಾಮತೀ ಟೀಕಾ ಸಹಿತವಾಗಿಯೂ ಅಧ್ಯಯನ ಮಾಡಿದರು.

---

*ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ವ್ಯಾಕರಣ,ಶಾಸ್ತ್ರ, ಮೀಮಾಂಸಾಶಾಸ್ತ್ರ, ಅನುಬಂಧವನ್ನು ನೋಡಿ.

ಪ್ರಭವತಿ ನ ಹಿ ಕಶ್ಚಿದ್ದಂಡನೀತಿಂ ವಿಹಾಯ
ಸ್ವಪರಹಿತವಿರೋಧಿಸ್ಥಾನಮುಚ್ಛೇತ್ತುಮಾರಾತ್ ।
ಪ್ರಭುರಿವ ಧೃತದಂಡೋ ಲೌಕಿಕೇಷ್ವಪ್ಯಭಿಜ್ಞ–
ಸ್ತದನು ಗುರುರಪಾಠೀನ್ನೀತಿಶಾಸ್ತ್ರಂ * ಸ ಧೀಮಾನ್ ॥ ೧೦೧

ಲೋಕದಲ್ಲಿ ತನ್ನ ಮತ್ತು ತನ್ನವರ ಅಥವಾ ಇತರರ ಹಿತೈಷಿಯಾದವರು ತಮ್ಮ ಅಭ್ಯುದಯದ ಮಾರ್ಗಕ್ಕೆ ಅಡ್ಡಿಯನ್ನುಂಟುಮಾಡುವ ಘಟನೆಯನ್ನು ಹತ್ತಿಕ್ಕಲು ನೀತಿಶಾಸ್ತ್ರಜ್ಞರಲ್ಲದವರು ಸಮರ್ಥರಾಗಲಾರರು ಶ್ರೀಮದ್ರಾಘವೇಂದ್ರ ಭಾರತೀಸ್ವಾಮಿಗಳು ಅಧ್ಯಾತ್ಮ ವಿಚಾರದಲ್ಲಿ ನಿಪುಣರಾದಂತೆ ಲೌಕಿಕ ವ್ಯವಹಾರದಲ್ಲಿಯೂ ನೈಪುಣ್ಯವನ್ನು ಪಡೆಯಲು ದಂಡಾಧಿಕಾರಿಯಾದ ರಾಜನಂತೆ ನೀತಿಶಾಸ್ತ್ರ ಗ್ರಂಥಗಳ ಅಧ್ಯಯನ ಮಾಡಿದರು

ಯಶಸಿ ಯದಭಿಲಾಷೀ ರಾಘವೇಂದ್ರಃ ಸ ಕಾಶ್ಯಾಂ
ತಪಸಿ ಚ ಕೃತಯತ್ನಃ ಸ್ವಸ್ಯ ನಿಶ್ರೇಯಸಾಯ ।
ಕ್ಷಣಮಪಿ ತದನೀತ್ವಾ ವ್ಯರ್ಥಮಹ್ನಾಯ ಜಾಗ್ರತ್
ಭ್ರಮರ ಇವ ವಿಭಾತೇ ಸ್ವಾಂ ಚ ವೃತ್ತಿಂ ವ್ಯತಾನೀತ್ ॥ ೧೦೨

ಚೆನ್ನಾಗಿ ವಿದ್ಯಾಭ್ಯಾಸಮಾಡಿ ಹೆಸರು ಪಡೆಯಬೇಕೆಂದು ಬಯಸಿದ ಶ್ರೀ ರಾಘವೇಂದ್ರಭಾರತೀಗಳು ಕಾಶಿಯಲ್ಲಿ ತಮ್ಮ ಶ್ರೇಯಸ್ಸಿಗಾಗಿ ತಪಸ್ಸು ಮಾಡಿದರು. ಏಕಾಗ್ರತೆಯಿಂದ ಅನೇಕ ಮಂತ್ರ ಪುರಶ್ಚರಣೆ ಮಾಡಿದರು ತಪೋನಿರತರಾದ ಅವರು ಕಾಯಕ್ಲೇಶವನ್ನು ಪರಿಗಣಿಸಲಿಲ್ಲ. ಒಂದು ಕ್ಷಣಕಾಲವನ್ನೂ ಹಾಳು ಮಾಡದೇ ಓದುತ್ತಿದ್ದರು, ರಾತ್ರಿ ಬಹಳ ಹೊತ್ತು ಓದಿ ಮಲಗಿದ್ದರೂ ಮುಂಜಾನೆ ಮುಂಚೆಯೇ ಏಳುತ್ತಿದ್ದರು ಬೆಳಿಗ್ಗೆ ಮುಂಚೆಯೇ ಎದ್ದು ದುಂಬಿಯಂತೆ ತಮ್ಮ ನಿತ್ಯ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು

ಅಥ ಸ ನಿಖಿಲವಿದ್ಯಾಪಾರಗಃ ಪಂಡಿತಾನಾಂ
ಪರಿಷದಿ ಚ ಸಪರ್ಯಾಂ ಪ್ರಾಪ್ಯ ರಾಜೇಶ್ವರಾದ್ಯೈಃ ।
ಪ್ರಣಯನಮಿತಗಾತ್ರೈಃ ಶ್ಲಾಘಿತೋಽಸೌ ಬುಧೇಂದ್ರೈಃ
ನಿಜಪುರಗಮನಾಯಾಽಽಪೃಚ್ಛ್ಯ ತಾನ್ ಸಂಪ್ರತಸ್ಥೇ ॥ ೧೦೩

ತರುವಾಯ ಸರ್ವವಿದ್ಯಾಪಾರಂಗತರಾದ ಗುರುಗಳು ಸಾಂಗ ವಿದ್ಯಾಲಯದ ಪಂಡಿತರ ಸಭೆಯಲ್ಲಿ ಮನ್ನಣೆ ಪಡೆದು ಪುರಸ್ಕೃತರಾದರು ಕುಲಪತಿ ಪಂಡಿತರಾಜ ರಾಜೇಶ್ವರಶಾಸ್ತ್ರಿ ದ್ರಾವಿಡ ಮುಂತಾದ ಪಂಡಿತೋತ್ತಮರು ಭಕ್ತಿಯಿಂದ ಗುರು

*ನೀತಿ ಶಾಸ್ತ್ರ–ಅನುಬಂಧವನ್ನು ನೋಡಿ

ಗಳಿಗೆ ಪ್ರಣಾಮ ಸಲ್ಲಿಸಿದರು ಇವರ ವಿದ್ಯಾವಿನಯವನ್ನು ಅವರು ಹೊಗಳಿದರು ಅನಂತರ ಅಧ್ಯಾಪಕವೃಂದದಿಂದ ಬೀಳ್ಕೊಂಡ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಕಾಶಿಯಿಂದ ರಾಮಚಂದ್ರಾಪುರದ ತಮ್ಮ ನಿವಾಸಕ್ಕೆ ಪ್ರಯಾಣ ಮಾಡಿದರು.

**ಪುರಮಭಿಮುಖ ಆರ್ಯಃ ಪ್ರಸ್ಥಿತೋ ವಾರಣಾಸ್ಯಾಃ**
**ಕತಿಪಯ ದಿವಸೇಷು ಪ್ರಾಯಯೌ ತೀರ್ಥಹಳ್ಳೀಮ್ ।**
**ಸಪದಿ ಸಮಿತಿಲೋಷಂ ಪೂರ್ಣಕುಂಭಾಗ್ರಹಸ್ತಾ**
**ನೃಪತಿಮಿವ ತಮಭ್ಯುತ್ಥಾಯ ಪೌರಾಃ ಪ್ರಣೇಮುಃ ॥ ೧೦೪**

ಗುರುಗಳು ಕಾಶಿಯಿಂದ ಊರಿಗೆ ಎದುರಾಗಿ ಹೊರಟು ಕೆಲವು ದಿವಸ ಪ್ರಯಾಣಮಾಡಿ ತೀರ್ಥಹಳ್ಳಿಯಲ್ಲಿರುವ ಶ್ರೀರಾಮಚಂದ್ರಾಪುರದ ಮಠಕ್ಕೆ ಬಂದರು ಆ ಸಂದರ್ಭದಲ್ಲಿ ಪೌರರು ಶ್ರೀಸ್ವಾಮಿಗಳನ್ನು ರಾಜರನ್ನು ಎದುರು ಗೊಳ್ಳುವಂತೆ ಪೂರ್ಣಕುಂಭಮಾಲೆಗಳಾಗಿ ಎದುರುಗೊಂಡು ಸಂತೋಷದಿಂದ ಸ್ವಾಗತಿಸಿದರು.

**ವಿನಿಹಿತಮಿವ ಭಾನುಃ ಸಾಯಮಗ್ನೌ ಸ್ವತೇಜಃ**
**ಪುನರುಷಸಿ ಸ ಚಾರ್ಯಃ ಪ್ರಾಙ್ನಿವಿಷ್ಟಂ ಸಮಿತ್ಯಾಮ್ ।**
**ಇಹ ನಿಜಮಧಿಕಾರಂ ರಾಘವೇಂದ್ರೋ ಯಥಾಸ್ವಂ**
**ಸಮಿತಿಚರಿತಕೃತ್ಯಂ ಶ್ಲಾಘಮಾನಃ ಪ್ರಪೇದೇ ॥ ೧೦೫**

ಶ್ರೀರಾಮಚಂದ್ರಾಪುರದ ಮಠಾಧಿಪತಿಗಳಾದ ಶ್ರೀರಾಘವೇಂದ್ರಭಾರತೀಗಳು ಹಿಂದೆ ಕಾಶಿಗೆ ಹೋಗುವಾಗ ಮಠದ ಕಾರ್ಯ ನಿರ್ವಾಹಕ ಸಮಿತಿಗೆ ಒಪ್ಪಿಸಿದ್ದ ತಮ್ಮ ಅಧಿಕಾರವನ್ನು ಸೂರ್ಯನು ಸಂಜೆ ಅಗ್ನಿಗೆ ಒಪ್ಪಿಸಿದ್ದ ತನ್ನ ತೇಜಸ್ಸನ್ನು ಬೆಳಿಗ್ಗೆ ಪಡೆಯುವಂತೆ ಸಮಿತಿಯ ನಡವಳಿಕೆ ಹಾಗೂ ಕೆಲಸಗಳನ್ನು ಹೊಗಳುತ್ತಾ ತಿರುಗಿ ಯಥಾವತ್ತಾಗಿ ತಮ್ಮ ವಶಕ್ಕೆ ತೆಗೆದುಕೊಂಡರು

(ಶಾರ್ದೂಲವಿಕ್ರೀಡಿತ ವೃತ್ತಮ್)

**ಕಾಶ್ಯಾಂ ಸಪ್ತಸಮಾ ಅಧೀತ್ಯ ನಿತರಾಂ ಶಾಸ್ತ್ರಾಣಿ ಸರ್ವಾಣ್ಯಸೌ**
**ಪಾರೀಣಃ ಕಿಲ ಭಾರತೀಕೃತಪದಃ ಶ್ರೀರಾಘವೇಂದ್ರೋ ಯತಿಃ।**
**ಪ್ರಾಚಾರ್ಯೋ ವ್ಯವಹಾರವಿತ್ಕುಶಲಧೀರ್ವ್ಯಾಖ್ಯಾನಸಿಂಹಾಸನೇ**
**ಪೂರ್ಣೇಂದ್ರೋರ್ಬಿಭರಾಂಬಭೂವ ಸುಷಮಾಂ ಪೂರ್ಣಃ**
**ಕಲಾಭಿಃ ಸ್ವಯಮ್ ॥ ೧೦೬**

ಇತಿ ಶ್ರೀಗುರುಕೃಪಾತರಂಗಿಣ್ಯಾಂ
ಚತುರ್ಥಸ್ತರಂಗಃ

ಶ್ರೀಗುರುವರ್ಯರಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಕಾಶಿಯಲ್ಲಿ ಏಳು **ವರ್ಷಗಳು** ವಾಸವಾಗಿದ್ದು ಎಲ್ಲಾ ಶಾಸ್ತ್ರಗಳನ್ನು ಚೆನ್ನಾಗಿ ಓದಿ ಪಾರಂಗತರಾದರು. **ಲೋಕವ್ಯವಹಾರ ನಿಷ್ಣಾತರೂ** ಕುಶಲಮತಿಗಳೂ ವ್ಯಾಖ್ಯಾನ ಸಿಂಹಾಸನಾಸೀನರೂ **ಆಗಿರುವ** ಇವರು ಸಕಲಕಲಾಪರಿಪೂರ್ಣನಾದ ಚಂದ್ರನ ಪರಮ ಶೋಭೆಯನ್ನು **ಧರಿಸಿರುವರು.**

ಇಲ್ಲಿಗೆ ಶ್ರೀ ಗುರುಕೃಪಾ ತರಂಗಿಣಿಯಲ್ಲಿ
ನಾಲ್ಕನೆಯ ತರಂಗ

*** *** ***

## ಪಂಚಮಸ್ತರಂಗಃ
### (ಶಿಖರಿಣೀವೃತ್ತಮ್)

ಅಥಾಚಾರ್ಯಶ್ಶಾಂತಃ ಕಿಲ ಪರಮದಾಂತಸ್ಸುಮನಸಾ-
ಮತೀವಾಸೌ ಕಾಂತ ಸ್ಸಕಲನಿಗಮಾಕ್ರಾಂತಧಿಷಣಃ ।
ಅಶೇಷಾಂತೇವಾಸಿಷ್ವಪಿ ಕುವಲಯೋಷ್ವಿಂದುರಪರಃ
ಪ್ರಭುರ್ಧರ್ಮಾದೇಶಪ್ರಗುಣರಮಣೀಯೋ ವಿಜಯತೇ ॥ ೧

ಕಾಶಿಯಿಂದ ವಿದ್ಯಾಭ್ಯಾಸ ಮುಗಿಸಿ ಹಿಂದಿರುಗಿ ಮಠಕ್ಕೆ ಬಂದು ಯಾವತ್ತೂ ತಮ್ಮ ಅಧಿಕಾರವನ್ನು ವಹಿಸಿಕೊಂಡ ಗುರುಗಳು ಅತ್ಯಂತ ಪ್ರಸನ್ನಚಿತ್ತರಾದರು. ಸಂಯಮಿಗಳಾದ ಅವರು ವಿದ್ವಾಂಸರಿಗೆ ತುಂಬಾ ಬೇಕಾದವರಾದರು, ಅವರ ಧೀಶಕ್ತಿಯು ಸಕಲವೈದಿಕ ಸಾಹಿತ್ಯವನ್ನು ವ್ಯಾಪಿಸಿತು ಸಕಲಶಿಷ್ಯರೆಂಬ ಕನ್ನೈದಿಲೆಗಳ ನಡುವೆ ಎರಡನೆಯ ತಂಗದಿರನಂತೆ ಅತೀವ ರೋಚಕರಾದರು ಧರ್ಮಾದೇಶದಿಂದ ವಿಶೇಷವಾಗಿ ಶೋಭಿಸುವ ಸ್ವಾಮಿಗಳು ಸರ್ವವಿಧವಾದ ಉತ್ಕರ್ಷವನ್ನು ಹೊಂದುವವರಾದರು

ಶರಾವತ್ಯಾಸ್ತೀರೇ ರಘುಕುಲಲಲಾಮಾಂಕಿತ ಪುರೇ
ಮಠೇಽದ್ವೈತಾಚಾರ್ಯಕ್ರಮಿಕಯತಿಪೀಠೇ ಶುಭಕರೇ ।
ಯಥಾಶಾಸ್ತ್ರಂ ಧರ್ಮಾಸನಮಧಿಗತಃ ಸಂಪ್ರತಿತನೋ
ಯತೀಂದ್ರೋ ಭಾತೀಂದ್ರೋತ್ತರಪದಯುತೋ
ರಾಘವಗುರುಃ ॥ ೨

ಶ್ರೀಮಚ್ಛಂಕರಾಚಾರ್ಯರ ಅದ್ವೈತ ತತ್ತ್ವೋಪದೇಶಕರಾದ ಗುರುಗಳ ಅವಿಚ್ಛಿನ್ನಪರಂಪರೆಯ ವ್ಯಾಖ್ಯಾನಪೀಠದಲ್ಲಿ ಶಾಸ್ತ್ರಸಂಪ್ರದಾಯಾನುಸಾರವಾಗಿ ಧರ್ಮಾಧಿಕಾರಾರೂಢರಾದ ಶ್ರೀಮದ್ರಾಮಚಂದ್ರಭಾರತೀಕರಕಮಲಸಂಜಾತರಾದ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳವರು ಶರಾವತೀತೀರದಲ್ಲಿರುವ ಶ್ರೀಮದ್ ರಾಮಚಂದ್ರಾಪುರದಲ್ಲಿ ಶೋಭಿಸುತ್ತಿದ್ದಾರೆ

ಪುರಾ ಕರ್ಣಾಟೇಷು ಪ್ರಥಿತಚರಿತಃ ಕ್ಷಾತ್ರವಿಜಯೀ
ಕದಂಬಾನಾಂ ವಂಶೋಽಪ್ಯಭವದಥ ಗೋಬ್ರಾಹ್ಮಣಹಿತಃ ।
ನೃಪಸ್ತದ್ವಂಶ್ಯೋ ಯಃ ಶ್ರುತಿವಿಹಿತಸದ್ಧರ್ಮನಿರತೋ
ಮಯೂರೋ ರಾಜಾ ಪ್ರಾಶಿಷದಿಹ ಚ ಗೋರಾಷ್ಟ್ರ
ಮಖಿಲಮ್ ॥ ೩

**ಹವ್ಯಕರು ಹುಟ್ಟಿ ಬೆಳೆದ ಹಿನ್ನೆಲೆ :** ಹಿಂದೆ ಕನ್ನಡನಾಡಿನಲ್ಲಿ ಹೆಸರ ವಾಸಿಯಾದ ಕದಂಬರ ವಂಶವು ಪ್ರಸಿದ್ಧವಾಗಿತ್ತು. ಕ್ಷತ್ರತೇಜಸ್ಸಿನಿಂದ ಶತ್ರುಗಳನ್ನು ಸೋಲಿಸಿ ವಿಜಯಗಳಿಸಿ ಮೆರೆದ ಆ ವಂಶವು ಗೋಬ್ರಾಹ್ಮಣ ಹಿತೈಷಿಯಾಗಿತ್ತು. ಆ ಅರಸು ಕುಲದಲ್ಲಿ ಹುಟ್ಟಿದ ಮಯೂರವರ್ಮನೆಂಬ ರಾಜನು ಸನಾತನಧರ್ಮನಿರತನಾಗಿದ್ದನು. ಆತನು ಸಮಸ್ತ ಗೋರಾಷ್ಟ್ರದೇಶವನ್ನು ಆಳಿದನು,

**ಅಹಿಚ್ಛತ್ರಾ*ದ್ಗೋತ್ರಪ್ರವರಸಹಿತಾನ್ ಸಪ್ತಕುಲಜಾನ್**
**ಸ್ವರಾಷ್ಟ್ರಕ್ಷೇಮಾರ್ಥೀ ಕ್ರತುಷು ಕುಶಲಾನ್ ಶ್ರೋತ್ರಿಯ ಗಣಾನ್ ।**
**ಸಮಾನಾಯ್ಯೈತೇಭ್ಯೋ ವ್ಯತರದುಪವೃತ್ತಿಂ ಚ ವಿವಿಧಾಂ**
**ಸ ಹೈವೇ ದೇಶೇಽಸ್ಥಾಪಯದವನಿಪೋ ವಿಪ್ರನಿಕರಾನ್ ॥ ೪**

ತನ್ನ ರಾಷ್ಟ್ರದ ಕ್ಷೇಮವನ್ನು ಬಯಸಿದ ಆ ಮಯೂರವರ್ಮ ರಾಜನು ಉತ್ತರ ಭಾರತದ ಅಯೋಧ್ಯೆಯ ಹತ್ತಿರವಿರುವ ಅಂದರೆ ಉತ್ತರ ಪಾಂಚಾಲದ ಆಹಿಚ್ಛತ್ರ ದೇಶದಿಂದ ಸಪ್ತಗೋತ್ರ ಪ್ರವರರ್ಷಿಗಳ ಕುಲದಲ್ಲಿ ಹುಟ್ಟಿದ ಶ್ರೋತ್ರಿಯರೂ ಯಾಜ್ಞಿಕಶ್ರೇಷ್ಠರೂ ಆದ ಬ್ರಾಹ್ಮಣರ ಶ್ರೇಣಿಯನ್ನು ಕರೆಯಿಸಿದನು ಬಳಿಕ ಆ ದೊರೆಯು ಅವರಿಗೆ ಬಗಬಗೆಯ ಉಪವೃತ್ತಿಗಳನ್ನು ಕಲ್ಪಿಸಿ ಕೊಟ್ಟು ಹೈವದೇಶದಲ್ಲಿ ಅವರನ್ನು ನೆಲೆಗೊಳಿಸಿದನು

**ಸುಶೀಲಾಃ ಷಟ್ಕರ್ಮಸ್ವಪಿ ಚ ಯಜನಾದ್ಯೇಷು ನಿರತಾಃ**
**ಜನೈಸ್ತತ್ತತ್ಕರ್ಮೋಚಿತವಿವಿಧನಾಮ್ನಾ ವ್ಯವಹೃತಾಃ ।**
**ಇಮೇ ಭಟ್ಟಾ ಯಜ್ವಾಽವಭೃಥ ಹೆಗಡೆ ದೀಕ್ಷಿತ ಸಭಾ–**
**ಹಿತಾ ಮಧ್ಯಸ್ಥಾ ಇತ್ಯುಪದಧತಿ ನಾಮಾನಿ ಕುಲತಃ ॥ ೫**

ಆಹಿಚ್ಛತ್ರದಿಂದ ಹೈವದೇಶಕ್ಕೆ ಬಂದಿರುವ ಈ ಬ್ರಾಹ್ಮಣರು ವೇದಾಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ ಎಂಬ ಷಟ್ಕರ್ಮಗಳಲ್ಲಿ ನಿರತರಾಗಿದ್ದರು. ಜನರು ಇವರನ್ನು ಅವರವರ ಕೆಲಸಕ್ಕೆ ಅನುಸಾರವಾದ ಹೆಸರಿನಿಂದ ಕರೆಯುತ್ತಿದ್ದರು. ಮಯೂರವರ್ಮನು ಕಲ್ಪಿಸಿದ ಉಪವೃತ್ತಿಗೆ ಅನುಗುಣವಾದ ಹೆಸರೇ ಇಂದಿಗೂ ಇವರಲ್ಲಿ ಆನುವಂಶಿಕವಾಗಿ ಬಂದಿದೆ. ಆದುದರಿಂದ ಇವರು ಭಟ್ಟ, ಯಾಜಿ, ಅವಭೃಥ, ಹೆಗಡೆ ದೀಕ್ಷಿತ, ಸಭಾಹಿತ, ಮಧ್ಯಸ್ಥ ಎಂಬ ಅವರವರ ಆನುವಂಶಿಕವಾದ ಹೆಸರನ್ನು ಹೊಂದಿರುವರು.

---

* ಅನುಬಂಧವನ್ನು ನೋಡಿ

ಯದಾ ಕಾಲಾಟಿಕ್ಯಾ ವ್ಯವಸ್ಥಿತಿರಭೂತ್ತಜ್ಜನಪದೇ
ತದೈಷಾಂ ಸಾ ಭಾಷಾ ತ್ವಭವದಧುನಾಪಿ ವ್ಯವಹೃತಾ ।
ಯತೋ ಹವ್ಯೇ ಕವ್ಯೇ ವಿಧಿವಿಹಿತ ಭವ್ಯೇಽತಿನಿಪುಣಾಃ
ತತಃ ಖ್ಯಾತಾ ವಿಪ್ರಾ ಭರತಭುವಿ ತೇ ಹವ್ಯಕಗಿರಾ ॥ ೬

ಅಹಿಚ್ಛತ್ರದಿಂದ ಕದಂಬನಾಡಿನ ಪ್ರದೇಶಕ್ಕೆ ಈ ಬ್ರಾಹ್ಮಣರು ಬಂದ ಸಮಯದಲ್ಲಿ ಇಲ್ಲಿ ಕನ್ನಡವು ಮಾತೃಭಾಷೆಯಾಗಿದ್ದುದರಿಂದ ಇವರೂ ಕೂಡ ಕನ್ನಡವನ್ನು ನಿತ್ಯದಲ್ಲಿ ಬಳಸುತ್ತಾ ಬಂದರು. ಅಂದು ಕದಂಬರು ಹಳಗನ್ನಡವನ್ನು ಬಳಸುತ್ತಿದ್ದುದರಿಂದ ಇವರ ನುಡಿ ಹಳಗನ್ನಡವಾಯಿತು. ಈಗಲೂ ಇವರ ಮಾತಿನಲ್ಲಿ ಹಳಗನ್ನಡದ ಛಾಯೆಯಿರುವುದನ್ನು ಕಾಣಬಹುದು. ವೈದಿಕ ಹಾಗೂ ಪೈತೃಕ ಯಾಗಗಳ ಆರ್ತ್ವಿಜ್ಯದಲ್ಲಿ ಮತ್ತು ಅದೃಷ್ಟದಿಂದ ನಿರ್ಣಯಿಸಲಾಗುವ ಭವಿತವ್ಯ ಅಂದರೆ ಜ್ಯೋತಿಷ್ಯಶಾಸ್ತ್ರದಲ್ಲಿಯೂ ಇವರು ನಿಪುಣರು. ಆದುದರಿಂದ ಇವರಿಗೆ ಲೋಕದ ಬಳಕೆಯಲ್ಲಿ ಹವ್ಯಕರು ಎಂದು ಕರೆಯುವುದು ವಾಡಿಕೆಯಾಯಿತು

ವಿಭಿನ್ನಾಸ್ತೇ ವೃತ್ತ್ಯಾ ವನಜನಪದಾವಾಸರಸಿಕಾಃ
ಕುಲಾಚಾರ್ಯಾನುಜ್ಞಾ-ಕೃತಬಹುಲಯಜ್ಞಾಃ ಕೃತಧಿಯಃ ।
ಬಭೂವುಸ್ತೇ ದೇವದ್ವಿಜಗುರುಸಮಾರಾಧನಪರಾಃ
ಪರಂ ತ್ವನ್ಯೋಽನ್ಯಂ ಸಂ-ಘಟನವಿಧುರಾಃ ಪ್ರಾಯಶ ಇಮೇ॥

ಜೀವನವೃತ್ತಿಯಿಂದ ಬೇರೆಬೇರೆಯಾದ ಅವರು ಮಲೆನಾಡಿನ ಹಳ್ಳಿಗಳಲ್ಲಿ ವಾಸಮಾಡತೊಡಗಿದರು. ಬುದ್ಧಿಶಾಲಿಗಳಾದ ಇವರು ತಮ್ಮ ವಂಶಪರಂಪರೆಯಿಂದ ನಡೆದುಕೊಂಡುಬಂದ ಧಾರ್ಮಿಕಪೀಠಾಧಿಪತಿಗಳಾದ ಗುರುಗಳ ಅನುಮತಿಯ ಮೇರೆ ಅಗ್ನಿಷ್ಟೋಮ, ಅತಿರಾತ್ರ ಮುಂತಾದ ಅನೇಕ ಯಾಗಗಳನ್ನು ಆಚರಿಸುತ್ತಿದ್ದರು. ಇವರು ದೇವಬ್ರಾಹ್ಮಣಗುರುಗಳಲ್ಲಿ ಪೂಜ್ಯ ಬುದ್ಧಿಯುಳ್ಳವರೂ ಹೌದು. ಆದರೆ ಬಹುಶಃ ಇವರು ತಮ್ಮಲ್ಲಿ ಒಬ್ಬರಿಗೊಬ್ಬರು ಹೊಂದಿಕೊಂಡುಬಾಳುವ ಸಂಘಟನೆಯ ಮನೋಭಾವ ಕಡಿಮೆಯಾಗಿದ್ದವರೆಂದು ಹೇಳಬಹುದು.

ಮತಃ ಸೋಽಯಂ ರಾಮಾನ್ವೃತವಿಮಲನಾಮಾವಲಿಭೃತಾಂ
ಗುರೂಣಾಂ ಗೋಕರ್ಣಾಹ್ವಯವಲಯಧರ್ಮಾಸನಜುಷಾಮ್।
ಅಭೂದೇಷಾಂ ಧರ್ಮ್ಯಾದಿಷು ಕೃತಿಷು ತಂತ್ರವ್ಯತಿಕರ-
ಸ್ತದಾದೇರದ್ಯಾವಧ್ಯಪಿ ನಿಜಕುಲಾಚಾರವಶತಃ ॥ ೮

ಗೋಕರ್ಣಮಂಡಲದ ದರ್ಮಾಚಾರ್ಯರೂ ರಾಘವೇಶ್ವರ, ರಾಮಚಂದ್ರ, ರಾಘವೇಂದ್ರ ಎಂದು ಮುಂತಾದ ಶ್ರೀರಾಮನ ನಿರ್ಮಲನಾಮಧೇಯವನ್ನು ಧರಿಸಿದ ಗುರುಗಳ ಮಠವಾದ ಈ ರಾಮಚಂದ್ರಾಪುರದ ಶ್ರೀಮಠವು ಈ ಹವ್ಯಕ ಬ್ರಾಹ್ಮಣರಿಗೆ ತಮ್ಮ ವಂಶಪರಂಪರೆಯ ಸಂಪ್ರದಾಯದಿಂದಲೂ ಧಾರ್ಮಿಕ ಕಾರ್ಯಗಳಲ್ಲಿ ಶಾಸ್ತ್ರನಿರ್ದೇಶಕವಾಗಿ ಆ ಮೊದಲ್ಗೊಂಡು ಈವರೆಗೂ ಆಗಿರುತ್ತದೆ

ಕಲೌ ಸಂಘೇ ಶಕ್ತಿಸ್ತ್ವಿತಿ ಜನವಚಸ್ಸಾಧು ವಿಮೃಶನ್
ಸ ಚಾಚಾರ್ಯೋ ಧರ್ಮೋದಯಸರಣಿವಿಘ್ನಾನ್ ಪರಿಹರನ್ ।
ಅವಾಂಛಚ್ಛಿಷ್ಯಾನ್ ಸ್ವಾನನಭಿಮುಖಚಿತ್ತಾನ್ ಘಟಯಿತುಂ
ಯತೋ ಲೋಕೇ ಭೂತ್ಯೈ ಭವತಿ ಗುರುಶಿಷ್ಯವ್ಯತಿಕರಃ ॥ ೯

ಪ್ರಕೃತ, ಶ್ರೀರಾಘವೇಂದ್ರಭಾರತೀಸ್ವಾಮಿಗಳು 'ಸಂಘೇ ಶಕ್ತಿಃ ಕಲೌ ಯುಗೇ' ಎಂಬ ನಾಣ್ನುಡಿಯನ್ನು ವಿಮರ್ಶಿಸುತ್ತಾ ಧರ್ಮಾಭಿವೃದ್ಧಿಯ ಹಾದಿಗೆ ಅಡ್ಡಲಾದ ಅಡಚಣೆಗಳನ್ನು ಹೋಗಲಾಡಿಸುತ್ತಾ, ಅನ್ಯೋನ್ಯ ಐಕಮತ್ಯವಿಲ್ಲದ ತಮ್ಮ ಶಿಷ್ಯರನ್ನು ಸಂಘಟಿಸಬೇಕೆಂದು ಬಯಸಿದರು. ಲೋಕದಲ್ಲಿ ಗುರುಶಿಷ್ಯರ ಹೊಂದಾಣಿಕೆಯು ಶ್ರೇಯಸ್ಸಿಗಾಗಿಯೇ ಅಲ್ಲವೇ!

ಹಿಮಾದ್ರೇರಾಸೇತುಕ್ಷಿತಿತಲಮಭಿವ್ಯಾಪ್ಯ ಸಕಲಂ
ಜನೋ ಯಶ್ಚಾಧ್ಯಾಸ್ತೇ ಸ ಖಲು ಕಥಿತೋ ಹಿಂದುರಿತಿ ಹ ।
ಶ್ರುತಿಪ್ರೋಕ್ತಾಚಾರೋ ಯ ಇಹ ಭಗವತ್ಪ್ರೀಣನಧಿಯಾ
ಪ್ರಕುರ್ವಾಣಃ ಕರ್ಮಾಣ್ಯತಿಶಯಿತ ಸೌಖ್ಯಾನಿ ಭಜತೇ ॥ ೧೦

ಶ್ರೀ ಶ್ರೀಗಳವರ ಭಾವನಾತರಂಗದಲ್ಲಿ ಕಾಣಿಸಿಕೊಂಡ ವಿಚಾರಧಾರೆಗಳು ಹೀಗಿದ್ದುವು - ಯಾವ ಜನರು ಹಿಮಾಲಯದಿಂದ ಸೇತುವಿನವರೆಗೂ ಹಬ್ಬಿರುವ ಭಾರತಭೂಮಿಯಲ್ಲಿ ಹುಟ್ಟಿ ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ಸದಾಚಾರನಿರತರಾಗಿ ಭಗವಂತನ ಪ್ರೀತಿಗಾಗಿ ಸತ್ಕರ್ಮಗಳನ್ನು ಆಚರಿಸುತ್ತಾ ಅತಿಶಯವಾದ ಸೌಖ್ಯವನ್ನು ಅನುಭವಿಸುವರೋ ಅವರಿಗೆ ಹಿಂದುಗಳೆಂದು ಹೇಳಲ್ಪಡುವರಲ್ಲವೇ!

ಜನೈಸ್ತತ್ತದ್ವರ್ಣಾಶ್ರಮಸಮುಚಿತಾಚಾರಸುಭಗೈಃ
ಕೃತಾನುಷ್ಠಾನೇನಾಹಿತಬಲಸಮೃದ್ಧಿರ್ಭಗವತೀ ।
ಶ್ರುತಿಃ ಸರ್ವಾನಸ್ಮಾನ್ರಮಯತಿ ಹಿ ಕಲ್ಯಾಣಪದವೀಂ
ತಥಾ ಯೋಗಕ್ಷೇಮೈಃ ಸುಖಯಿತುಮಲಂ ರಾಷ್ಟ್ರಮಖಿಲಮ್ ॥ ೧೧

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚತುರ್ವರ್ಣಗಳು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ ಎಂಬ ನಾಲ್ಕು ಆಶ್ರಮಗಳು. ಇವುಗಳಿಗೆ ಹೇಳಿದ ವರ್ಣಧರ್ಮ, ಆಶ್ರಮಧರ್ಮಗಳು, ಇವುಗಳಿಗೆ ಅನುಸಾರವಾದ ಆಚಾರಗಳಿಂದ ಶೋಭಿಸುವ ಧಾರ್ಮಿಕಜನತೆಯು ಶ್ರದ್ಧಾಭಕ್ತಿಯಿಂದ ಈಶ್ವರ ಪ್ರೀತ್ಯರ್ಥವಾಗಿ ಮಾಡಿದ ಕರ್ಮಗಳು ಫಲಿಸುತ್ತವೆ. ಇಂತಹ ವೈದಿಕಕರ್ಮಾನುಷ್ಠಾನಗಳ ಮೂಲಕ ವೈದಿಕಧರ್ಮವು ಬಲಗೊಳ್ಳುವುದು. ಹೀಗೆ ಬಲಗೊಂಡು ಸಮೃದ್ಧವಾದ ವೃಕ್ಷವಾದ ವೇದವು ಎಲ್ಲರಿಗೂ ಶ್ರೇಯಸ್ಸನ್ನು ನೀಡುವುದು ಮತ್ತು ಯೋಗಕ್ಷೇಮಗಳಿಂದ ಸಮಸ್ತರಾಷ್ಟ್ರವನ್ನು ಸುಖಗೊಳಿಸಲು ಸಮರ್ಥವಾಗುವುದು

ಅಥರ್ವಾದ್‌ ಬ್ರಾಹ್ಮಣ್ಯಂ ಪ್ರಥಮಮಿಹ ಸಂರಕ್ಷತು ಬುಧೋ<br>
ಯತಶ್ಚಾತುರ್ವರ್ಣ್ಯಂ ತದವನವಶಾದಭ್ಯುದಯತೇ ।<br>
ಯತಃ ಶ್ರೇಯಃ ಪ್ರೇಯೋ ದ್ವಯಮಿತಿ ಮಹಾವೈದಿಕತರೋಃ<br>
ಫಲೀಭೂತಂ ಹಸ್ತಾವಚಿತಮಿವ ನಃ ಸಂಪ್ರತಿ ಭವೇತ್‌ ॥ ೧೨

ಮೊದಲು ವಿದ್ಯಾವಂತಜನತೆಯು ಅಥರ್ವದಿಂದ ಬ್ರಾಹ್ಮಣಧರ್ಮವನ್ನು* ರಕ್ಷಿಸಲಿ. ಏಕೆಂದರೆ, ಯಾವ ಬ್ರಾಹ್ಮಣಧರ್ಮದ ರಕ್ಷಣೆಯಿಂದಲೇ ನಾಲ್ಕುವರ್ಣಗಳೂ ಅಭಿವೃದ್ಧಿಹೊಂದುವುವು ಬ್ರಾಹ್ಮಣ್ಯದ ರಕ್ಷಣೆಯಿಂದ ವೇದವೆಂಬ ವೃಕ್ಷದ ಹಣ್ಣಾಗಿರುವ ಶ್ರೇಯಸ್ಸು ಮತ್ತು ಪ್ರೇಯಸ್ಸುಗಳು ನಮ್ಮ ಕೈಗೆ ಎಟಕಬಲ್ಲವು.

ಪ್ರಸೂತೇ ಶಾಲೇಯಂ ಕ್ರಮುಕಫಲಭೂಶ್ಚೈಕ್ಷುಕ ಮಥೋ<br>
ಸುಕೃಷ್ಟಂ ಸೌವರ್ಣಂ ಫಲಮಿಹ ಕುಸೂಲೋದರಭರಮ್‌ ।<br>
ಅಪುಷ್ಟಂ ತತ್‌ ಕ್ಷೇಣಂ ನಿಖಿಲಮಪಿ ಶುಷ್ಕಂ ಸರ ಇವ<br>
ಕ್ಷಿಣೋತ್ಯಸ್ಮಚ್ಚಿತ್ತಂ ವಿಫಲಮುಪನೀತಂ ಧನಮಿವ ॥ ೧೩

ಚೆನ್ನಾಗಿ ಬೇಸಾಯಮಾಡಿದ ಬತ್ತದ ಗದ್ದೆ, ಅಡಿಕೆತೋಟ, ಕಬ್ಬಿನಗದ್ದೆ ಮೊದಲಾದ ಭೂಮಿಯು ಕಣಜತುಂಬುವಷ್ಟು ಬಂಗಾರದ ಬೆಳೆ ಬೆಳೆಯಬಲ್ಲದು. ಬೇಸಾಯವಿಲ್ಲದೇ ಹಾಳುಬಿದ್ದ ಇದೆಲ್ಲವೂ ಒಣಗಿದ ಕೆರೆಯಂತೆ. ದೋಚಿದ ಹಣದಂತೆ ನಮ್ಮ ಮನಸ್ಸಿಗೆ ನೋವನ್ನು ಉಂಟುಮಾಡುವುದು.

---

* ಯೋಗ, ತಪಸ್ಸು, ಧರ್ಮ, ದಾನ, ಸತ್ಯ, ಶೌಚ, ದಯೆ ಶಾಸ್ತ್ರಾಭ್ಯಾಸ, ವಿದ್ಯೆ, ಆಸ್ತಿಕ್ಯ, ವಿಜ್ಞಾನ ಮುಂತಾದುವುಗಳು ಬ್ರಾಹ್ಮಣಧರ್ಮಗಳು. ಮತ್ತು ಅಧ್ಯಾಪನ, ಅಧ್ಯಯನ, ಯಜನ, ದಾನ, ಪ್ರತಿಗ್ರಹ ಇವುಗಳು ಬ್ರಾಹ್ಮಣಧರ್ಮಗಳಾಗಿವೆ.

ಅತಃ ಕ್ಷೇತ್ರಾರಾಮಾಭ್ಯುದಯಕೃಷಿಕರ್ಮಸ್ವವಿರತಂ
ಪ್ರಯತ್ನಸ್ತ್ವಾವಸ್ಥೇಯೋ ಭವತಿ ಧನಧಾನ್ಯಾಪ್ತಯ ಇಹ ।
ಗುರೌ ಪ್ರಹ್ವಾ ಸಾಽಽನುಶ್ರವಿಕವಿಧಿಕಾ ಶಿಷ್ಯಜನತಾ
ಯತೋ ಭಕ್ತ್ಯಾ ದೇವಾನ್ ಯಜತು ಹವಿಷಾಽಽಪ್ನೋತು
ಕುಶಲಮ್ ॥ ೧೪

ಆದುದರಿಂದ ಊರಿನ ಗದ್ದೆ,ತೋಟ ಮೊದಲಾದವುಗಳ ಅಭಿವೃದ್ಧಿಗಾಗಿ ಕೃಷಿಕೆಲಸದ ವಿಷಯದಲ್ಲಿ ಅನವರತವಾದ ಪ್ರಯತ್ನಬೇಕು ಏಕೆಂದರೆ, ಗದ್ದೆ, ತೋಟಗಳ ವಿಶೇಷ ಕೃಷಿಯಿಂದ ಸಾಕಷ್ಟು ಧನಧಾನ್ಯಗಳನ್ನು ಪಡೆಯಬಹುದು ವೈದಿಕಧರ್ಮಮಾರ್ಗದಲ್ಲಿ ಸಾಗುತ್ತಿರುವ ಶಿಷ್ಯಜನತೆಯು ಗುರುಗಳ ಅನುಜ್ಞೆಯಂತೆ ಸದ್ಧರ್ಮಾನುಷ್ಠಾನಮಾಡಲಿ ಹವಿಸ್ಸಿನಿಂದ ದೇವತೆಗಳನ್ನು ತೃಪ್ತಿಪಡಿಸಲಿ ತಾವು ಕ್ಷೇಮವನ್ನು ಹೊಂದಲಿ ಗುರುಮಠದ ಸಮೃದ್ಧಿಯು ಶಿಷ್ಯಜನತೆಯ ಯೋಗಕ್ಷೇಮಕ್ಕಾಗಿಯೇ ಅಲ್ಲವೇ!

ಚ್ಯವೇತಾನುಷ್ಠಾನಾದ್ಯದಿ ಸ ನಿಗಮೋಕ್ತೋ ವಿಧಿರಯಂ
ತದಾ ತತ್ತದ್ವರ್ಣಾಶ್ರಮನಿಯಮನೈಯತ್ಯಮಪಿ ಚ ।
ತತಸ್ತ್ರೈಣಂ ಭ್ರಷ್ಟಂ ಭವತಿ ಖಲು ಕೃತ್ಸ್ನಂ ಯತ ಇದಂ
ಕುಲಂ ಶುದ್ಧಂ ಸ್ರೋತಃ ಕಲುಷಯತಿ ಕೂಲಂಕಷಮಿವ ॥

ಸನಾತನ ಧರ್ಮಸಂಪ್ರದಾಯ ಮತ್ತು ಶಿಷ್ಟಾಚಾರಗಳು ಆಚರಣೆಯಿಂದ ಕೈಬಿಟ್ಟುಹೋದರೆ ಆಯಾ ವರ್ಣಾಶ್ರಮಧರ್ಮಪಾಲನೆಗೆ ಅವಶ್ಯಕವಾದ ನಿಯಮ ಪಾಲನೆಯೂ ಸಡಿಲವಾಗುವುದು. ಕ್ರಮವಾಗಿ ಧರ್ಮವು ಹಾಳಾದಕೂಡಲೇ ಅಧರ್ಮವು ವಂಶವನ್ನು ಆಕ್ರಮಿಸುವುದು. ಅಧರ್ಮದ ಪ್ರಾಬಲ್ಯದಿಂದ ಸತ್ಕುಲದಲ್ಲಿ ಹುಟ್ಟಿದ ಸ್ತ್ರೀಯರು ದೋಷದೂಷಿತರಾಗುವರು. ಸ್ತ್ರೀಯರ ದೋಷದಿಂದ ಆದ ವರ್ಣಸಾಂಕರ್ಯ, ಪರಿಶುದ್ಧವಾದ ವಂಶವನ್ನು ದಡಕೊರೆಯುವ ಹೊಳೆ ನೀರೆಲ್ಲವನ್ನೂ ಬಗ್ಗಡವಾಗಿರುವಂತೆ ಮಲಿನಗೊಳಿಸುವುದು.

ಅತಃ ಸಂರಕ್ಷೇಯುರ್ಭರತಭುವಿ ಗೋಬ್ರಾಹ್ಮಣಹಿತಂ
ತದಾಯತ್ತಂ ಯಜ್ಞಾದ್ಯುಪಕರಣಮಿಷ್ಟಾರ್ಥಘಟಕಮ್ ।
ತತಃ ಶುದ್ಧೇ ಚಿತ್ತೇ ಶ್ರವಣಮನನಾದ್ಯೈರುಪರತಾ-
ವವಿದ್ಯಾನಿರ್ಮುಕ್ತೋ ಭವತಿ ನಿಖಿಲೋ ಜೀವನಿಕರಃ ॥ ೧೬

ಆದುದರಿಂದ ಭಾರತದಲ್ಲಿ ಗೋಬ್ರಾಹ್ಮಣರ ಹಿತವನ್ನು ಕಾಪಾಡಬೇಕು. ಏಕೆಂದರೆ, ಶ್ರುತಿವಿಹಿತವಾದ ಯಾಗಾದಿಗಳಿಗೆ ಹವಿಸ್ಸುಗಳು ಬೇಕು ಗೋವಿನಿಂದ ಯಾಗಕ್ಕೆ ಬೇಕಾದ ಹಾಲು, ತುಪ್ಪ ಮೊದಲಾದ ಗೋರಸಗಳು ಒದಗುತ್ತವೆ ವೇದಾಧ್ಯಯನ ಸಂಪನ್ನರಾದ ಶ್ರೋತ್ರಿಯರಾದ ಬ್ರಾಹ್ಮಣರು ಯಾಗಾದಿಗಳನ್ನು ಶಾಸ್ತ್ರವಿಧಿಯಂತೆ ನಿರ್ವಹಿಸಲು ಸಮರ್ಥರು, ಶ್ರದ್ಧಯಿಂದ ವಿಧಿವತ್ತಾಗಿ ನಡೆಸಲ್ಪಟ್ಟ ಕರ್ಮವು ಇಷ್ಟಾರ್ಥವನ್ನು ಕೊಡುವುದಷ್ಟೆ ಈಶ್ವರ ಪ್ರೀತ್ಯರ್ಥವಾಗಿ ವಿಧಿಯಂತೆ ಆಚರಿಸಿದ ಸತ್ಕರ್ಮದಿಂದ ಚಿತ್ತಶುದ್ಧಿಯಾಗುವುದು. ಚಿತ್ತಶುದ್ಧಿಯಿಂದ ಜೀವನು ಬ್ರಹ್ಮಜ್ಞಾನವಡೆಯಲು ಅರ್ಹನಾಗುವನು ಬಳಿಕ ವೈರಾಗ್ಯ ಹೊಂದಿ ಶ್ರವಣ, ಮನನಾದಿ ಸಾಧನಸಂಪತ್ತಿಪಡೆದ ಮುಮುಕ್ಷುಜನತೆ ವಿಷಯಸುಖದಿಂದ ಉಪರತವಾಗಿ ಗುರ್ವನುಗ್ರಹದಿಂದ ಜ್ಞಾನವಡೆದು ಅವಿದ್ಯಾನಿರ್ಮುಕ್ತವಾಗಿ ಸ್ವಸ್ವರೂಪವನ್ನು ತಿಳಿಯಬಲ್ಲದು

ಇಯಂ ದಿವ್ಯಾ* ವಾಣೀ ನಿಖಿಲನಿಗಮಾಮ್ನಾಯಿತತನು-
ಸ್ಸಮರ್ಥಾ ಶಾಸ್ತ್ರಾಂತಹೃದಯಮತಿಗೂಢಂ ಗಮಯಿತುಮ್ ।
ಪುರಾ ಸಾಮ್ರಾಜ್ಞೀವಾಪರಿಮಿತಸಮೃದ್ಧಿರ್ವಿಜಯತೇ
ಯದಸ್ಯಾ ಏವಾನ್ಯಾ ವಿಕೃತಿರಪಿ ದೇಶ್ಯಾ ಅಪಿ ಗಿರಃ ॥ ೧೭

ದೇವತೆಗಳ ವ್ಯವಹಾರಕ್ಕೆ ಅರ್ಹವಾಗಿಯೂ ಸಮಸ್ತ ವೈದಿಕಲೌಕಿಕಸಾಹಿತ್ಯಗಳಿಂದ ಅತಿಶಯವಾಗಿ ಪುಷ್ಟವಾಗಿಯೂ ಇರುವ ಭಾಷೆಯೇ ಸಂಸ್ಕೃತಭಾಷೆ. ಅತ್ಯಂತ ಗಂಭೀರವಾದ ಭಾರತೀಯ ದರ್ಶನಶಾಸ್ತ್ರಗಳ ಅಂತರಾಳದ ಸಾಂಪ್ರದಾಯಕವಾದ ಸೂಕ್ಷ್ಮರಹಸ್ಯವನ್ನು ತಿಳಿಸಲು ಈ ಭಾಷೆಯೇ ಸಮರ್ಥವಾಗಿದೆ. ಹಿಂದೆ ಅಪರಿಮಿತ ಸಮೃದ್ಧಿಯನ್ನು ಪಡೆದ ಇದು ಮಹಾರಾಣಿಯಂತೆ ಸರ್ವೋತ್ಕರ್ಷ ಪಡೆದಿತ್ತು. ಈಗಿರುವ ಭಾರತೀಯದೇಶ್ಯಭಾಷಗಳೆಲ್ಲವೂ ಇದರ ವಿಕೃತಿಗಳೇ ಅಲ್ಲವೇ!

ಇದಾನೀಂ ಸಾಽನಜ್ಞಾಮಿತರ ಜನ ಸಾಧಾರಣಕೃತಾಂ
ಪ್ರಪದ್ಯ ಸ್ವಾಂಗೇಷು ಸ್ಫುಟಮತಿತರಾಂ ಲೀಯತ ಇವ ।
ದುನೋತ್ಯಸ್ಮಚ್ಚಿತ್ತಂ ಕವಿಕುಲನೃಪಾಲೈರಭಿನುತಾ
ವರಾಕೀಯಂ ಕ್ಷಿಪ್ತಾ ಸ್ರಗಿವ ಪಥಿ ಗಂಧಾಢ್ಯಕುಸುಮಾ ॥ ೧೮

ಆದರೆ ಇಂದು ಆ ಸಂಸ್ಕೃತ ಭಾಷೆಯು ಸಾಮಾನ್ಯ ಜನತೆಯ ಅವಹೇಳನವನ್ನು ಹೊಂದಿ ತನ್ನಷ್ಟಕ್ಕೆ ತಾನೇ ತನ್ನ ಶರೀರದಲ್ಲಿ ಉಡುಗಿಹೋಗಿದೆಯೋ ಎನ್ನುವಂತಾಗಿದೆ. ಹಿಂದೆ ಅನೇಕ ಕವಿಪುಂಗವರಿಂದಲೂ ರಾಜಾಧಿರಾಜರಿಂದಲೂ

* ಅನುಬಂಧವನ್ನು ನೋಡಿ.

ತಲೆಬಾಗಿ ನಮಿಸಿ ಹೊಗಳಲ್ಪಟ್ಟಿದ್ದ ಇದು ಬೀದಿಗೆ ಎಸೆಯಲ್ಪಟ್ಟ ಘಮ ಘಮಿಸುವ ಹೂವಿನ ಮಾಲೆಯಂತೆ ಬಡಪಾಯಿಯಾಗಿದೆ ಇದು ನಮ್ಮ ಮನಸ್ಸಿಗೆ ತುಂಬ ನೋವನ್ನು ಉಂಟುಮಾಡಿದೆ.

ಋತೇ ತದ್ಗೈರ್ವಾಣ್ಯಾಸ್ಸಮುಚಿತಸಮುತ್ತೇಜನವಿಧೇಃ
ಕ್ರತುಂ ಸಾಂಗೋಪಾಂಗಂ ಸವಿಧಿ ಸುವಿಧಾತುಂ ನ ಯತತೇ ।
ಪ್ರಬುದ್ಧೇ ವೇದಾರ್ಥೇ ನ ಖಲು ಸ ನಿವರ್ತೇತ ಪುರುಷೋ
ಯತೋ ವಿದ್ವಾನ್ ಯಷ್ಟ್ವಾ ಭಜತಿ ಹಿ ಪುಮರ್ಥಾ-
ನವಿಕಲವನ್ ॥ ೧೯

ಆ ಸಂಸ್ಕೃತ ಭಾಷೆಯ ಸಂವರ್ಧನೆಗೆ ಯೋಗ್ಯವಾದ ಪ್ರೋತ್ಸಾಹಕ ವಿಧಾನಗಳು ಏರ್ಪಡದ ಹೊರತು ಧಾರ್ಮಿಕ ಜನತೆಯು ಅಂಗೋಪಾಂಗಸಹಿತವಾದ ಯಾಗಾದಿಗಳನ್ನು ವಿಧಿವತ್ತಾಗಿ ಚೆನ್ನಾಗಿ ಆಚರಿಸಲು ಯತ್ನಿಸಲಾರದು ವೇದಾರ್ಥಗಳು ಚೆನ್ನಾಗಿ ತಿಳಿದ ಮೇಲೆ ಯಜಮಾನನು ಕರ್ಮಾನುಷ್ಠಾನಗಳಿಗೆ ಹಿಂಜರಿಯುವುದಿಲ್ಲ. ಏಕೆಂದರೆ, ಸಂಸ್ಕೃತ ಭಾಷೆಯ ಪಾಂಡಿತ್ಯವಿರುವ ಅವನು ಕರ್ಮಸ್ವರೂಪವನ್ನು ತದ್ವಿಧಿಯನ್ನು ತಿಳಿದಿರುತ್ತಾನೆ. ವಿದ್ವಾಂಸನಾದ ಯಜಮಾನನು ವಿಧಿವತ್ತಾಗಿ ಈಶ್ವರ ಪ್ರೀತ್ಯರ್ಥವಾಗಿ ಕರ್ಮಗಳನ್ನು ಆಚರಿಸುವುದರಿಂದ ತನ್ನ ಇಷ್ಟಾರ್ಥಗಳನ್ನು ಪರಿಪೂರ್ಣವಾಗಿ ಪಡೆಯುವನಷ್ಟೆ

ಅತಶ್ಶಾಸ್ತ್ರ್ಯಾಃ ಸರ್ವಾವಯವಪರಿಪೋಷಾಯ ಸತತಂ
ಪ್ರಯತ್ನಂ ಕುರ್ವಂತು ಪ್ರತಿಹತವಿರೋಧಂ ಕೃತಧಿಯಃ ।
ಯಥಾಪೂರ್ವಂ ಲೋಕೇ ಸುರಪುರಪುರಂಧ್ರೀಪದಯುಗ-
ಕ್ವಣನ್ಮಂಜೀರಾಭಾ ಪ್ರತಿಸದನಮೇಷಾ ವಿಹರತಾನ್ ॥ ೨೦

ಆದುದರಿಂದ ಪಂಡಿತರು ದೇವವಾಣಿಯ ಸರ್ವಾಂಗೀಣವಾದ ಬೆಳವಣಿಗೆಗಾಗಿ ಈಗ ಅದಕ್ಕೆ ಇರುವ ಅಡ್ಡಿ ಆಡಚಣೆಗಳನ್ನು ಪರಿಹರಿಸಿ, ಯಾವಾಗಲೂ ಪ್ರಯತ್ನ ಮಾಡಬೇಕು. ಈ ಸುರಸರಸ್ವತಿಯು ಹಿಂದಿನಂತೆ ಮತ್ತೆ ಲೋಕದಲ್ಲಿ ದಿವ್ಯ ನಾರಿಯರ ಇಂಚರಗೈಯುವ ಕಾಲಂದಿಗೆಯ ಶೋಭೆಯುಳ್ಳದ್ದಾಗಿ ಮನೆ ಮನೆಯಲ್ಲಿಯೂ ವಿಹರಿಸಲಿ.

ಸದಾಚಾರಪ್ರಾಣಾ ಪ್ರಣವಮುಖರಾ ಭಾರತಭುವಂ
ಪುನಾನಾ ಸರ್ವೇಷಾಂ ನಿರತಿಶಯಸೌಖ್ಯಂ ವಿದಧತೀ ।
ವಸಂತೀ ಸಂಪುಷ್ಟಾ ವಿರಹಿತಭಯಾ ಬ್ರಾಹ್ಮಣಕುಲೇ
ತ್ರಯೀ ಧರ್ಮಾಚಾರಪ್ರವಣರಮಣೀಯಾ ವಿಜಯತಾನ್ ॥

ಸಂಸ್ಕೃತ ಭಾಷೆಯು ಅಭಿವೃದ್ಧಿಯು ಜೊತೆಗೆ ವೇದಾಧ್ಯಯನವೂ ಅಭಿವೃದ್ಧಿ ಹೊಂದಬೇಕು. ಇಂದು ವರ್ಣಾಶ್ರಮಧರ್ಮಗಳ ಆಚರಣೆಯು ಶಿಥಿಲವಾಗಿದೆ. ಭಾರತದಲ್ಲಿ ಇರುವ ಬ್ರಾಹ್ಮಣ ಶ್ರೇಣಿಗೆ ವೇದಾಧ್ಯಯನ ಹಾಗೂ ವೇದವಿಹಿತವಾದ ಆಚಾರಗಳಲ್ಲಿ ಶ್ರದ್ಧೆ ಕಡಿಮೆಯಾಗಿದೆ ಆದುದರಿಂದ ಮೊದಲು ವೇದದ ಅಭಿವೃದ್ಧಿ ಯಾಗಬೇಕು. ಓಂಕಾರಪೂರ್ವಕವಾದ ವೇದಾಧ್ಯಯನಕ್ಕೆ ಸದಾಚಾರವೇ ಉಸಿರು ಕರ್ಮಭೂಮಿಯಾದ ಭಾರತವನ್ನು ವೇದವು ಪವಿತ್ರಗೊಳಿಸುತ್ತಾ ಸಂಪ್ರಾಪ್ತವಾಗಿ ಯಾವ ಅಂಜಿಕೆಯೂ ಇಲ್ಲದ ಬ್ರಾಹ್ಮಣ ವಂಶದಲ್ಲಿ ನೆಲೆಗೊಳ್ಳಲಿ. ಈ ಋಕ್, ಯಜು, ಸಾಮಗಳೆಂಬ ತ್ರಯೀ ವಿದ್ಯೆ ಶ್ರುತ್ಯುಕ್ತವಾದ ಧರ್ಮದಲ್ಲಿ ಆಸಕ್ತರಾದ ಆಸ್ತಿಕ ಮಹಾಶಯರ ರಕ್ಷಣೆಯಿಂದ ಕಂಗೊಳಿಸುತ್ತಾ ಮತ್ತೆ ಸರ್ವೋತ್ಕರ್ಷದಿಂದ ಮೆರೆಯಲಿ

**ಇತಿ ಸ್ವಾಂತೇ ಸಾಮಾಜಿಕವಿವಿಧಕಾರ್ಯಾನ್ವಿತನಯಾನ್**
**ವಿಚಿಂತ್ಯಾರ್ಯಸ್ತಾಂಸ್ತಾನ್ ಕೃತಿಷು ವಿನಿಯೋಕ್ತುಂ ದೃಢಮತಿಃ ।**
**ಅಮಾತ್ಯಾದಿತ್ಯಾಕ್ತಾರ್ಯೇಷ್ವಪಿ ಗುರುಷು ತೇಷ್ವಾಹಿತರತಿಃ**
**ಕ್ರಮಾತ್ತೀರ್ಥೇಷು ಕ್ಷ್ಮಾಪತಿರಿವ ಸ ಧೀರಃ ಸ್ವಯಮಹೋ ॥**

ಹೀಗೆ, ಗುರುಗಳು ಮಾನಸ್ಸಿನಲ್ಲಿ ವಿವಿಧ ಸಾಮಾಜಿಕ ಕಾರ್ಯಗಳಿಗೆ ಅನ್ವಯ ವಾಗುವ ನೀತಿಗಳನ್ನು ಆಲೋಚಿಸಿದರು ಬಳಿಕ ಆಯಾ ನೀತಿಗಳನ್ನು ಕಾರ್ಯ ಗಳಲ್ಲಿ ವಿನಿಯೋಗಿಸಲು ದೃಢ ನಿರ್ಧಾರ ಮಾಡಿದರು ಆಯಾ ಮಹತ್ತರ ಕಾರ್ಯ ನಿರ್ವಹಣೆಯಲ್ಲಿ ಶ್ರದ್ಧೆಯಿರುವ ಧೈರ್ಯಶಾಲಿಗಳಾದ ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳು ನೀತಿಶಾಸ್ತ್ರವಿಶಾರದನಾದ ಚಕ್ರವರ್ತಿಯು ಕಾರ್ಯಸಿದ್ಧಿಗಾಗಿ ಮಂತ್ರಿ, ಪುರೋಹಿತ, ಯುವರಾಜ ಮುಂತಾದ ಅಷ್ಟಾದಶತೀರ್ಥಗಳಲ್ಲಿ ಇಳಿಯುವಂತೆ ಕಾರ್ಯಸಾಧನೆಯಲ್ಲಿ ಇಳಿದರು. (ತೊಡಗಿದರು)

**ವಿಶಾಲೇ ಗೋಕರ್ಣಾಹ್ವಯವಲಯಮಧ್ಯೇ ನಿವಸತಾಂ**
**ಸಮೇಷಾಂ ಶಿಷ್ಯಾಣಾಂ ಗುರುಚರಣಸೇವೋತ್ಸುಕಧಿಯಾಮ್ ।**
**ಹಿತಂ ವಾಂಛನ್ನಾರ್ಯೋ ವಿವಿಧರುಚಿಭಾಜಾಂ ಜನಿಭೃತಾಂ**
**ಸಮಾವೇಶಂ ಚಕ್ರೇ ಸಹೃದಯಧುರೀಣಃ ಕರುಣಯಾ ॥ ೨೩**

ಗೋಕರ್ಣಮಂಡಲ ವಿಶಾಲವಾದುದು. ಈ ಪ್ರಾಂತದ ನಡುವೆ ವಾಸಿಸು ತ್ತಿರುವ ಸಮಸ್ತ ಶಿಷ್ಯರೂ ಗುರು ಸೇವೆಯ ವಿಷಯದಲ್ಲಿ ಉತ್ಸಾಹವುಳ್ಳವರೇ ಆದರೂ 'ಲೋಕೋ ಭಿನ್ನರುಚಿಃ' ಎಂಬಂತೆ ಭಿನ್ನಾಭಿಪ್ರಾಯಗಳಿರುವ ಆ ಎಲ್ಲಾ ಶಿಷ್ಯರಲ್ಲಿ ಐಕಮತ್ಯವನ್ನು ಉಂಟುಮಾಡುವುದು ಸುಲಭವಾಗಿರಲಿಲ್ಲ. ಸಹೃದಯ ಧುರೀಣರಾದ ಗುರುಗಳು ಈ ಶಿಷ್ಯರ ಹಿತಕ್ಕಾಗಿ ಕರುಣೆಯಿಂದ ಸಮಸ್ತ ಶಿಷ್ಯರ ಅಧಿವೇಶನವನ್ನು ಏರ್ಪಡಿಸಿದರು

ಗುರೂಣಾಂ ಸಾನ್ನಿಧ್ಯೇ ಪ್ರಥಮ ಪರಿಷ*ದ್ಧವ್ಯಕಮಹಾ-
ಜನಾನಾಮುತ್ಸಾಹಾದಭವದಥ ತೀರ್ಥಳ್ಳಿ ನಗರೇ ।
ಸಮಾವೇಶಃ ಸೋಽಯಂ ವಿವಿಧಪುರುಷಾರ್ಥೈಕಘಟನಾ-
ಪಟೂನ್ ಪ್ರಸ್ತಾವಾಂಸ್ತಾನಕೃತ ಗುರುಶಿಷ್ಯೋಭಯಹಿತಾನ್॥

ಶ್ರೀಗುರುಗಳ ಸನ್ನಿಧಿಯಲ್ಲಿ ಮೊತ್ತಮೊದಲನೆಯ ಹವ್ಯಕಮಹಾಪರಿಷತ್ತು ಜನರ ಉತ್ಸಾಹದಿಂದ ತೀರ್ಥಳ್ಳಿಯಲ್ಲಿ ನಡೆಯಿತು. ಅಲ್ಲಿ ಗುರುಶಿಷ್ಯರಿಬ್ಬರಿಗೂ ಹಿತವಾಗುವಂತಹ ಅನೇಕ ಪ್ರಸ್ತಾವಗಳು ತೀರ್ಮಾನಗೊಂಡವು.

ಪ್ರಕೀರ್ಣಃ ಶಿಷ್ಯಾಣಾಂ ಪ್ರಕರ ಇಹ ಚೈಕತ್ರ ಮಿಲತಃ
ಸಮಾಜಸ್ಯ ಶ್ರೇಯಸ್ಕರಮಿತರಕಾರ್ಯಂ ಚ ವಿಮೃಶನ್ ।
ಅಥಾಧ್ಯಾತ್ಮಶ್ರೇಯೋವಹಮನಿತರಾವ್ಯಂ ಕೃತಿಶತಂ
ವಿಧಾತುಂ ಸೋತ್ಸಾಹೋಽಭವದತಿಶಯಾನಂದಭರಿತಃ ॥ ೨೫

ಹಲವಾರು ಸ್ಥಳಗಳಲ್ಲಿ ಹರಡಿ ನೆಲೆಸಿದ್ದ ಶ್ರೀರಾಮಚಂದ್ರಾಪುರಮಠದ ಶಿಷ್ಯರ ಸಮೂಹವು ಈ ಅಧಿವೇಶನದಲ್ಲಿ ಒಂದುಗೂಡಿತ್ತು. ಅದು ಹವ್ಯಕಜನಾಂಗದ ಕಲ್ಯಾಣಕರವಾದ ಕಾರ್ಯಗಳನ್ನು ಕುರಿತು ವಿಚಾರಿಸುತ್ತಾ, ಇತರ ಶಿಷ್ಯದುರ್ಲಭವಾದ ಆಧ್ಯಾತ್ಮಿಕಶ್ರೇಯಸ್ಕರವಾದ ಅನೇಕ ಯೋಜನೆಗಳನ್ನು ಸಭೆಯಲ್ಲಿ ಮಂಡಿಸಲು ಆನಂದಭರಿತವಾಗಿ ಉತ್ಸಾಹಶಾಲಿಯಾಗಿ ಇತ್ತು.

ಸಮಾವೇಶೇ ಚಾದ್ಯೇ ಸದಸಿ ಮುದಿತೇನಾತ್ರ ಗುರುಣಾ
ಸಮಸ್ತಾ ಶಿಷ್ಯಾಲಿರ್ನಿರತಿಶಯಹರ್ಷಂ ಗತವತೀ ।
ತಥಾ ಪ್ರೀತಃ ಸೋಽಯಂ ನಿಜಚರಣಸೇವಾರ್ಪಿತಧಿಯಾ
ತಯಾ ಶಿಷ್ಯಶ್ರೇಣ್ಯಾ ವ್ಯಕಸದತಿವೇಲಂ ಗುರುರಪಿ ॥ ೨೬

ಮೊತ್ತಮೊದಲನೆಯ ಹವ್ಯಕಮಹಾಧಿವೇಶನದ ಈ ಸಭೆಯಲ್ಲಿ ಸಂತುಷ್ಟರು ಅಧಿನಾಯಕರೂ ಆದ ಗುರುಗಳಿಂದ ಎಲ್ಲಾ ಶಿಷ್ಯಮಂಡಲಿಯೂ ಅತಿಶಯವಾದ ಸಂತೋಷವನ್ನು ಪಡೆಯಿತು ಹಾಗೆಯೇ ತಮ್ಮ ಚರಣಸೇವಾಸಕ್ತವಾದ ಬುದ್ಧಿಯುಳ್ಳ ಈ ಶಿಷ್ಯಶ್ರೇಣಿಯಿಂದ ಸಂಪ್ರೀತರಾದ ಆ ಶ್ರೀರಾಘವೇಂದ್ರಭಾರತೀ ಗುರುವರ್ಯರೂ ಕೂಡಾ ಅತಿಶಯವಾಗಿ ಹಿಗ್ಗಿದರು.

---

*ಟಿಪ್ಪಣಿ : ಅನುಬಂಧವನ್ನು ನೋಡಿ.

ತತಃ ಸಾ ಸಂಪುಷ್ಟಾ ರಸಿಕಹೃದಯೋನರ್ಜನಕರೀ
ಲತೇವಾಂಭಸ್ಸೇಕಾತ್ಕಿಸಲಯಿತಸರ್ವಾಂಗರುಚಿರಾ ।
ಗುರೂಣಾಂ ವಾತ್ಸಲ್ಯಾಮೃತರಸಭರಾ ಹವ್ಯಕಮಹಾ-
ಸಭಾ ಸರ್ವಶ್ಲಾಘ್ಯಾ ಜಯತಿ ಕಿಲ ಕಲ್ಯಾಣನಗರೇ* ॥ ೨೭

ಹವ್ಯಕಮಹಾಧಿವೇಶನದ ತರುವಾಯ ಗುರುಗಳ ವಾತ್ಸಲ್ಯಾಮೃತರಸ ಪ್ರವಾಹದಿಂದ ಆರ್ದ್ರಕವಾಗಿ ಪುಷ್ಟಿಹೊಂದಿ, ಹವ್ಯಕಮಹಾಸಭೆಯು ನೀರೆರೆದು ಚಿಗುರೊಡೆದು ಸರ್ವಾಂಗಸುಂದರವಾದ ಬಳ್ಳಿಯಂತೆ ಸಹೃದಯರ ಮನಸ್ಸನ್ನು ಆಕರ್ಷಿಸುತ್ತಾ ಎಲ್ಲರ ಹೊಗಳಿಕೆಗೂ ತಕ್ಕುದಾಗಿ ಬೆಂಗಳೂರಿನಲ್ಲಿದ್ದ ಸಂಸ್ಥೆಯೇ ವಿಸ್ತೃತಹೊಂದಿ ಸರ್ವೋತ್ತಮವಾಗಿ ಇದೆಯಲ್ಲವೇ!

ಅನುಷ್ಠಾತುಂ ಸದ್ಭಿಃ ಶ್ರುತಿವಿಹಿತಕರ್ಮಾಣ್ಯವಿರತಂ
ಜನಾನಾಂ ಸಿದ್ಧಾಂತಾನ್ವಿತಗುಣಿತಕಾಲಃ ಶುಭಕರಃ ।
ವಿಚಿಂತ್ಯೈಸಾವಿತ್ಥಂ ಕಿಲ ನಿಖಿಲಶಿಷ್ಯೈರನುಮತಂ
ಪ್ರಶಸ್ತಂ ಪಂಚಾಂಗಂ ನಿರದಿಶದಥೋ ಧಾರ್ಮಿಕಮಿದಮ್॥ ೨೮

"ನಾನಾಜನ ಸಮೂಹದ ನಡುವೆ ವಾಸಿಸುವ ಆಸ್ತಿಕಸಜ್ಜನರು ಯಾವಾಗಲೂ ಸತ್ಕರ್ಮಗಳನ್ನು ಆಚರಿಸಲು ಅನುಕೂಲವಾದ ಸೂರ್ಯಸಿದ್ಧಾಂತದ ಅನುಸಾರ ಲೆಕ್ಕಹಾಕಿ ಗುಣಿಸಿದ ಕಾಲವು ಶುಭಕರವಾದದ್ದು, ಎಂದು ಗುರುವರ್ಯರು ಆಲೋಚಿಸಿದರು. ಬಳಿಕ ತಮ್ಮ ಶಿಷ್ಯಸಮಾಜದಲ್ಲಿ ಎಲ್ಲರೂ ತಮ್ಮ ತಮ್ಮ ಧಾರ್ಮಿಕಾನುಷ್ಠಾನಕ್ಕೆ ಸಿದ್ಧಾಂತಾನುಗುಣವಾದ ಕಾಲವನ್ನು ಗೊತ್ತುಪಡಿಸಿಕೊಳ್ಳಲಿ" ಎಂದು ಎಲ್ಲಾ ವೈದಿಕಶಿಷ್ಯರಿಂದ ಸಮ್ಮತಿಸಲ್ಪಟ್ಟ ಪ್ರಶಸ್ತವಾದ ಧಾರ್ಮಿಕಪಂಚಾಂಗವನ್ನು ನಿರ್ದೇಶಿಸಿದರು.

ಧ್ರುವಂ ಪ್ರಾಚೀನಾರ್ಯಾಸ್ತಪಸಿ ನಿರತಾಃ ಶಾಸಿತುಮಿದಂ
ವಿಶಾಲಂ ಶಿಷ್ಯಾಣಾಂ ವಲಯಮನಲಂಭೂಷ್ಣವ ಇಮೇ ।
ವಿಭಜ್ಯೈತಚ್ಛಾಖಾಮಠಪತಿಷು ತಚ್ಛಾಸನಧುರಾಂ
ನಿವೇಶ್ಯಾತ್ಮಾರಾಮಾ ರಹಸಿ ಖಲು ನಿಧ್ಯಾನಮಭಜನ್ ॥ ೨೯

**ಶಾಖಾಮಠಗಳವಿಷಯ** : ಶ್ರೀರಾಮಚಂದ್ರಾಪುರದ ಮಠದ ಹಿಂದಿನ ಆಚಾರ್ಯವರ್ಯರು ಸ್ವಭಾವತಃ ವಿರಕ್ತರೂ ತಪೋನಿರತರೂ ಆಗಿದ್ದುದರಿಂದ ವಿಶಾಲವಾದ ಶಿಷ್ಯಮಂಡಲದ ಧರ್ಮಾನುಶಾಸನಮಾಡಲು ಬಹುಶಃ ಇವರು ಅಸಮರ್ಥರಾಗಿದ್ದರು ಆದುದರಿಂದ ಅವರು ಆಯಾ ಪ್ರಾಂತಗಳಲ್ಲಿ ಉಪಮಠಗಳನ್ನು ಸ್ಥಾಪಿಸಿ, ಧರ್ಮಾ

*ಕಲ್ಯಾಣನಗರ–ಬೆಂಗಳೂರು.

ಸಿಂಹಾಸನದ ನೆಲೆಯಾಗಿ ಪಾರಿವ್ರಾಜಿಕ ಶಿಷ್ಯರನ್ನು ನೇಮಿಸಿದರು. ಬಳಿಕ ತಾವು ಆತ್ಮಾರಾಮರಾಗಿ ಏಕಾಂತದಲ್ಲಿ ಧ್ಯಾನಯೋಗವನ್ನು ಹೊಂದಿದರು. ಆದುದರಿಂದ ಈ ಮಠಕ್ಕೆ ಅನೇಕಶಾಖಾಮಠಗಳು ಆದುವು.

ತತಃ ಶಾಂತಾಃ ಶಿಷ್ಯೈರಭಿನುತಪದಾಸ್ತೇ ಚ ಯತಿನೋ
ಯಥಾಶಾಸ್ತ್ರಂ ಯತ್ಯಾಶ್ರಮವಿಹಿತಧರ್ಮೇಷ್ವಭಿರತಾಃ ।
ತಪಃಪೂತಾತ್ಮಾನೋ ಧವಲಯಶಸಃ ಪುಣ್ಯಚರಿತಾಃ
ಗುರುಂ ಸ್ಮಾರಂ ಸ್ಮಾರಂ ಹರಿಪದಮವಿಂದನ್ನುಪರಮೇ ॥ ೩೦

ಅನಂತರ ಶಾಂತರಾದ ಆ ಶಾಖಾಮಠದ ಯತಿವರ್ಯರು ತಮ್ಮ ಸಂಪ್ರದಾಯಶುದ್ಧವಾದ ಸಂನ್ಯಾಸಧರ್ಮದ ಆಚರಣೆಯಿಂದ ಆ ಪ್ರಾಂತದ ಶಿಷ್ಯಮಂಡಲಿಗೆ ಪೂಜ್ಯರಾದರು. ಸ್ವಧರ್ಮಾಸಕ್ತರಾದ ಅವರು ಹಿರಿಯಗುರುಗಳು ತಮಗೆ ವಿಧಿಸಿದ ಕಾರ್ಯಗಳನ್ನು ಶ್ರದ್ಧೆಯಿಂದ ನಿರ್ವಹಿಸುತ್ತಿದ್ದರು. ತಪಸ್ಸಿನಿಂದ ನಿರ್ಮಲಚಿತ್ತರಾದ ಇವರ ಧವಳಕೀರ್ತಿ ಎಲ್ಲೆಡೆಗೂ ಪಸರಿಸಿತು. ಪುಣ್ಯಚರಿತರಾದ ಆ ಯತಿಗಳು ತಾವು ಬದುಕಿರುವಷ್ಟು ಸಮಯ ಧರ್ಮಮಾರ್ಗನಿರ್ದೇಶಕರಾಗಿ ಬಾಳಿದರು. ಅವರು ತಮ್ಮ ಕೊನೆಗಾಲದಲ್ಲಿ ತಮ್ಮ ಗುರುಗಳನ್ನು ಬಾರಿ ಬಾರಿಗೂ ಸ್ಮರಿಸಿ ತಮ ದೇಹವನ್ನು ತ್ಯಜಿಸಿ ಮುಕ್ತರಾದರು.

ತತಃ ಕಾಲೇ ಯಾತೇ ಕಲಿನಿಹತಚಿತ್ತೇ ಜನಪದೇ
ಸಮುಚ್ಛಿನ್ನೇ ಚಾನುಕ್ರಮಿಕಗುರುಶಿಷ್ಯವ್ಯತಿಕರೇ ।
ತಮೋಭೂಯಿಷ್ಠಾಯಾಂ ನಿಶಿ ಪರಿಗತಾ ಶಿಷ್ಯಜನತಾ
ನಿರೈಕ್ಷಿಷ್ಟೋಷ್ಣಾಂಶೋರುದಯಮಭಿತಃ ಸಾಧ್ವಸವತೀ ॥ ೩೧

ಆ ಶಾಖಾಮಠಗಳಲ್ಲಿ ಕೆಲವುಕಾಲ ಗುರುಪರಂಪರೆಯು ಮುಂದುವರಿಯಿತು. ಅನಂತರ ಕೆಲವು ಕಾಲ ಕಳೆಯಲಾಗಿ ಹಳ್ಳಿ ಹಳ್ಳಿಗಳೂ ಕಲಿದೋಷಗ್ರಸ್ತವಾಯಿತು. ಸಂಪ್ರದಾಯವು ವಿಚ್ಛಿನ್ನವಾಗುವಂತಹ ಸನ್ನಿವೇಶಗಳು ಉಂಟಾದುವು. ಆಗ ಗುರುಶಿಷ್ಯರ ಸಂಬಂಧ ಕೈಬಿಟ್ಟುಹೋಯಿತು. ಧಾರ್ಮಿಕಶ್ರದ್ಧೆ ಜನತೆಯಲ್ಲಿ ಕ್ಷಯಿಸಿದುದರಿಂದ ಧಾರ್ಮಿಕಕೆಲಸಗಳಲ್ಲಿ ಮುಂದುವರಿಯಲು ಯಾರೂ ಮುಂದೆಬರಲಿಲ್ಲ. ಹೀಗಾಗಿ, ಕೆಲವು ಆಸ್ತಿಕಶ್ರದ್ಧಾಭಕ್ತಿಯ ಧಾರ್ಮಿಕಜನತೆಯು ಕಗ್ಗತ್ತಲೆಕವಿದ ಇರುಳಿನಲ್ಲಿ ಉಳಿಯಿತು. ಮುಂಗಾಣದ ಆ ಜನತೆ ಪ್ರಗತಿಯ ದಾರಿಗಾಣದೇ ಅಂಜಿಕೆಗೊಂಡಿತ್ತು. ಅದು ಸೂರ್ಯೋದಯವಾಗುವುದನ್ನೇ ನಿರೀಕ್ಷಿಸುತ್ತಿತ್ತು.

ತಪೋನಿಷ್ಠೇ ಹ್ಯಸ್ಮಿನ್ ಪ್ರವಚನಪಟಿಷ್ಠೇ ಯತಿಪತೌ
ಗುರೌ ಗ್ರಾಮಾದ್ ಗ್ರಾಮಂ ವ್ರಜತಿ ಸತಿ ಚೈಕತ್ರ ಮಿಲಿತಾಃ।
ಕೃತಜ್ಞಾಃ ಕಾರ್ಯಜ್ಞಾ ವಚಸಿ ಕುಶಲಾ ಧಾರ್ಮಿಕಸಭಾ-
ಸದಸ್ಯಾ ಅಭ್ಯೇತ್ಯ ಪ್ರಣಿಜಗದುರೇನಂ ಸವಿನಯಮ್ ॥ ೩೨

ಹೀಗಿರಲಾಗಿ, ಒಮ್ಮೆ ತಪೋನಿಷ್ಠರೂ ಪ್ರವಚನಚತುರರೂ ಯತೀಂದ್ರರೂ ಆದ ಶ್ರೀರಾಮಚಂದ್ರಾಪುರದ ಮಠಾಧಿಪತಿಗಳಾದ ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳು ತಮ್ಮ ಸಂಪ್ರದಾಯದಂತೆ ಶಿಷ್ಯರು ವಾಸಿಸುತ್ತಿರುವ ಹಳ್ಳಿಯಿಂದ ಹಳ್ಳಿಗೆ ಸಂಚರಿಸುತ್ತಿದ್ದರು. ಆಗ ಶಾಖಾಮಠಗಳ ಧಾರ್ಮಿಕ ಸಮಿತಿಯ ಸದಸ್ಯರು ಗುರುಗಳನ್ನು ಒಂದು ಮೊಕ್ಕಾಮಿನಲ್ಲಿ ಸಂದರ್ಶಿಸಿದರು. ಕೃತಜ್ಞರೂ ಕಾರ್ಯಜ್ಞರೂ ಮಾತುಗಾರರೂ ಆದ ಅವರು ಗುರುಗಳನ್ನು ಸಮೀಪಿಸಿ ವಿನಯಪೂರ್ವಕವಾಗಿ ಹೀಗೆ ಬಿನ್ನವಿಸಿಕೊಂಡರು –

ಪುರಾಭೂತಂ ಚೈತದ್ಗುರುಕುಲಮಶೇಷಂ ಕಲಿಮಲ-
ಪ್ರಹಾಣಂ ಕಲ್ಯಾಣಪ್ರದಮಪಿ ವಿನಷ್ಟಂ ಹಿ ಕಲಿನಾ ।
ಗುರೂಣಾಂ ನಃ ಪ್ರಾಚಾಂ ಪರಮತಪಸಾಂ ಸ್ಮಾರಕಮಿದಂ
ಭವದ್ಭಿರ್ಬ್ರಹ್ಮಿಷ್ಠೈಃ ಪುನರಪಿ ಸಮುದ್ಧರ್ತುಮುಚಿತಮ್॥ ೩೩

ಪೂಜ್ಯರೇ! ಕಲಿದೋಷವಿನಾಶಕವೂ ಕಲ್ಯಾಣಪ್ರದವೂ ಆಗಿದ್ದ ಹಳೆಯ ಈ ಶಾಖಾಮಠಗಳು ಕಲಿದೋಷದಿಂದ ಇಂದು ಹಾಳಾಗಿವೆ ಇವುಗಳ ಕಟ್ಟಡಗಳು ಕುಸಿದುಬೀಳುವ ಸ್ಥಿತಿಯಲ್ಲಿವೆ. ಕಾಲಕಾಲಕ್ಕೆ ನಡೆಯಬೇಕಾದ ಭಗವದಾರಾಧನೆಗಳಿಗೆ ನಿಯತವಾದ ಯಾವ ಆದಾಯವೂ ಈ ಮಠಗಳಿಗೆ ಈಗ ಇಲ್ಲವಾದುದರಿಂದ ಆ ಭಗವತ್ಸೇವಾಕಾರ್ಯಗಳು ಸ್ಥಗಿತವಾಗಿವೆ ಹಿಂದಿನ ಆಚಾರ್ಯರ ಸಮಾಧಿಸ್ಥಳದ ಗುರುಮೂರ್ತಿಗಳು ಬಿಸಿಲಿಗೆ ಒಣಗುತ್ತಿವೆ ಮಳೆಗೆ ತೊಯ್ಯುತ್ತಿವೆ. ಅವುಗಳ ಮೇಲೆ ಹುತ್ತ ಬೆಳೆದಿವೆ ಹೀಗೆ ಜೀರ್ಣವಾಗಿರುವ ಈ ಕಟ್ಟಡಗಳು ತಪೋನಿಷ್ಠರಾದ ನಮ್ಮ ಪ್ರಾಚೀನಗುರುಪರಂಪರೆಯ ಸ್ಮಾರಕಗಳಾಗಿವೆ. ಬ್ರಹ್ಮಿಷ್ಠರಾದ ತಾವು ಇವುಗಳ ಜೀರ್ಣೋದ್ಧಾರಕಾರ್ಯದಲ್ಲಿ ಅರ್ಹರಾಗಿರುವಿರಿ.

ಪ್ರಭೋ! ಧರ್ಮೋದ್ಧಾರೇ ಭುವಿ ಸುತನುಮಾನ್ ಶಂಕರಗುರೋಃ
ಪ್ರಸಾದಾದ್ ಗೋಕರ್ಣಾಹ್ವಯಮಲಯಧರ್ಮಾಧಿಕೃದಸಿ ।
ತದೇತತ್ಸರ್ವಸ್ವಂ ಗುರುಕುಲನಿಕಾಯಸ್ಯ ಭವತಃ
ಸಮುಪಾರ್ಪ್ಯಾಂಘ್ರಿದ್ವಂದ್ವೇ ಸಪದಿ ಸುಖಿನಃ ಸ್ಯಾಮ ನಿತರಾಮ್ ॥

ಸ್ವಾಮಿಗಳೇ! ತಾವು ಧರ್ಮೋದ್ಧಾರಕಾರ್ಯಕ್ಕಾಗಿ ಜನ್ಮತಾಳಿದವರಾಗಿದ್ದೀರಿ ಶ್ರೀಶಂಕರಭಗವತ್ಪಾದರ ಅನುಗ್ರಹದಿಂದ ತಾವು ಗೋಕರ್ಣಮಂಡಲದ ಧರ್ಮಾಚಾರ್ಯರಾಗಿರುತ್ತೀರಿ ಆಚಾರ್ಯರೆ! ಈ ಉಪಮಠಗಳ ಸರ್ವಸ್ವವನ್ನೂ ತಮ್ಮ ಪಾದಯುಗಳಗಳಿಗೆ ಒಪ್ಪಿಸಿ ನಾವು ನೆಮ್ಮದಿಯಿಂದ ಇರೋಣವೇ?

**ಅಹೋ ನಃ ಸೌಭಾಗ್ಯಂ ಯದಿಹ ಯಮಿನಾಂ ನಾಥ ಭವತಃ**
**ಕಟಾಕ್ಷೈಃ ವೈದೇಹೀಪತಿಚರಣತೀರ್ಥಪ್ರತಿಭಟೈಃ ।**
**ಖಲೀಭೂತಂ ಪಾಪಂ ಜನಿಮರಣನಿಸ್ತಾರಣಚಣೈಃ**
**ಕೃತಂ ಪ್ರಾಯಶ್ಚಿತ್ತೈರಹಹ ಭವಸಂತಾರಿ ಮಹಿಮನ್ ॥ ೩೫**

ಮುಮುಕ್ಷುಗಳನ್ನು ಸಂಸಾರಸಾಗರದ ಆಚೆಯ ದಡಕ್ಕೆ ಮುಟ್ಟಿಸುವ ಮಹಿಮೆಯುಳ್ಳವರೇ! ಯೋಗಿವರ್ಯರೆ! ಆಹಾ! ನಮ್ಮ ಸೌಭಾಗ್ಯವಿದು. ಶ್ರೀರಾಮಚಂದ್ರನ ಚರಣತೀರ್ಥಕ್ಕೆ ಸರಿಸಾಟಿಯೂ ಜನನ ಮರಣದುಃಖನಿವಾರಕವೂ ಆದ ಮಹಿಮೆಯುಳ್ಳ ತಮ್ಮ ಕಡೆಗಣ್ಣನೋಟಗಳಿಂದ ನಮ್ಮ ಪಾಪವು ನಶಿಸಿಹೋಯಿತು ಎಂದ ಮೇಲೆ ಇನ್ನು ಪ್ರಾಯಶ್ಚಿತ್ತಗಳ ಆವಶ್ಯಕತೆ ಏಕೆ?

**ಇತಿ ಸ್ತುತ್ವಾ ಶಾಖಾಮಠವಿವಿಧಕಾರ್ಯೇಷ್ವಧಿಕೃತಾಃ**
**ಯಥಾಶಾಸ್ತ್ರಂ ಪ್ರಾದುಃ ಸಕಲಮಧಿಕಾರಂ ಚ ಗುರವೇ ।**
**ಅನೇನ ವ್ಯಾಖ್ಯಾತಾ ಕುಲಪತಿವಿಹೀನಾಶ್ರಮದಶಾ**
**ಪಯೋಧೌ ಸರ್ವಾಸಾಂ ಖಲು ನದನದೀನಾಮುಪಗಮಃ ॥**

ಹೀಗೆ ಹೊಗಳಿ ಉಪಮಠಗಳ ಬಗೆಬಗೆಯ ಕಾರ್ಯಗಳ ವ್ಯವಸ್ಥಾಪಕರು ಎಲ್ಲಾ ಅಧಿಕಾರವನ್ನು ಪ್ರಧಾನ ಮಠದ ಆಚಾರ್ಯರಾದ ಶ್ರೀರಾಘವೇಂದ್ರ ಭಾರತೀಗಳಿಗೆ ರಾಜಕೀಯನಿಯಮಾನುಸಾರವಾಗಿ ಒಪ್ಪಿಸಿಕೊಟ್ಟರು ಇದರಿಂದ ಕುಲಪತಿಗಳಿಲ್ಲದ ಆಶ್ರಮಗಳ ಅವಸ್ಥೆಯನ್ನು ವರ್ಣಿಸಿದ ಹಾಗೆ ಆಯಿತು. ಎಲ್ಲಾ ಹಳ್ಳಕೊಳ್ಳತೊರೆಹೊಳೆಗಳೂ ಸಮುದ್ರದಲ್ಲಿ ವಿಲೀನವಾಗುವುವಲ್ಲವೆ!

**ಮಠದ ಕಟ್ಟಡಗಳ ಜೀರ್ಣೋದ್ಧಾರ :**

**ಸಮಿಂಧೇ ಗೋಕರ್ಣೇ ಪ್ರಥಿತಚರಗುರ್ವಾಶ್ರಮಪದಂ**
**ಸುಜೀರ್ಣಂ ಪೂರ್ವೇಷಾಂ ಯದಿದಮಧುನಾ ಭವ್ಯವಪುಷಾ ।**
**ಸುತೀರ್ಥಂ ತತ್ತೀರ್ಥಪ್ರತಿಮುಖಮಿದಾನೀಂತನಗುರೋಃ**
**ಯಶಃಪೂರಂ ಮೂರ್ಧ್ನಾ ವಹತಿ ಕಿಮು ಸೌವರ್ಣಕಲಶಮ್ ॥**

ಗೋಕರ್ಣಮಂಡಲಾಚಾರ್ಯರಾದ ಶ್ರೀರಾಮ ಚಂದ್ರಾಪುರದ ಗುರು ಪರಂಪರೆಯಲ್ಲಿ ಪ್ರಸಿದ್ಧರಾದ ಹಿಂದಿನ ಗುರುಗಳ ಮೂಲಮಠವಾದ ರಘೂತ್ತಮ ಮಠವು ಅತ್ಯಂತ ಜೀರ್ಣವಾಗಿತ್ತು. ಕೋಟಿತೀರ್ಥದ ಎದುರು ದಡದ ಮೇಲೆ ಇರುವ ಪವಿತ್ರವಾದ ಈ ಗುರುಮಠವು ಈಗ ಗೋಕರ್ಣ ಕ್ಷೇತ್ರದಲ್ಲಿ ಹೊಸ ಕಟ್ಟಡದ ಭವ್ಯ ಶರೀರದಿಂದ ಶೋಭಿಸುತ್ತಿದೆ. ಇದು ತನ್ನ ಶಿಖರದಿಂದ ಬಂಗಾರದ ಕಲಶ ವನ್ನು ಈಗಿನ ಗುರುಗಳ ಧವಲಯಶಃ ಪ್ರವಾಹವೋ ಎನ್ನುವಂತೆ ಹೊತ್ತಿದೆ.

ತತಃ ಕೆಕ್ಕಾರುಸ್ಥಂ ಶಿಥಿಲಶಿಥಿಲಂ ಪ್ರಾಕ್ತನಮಠಂ
ಸಗರ್ಭಾಗಾರಾದ್ಯಂ ಪುನರಪಿ ಸುನಿರ್ಮಾಯ ದಯಯಾ ।
ಗುರೂಣಾಂ ನಃ ಪ್ರಾಚಾಂ ತಪಸಿ ಮಹತಾಂ ಸ್ಮಾರಕಮಿದಂ
ರರಕ್ಷ ಕ್ಷೇಮಾರ್ಥಂ ಯತಿಪತಿರಿದಾನೀಂತನಗುರುಃ ॥ ೩೮

ಅನಂತರ ಯತೀಂದ್ರರಾದ ಈಗಿನ ಗುರುಗಳಾದ ಶ್ರೀರಾಘವೇಂದ್ರಭಾರತೀ ಸ್ವಾಮಿಗಳು ಹೊನ್ನಾವರ ತಾಲ್ಲೂಕಿನ ಕಕ್ಕಾರಿನಲ್ಲಿ ಇದ್ದ ತೀರ ಹಳೆಯದೂ ಶಿಥಿಲ ವಾದುದೂ ಆದ ರಘೂತ್ತಮ ಮಠದ ಗರ್ಭಾಗಾರವೇ ಮುಂತಾದ ಕಟ್ಟಡಗಳನ್ನು ತಿರುಗಿ ಕಟ್ಟಿಸಿದರು. ಇವರು ನಮ್ಮ ಮೇಲಿನ ದಯೆಯಿಂದ ಹಿರಿಯ ನಮ್ಮ ಆಚಾರ್ಯರೂ ತಪೋನಿಷ್ಠರೂ ಮಹಾತ್ಮರೂ ಆದ ಯತೀಶ್ವರರ ಸ್ಮಾರಕವಾದ ರಘೂತ್ತಮಮಠವನ್ನು ಎಲ್ಲರ ಕ್ಷೇಮಕ್ಕಾಗಿ ರಕ್ಷಿಸಿದರು.

ಗುರುರ್ಭಾರತ್ಯಾಖ್ಯೋ ಹ್ಯಭವದಿಹ ರಾಮೇಂದುಪದಭಾಕ್
ಯತಿಸ್ತುರ್ಯಾಂ ದೀಕ್ಷಾಮದಿಶದಥ ಯೋ ರಾಘವಗುರೋಃ ।
ಸ ಭಾತ್ಯತ್ರ ಸ್ಥಾನೇ ಪರಮಯತಿರಾನಂದವಪುಷಾ
ಪರಬ್ರಹ್ಮೀಭೂತೋ ಭಜಕವರದೋ ಲಿಂಗವಪುಷಾ ॥ ೩೯

ಯಾವ ರಾಮಚಂದ್ರಭಾರತೀ ಸ್ವಾಮಿಗಳು ಈಗಿನ ಗುರುಗಳಾದ ಶ್ರೀ ರಾಘವೇಂದ್ರಭಾರತೀಗಳಿಗೆ ಸಂನ್ಯಾಸ ದೀಕ್ಷೆಯಿತ್ತು, ಶಿಷ್ಯರನ್ನಾಗಿ ಸ್ವೀಕರಿಸಿದ್ದರೋ ಆ ಯತಿಶ್ರೇಷ್ಠರಾಗಿದ್ದ ದೊಡ್ಡಗುರುಗಳು ಇಲ್ಲಿ ಶರೀರತ್ಯಾಗ ಮಾಡಿದ್ದರು. ಆನಂದಸ್ವರೂಪರಾದ ಅವರು ಬ್ರಹ್ಮೀಭೂತರಾಗಿ ಇಲ್ಲಿ ಸಮಾಧಿಸ್ಥರಾಗಿ ಈಗ ಶಿವಲಿಂಗರೂಪದಿಂದ ಭಕ್ತರಿಗೆ ದರ್ಶನವಿತ್ತು ಇಷ್ಟಾರ್ಥಗಳನ್ನು ಅನುಗ್ರಹಿಸುತ್ತಾ ಶೋಭಿಸುತ್ತಿದ್ದಾರೆ.

**ತತಃ ಪ್ರಾಚಾರ್ಯೋಽಯಂ ರಘುಪತಿಸುನಾಮಾಂಕಿತಪುರೇ**
**ಮಠೀಯಂ ಪ್ರಾಸಾದಂ ಗುರುಕುಲಶಿರಃಸ್ಥಾನಮಧಿಕಮ್ ।**
**ಪುರಾಣಂ ಸಂಸ್ಕರ್ತುಂ ಶಿಥಿಲಮಚಿರಾನ್ನೂತನತಯಾ**
**ಮಹಾಮೂಲ್ಯೈ ರೈಚ್ಛತ್ಕಿಮಿವ ಮಹತಾಂ ದುಷ್ಕರಮಿದಮ್॥**

ಅನಂತರ ಈಗಿನ ಗುರುಗಳು ಶ್ರೀರಾಮಚಂದ್ರಾಪುರದಲ್ಲಿರುವ ಗುರು ಪರಂಪರೆಯ ಪ್ರಧಾನ ಮಠದ ಹಳೆಯ ದೊಡ್ಡ ಕಟ್ಟಡವನ್ನು ಹೆಚ್ಚು ಹಣ ವಿನಿಯೋಗಿಸಿ ಹೊಸದಾಗಿ ಪರಿಷ್ಕರಿಸಿ ಆದಷ್ಟು ಬೇಗ ಕಟ್ಟಿಸಬೇಕೆಂದು ಬಯಸಿದರು ದೊಡ್ಡವರಿಗೆ ದುಷ್ಕರವಾದದ್ದು ಯಾವುದಿದೆ ? (ಶಿರಃ ಸ್ಥಾನಂ–ಪ್ರಧಾನ)

**ಅಥಾಚಾರ್ಯಃ ಶಿಷ್ಯೇಷ್ವತಿಶಯಿತವಾತ್ಸಲ್ಯಜಲಧಿಃ**
**ಯಥಾಚಾರಂ ಗ್ರಾಮಾದ್ಯಟಿತುಮುಪದೇಷ್ಟುಂ ಪರಿಯಯೌ ।**
**ಸ ತತ್ರತ್ಯೈಃ ಶಿಷ್ಯೈಃ ಸವಿಧಿ ಕೃತಮಾತಿಥ್ಯ ಮನಘೋ**
**ಗೃಹೀತ್ವಾ ಕಾರುಣ್ಯಾನ್ನಿಗಮವಚಸಾ ಚಾನುಜಗೃಹೇ ॥** ೪೧

ಅನಂತರ ಶಿಷ್ಯಸಮೂಹದ ಮೇಲೆ ವಿಶೇಷ ಪ್ರೀತಿಯುಳ್ಳ ಗುರುಗಳು ಸಂಪ್ರದಾಯದಂತೆ ಧರ್ಮೋಪದೇಶಕ್ಕಾಗಿ ಗ್ರಾಮಸೀಮೆಗಳನ್ನು ಕುರಿತು ಸಂಚಾರ ಮಾಡಲು ಹೊರಟರು. ಅವರು ಆಯಾಯ ಗ್ರಾಮಸ್ಥರಾದ ಶಿಷ್ಯರಿಂದ ಶಾಸ್ತ್ರ ದಂತೆ ಮಾಡಿದ ಆತಿಥ್ಯವನ್ನು ಸ್ವೀಕರಿಸಿದರು. ಪಾಪನಿರೋಧಕರಾದ ಅವರು ಧಾರ್ಮಿಕವಾದ ಪ್ರವಚನದಿಂದ ಶಿಷ್ಯರನ್ನು ಕಾರುಣ್ಯದಿಂದ ಅನುಗ್ರಹಿಸಿದರು

**ಗುರೋರ್ವಾಚೋಯುಕ್ತ್ಯಾ ವಿದಿತನಿಜಕರ್ತವ್ಯಗರಿಮಾ**
**ತದಾ ಶಿಷ್ಯಶ್ರೇಣೀ ಪರಿಷದಿ ಮಠೀಯಾಲಯಕೃತೇ ।**
**ಪ್ರತಿಶ್ರುತ್ಯ ಪ್ರಾದಾದ್ಧನಮಭಿಗುರುಪ್ರೇಮವಿವಶಾ**
**ಹ್ಯಪಾಂ ಬಿಂದುಃ ಸಿಂಧುರ್ಭವತಿ ಪರಿಸಂಗೃಹ್ಯ ನಿಹಿತಃ ॥** ೪೨

ಸಭೆಯಲ್ಲಿ ಗುರುಗಳ ಮಾತುಗಾರಿಕೆಯ ಚಮತ್ಕಾರದ ಶೈಲಿಯಿಂದ ಶಿಷ್ಯ ಸಮೂಹಕ್ಕೆ ಗುರುಸೇವಾವಿಷಯದಲ್ಲಿ ತಮ್ಮ ಕರ್ತವ್ಯದ ಮಹತ್ವದ ಹೊಣೆ ಗಾರಿಕೆಯು ಅರಿವಾಯಿತು ಪ್ರಪ್ರಥಮವಾಗಿ ಸಾಗರತಾಲ್ಲೂಕು ಭೀಮನಕೋಣೆ ಗ್ರಾಮದ ಮೊಕ್ಕಾಮಿನಲ್ಲಿ ನಡೆದ ಸಭೆಯಲ್ಲಿ ಮಠದ ಕಟ್ಟಡದ ಬಗ್ಗೆ ಗುರುಗಳ ಎದುರಿಗೆ ಭಕ್ತಿಪರವಶವಾದ ಶಿಷ್ಯಸಮುದಾಯವು ತಮ್ಮ ತಮ್ಮ ಶಕ್ತಿಗೆ ಅನುಸಾರ ವಾಗಿ ಧನವನ್ನು ವಾಗ್ದಾನಮಾಡಿಕೊಟ್ಟಿತು. ಇದರಂತೆ ಸಾಗರಪ್ರಾಂತೀಯ ಎಲ್ಲಾ ಸೀಮೆಯ ಶಿಷ್ಯರೂ ಕಟ್ಟಡದ ಕಾಣಿಕೆಯನ್ನು ಅರ್ಪಿಸಿದರು

ತತಃ ಪ್ರಹ್ವೈಃ ಶಿಷ್ಯೈರ್ಗುರುಚರಣಪಾಥೋಜಮಧುಪೈಃ
ಧುರೀಣೈಃ ಸೋತ್ಸಾಹಂ ಗುರುರಪಿ ಮುಕುಂದಾರ್ಪಣಧಿಯಾ ।
ಪ್ರದತ್ತಾ ಆದತ್ತ ದ್ವಿಗುಣಮಿಹ ಚೋತ್ಸ್ರಷ್ಟುಮುಪದಾಃ
ಯಥಾಬ್ಧೇರಾದತ್ತೇ ದಶಶತಕರೋ ವಾರಿಕಣಿಕಾಃ ॥ ೪೩

ಗುರುವರ್ಯರ ಅಡಿದಾವರೆಯ ತನಿಬನಿಯನ್ನು ಸವಿಯುವ ದುಂಬಿಗಳೂ ವಿನಯಶಾಲಿಗಳೂ ಆದ ಆಯಾ ಸೀಮೆಯ ಶಿಷ್ಯಪ್ರಮುಖರು ಕಟ್ಟಡದ ನಿರ್ಮಾಣಕ್ಕಾಗಿ ಸಂಪ್ರೀತಿಯಿಂದ ಕೃಷ್ಣಾರ್ಪಣಬುದ್ಧಿಯಿಂದ ಸಮಸ್ತಶಿಷ್ಯರೂ ಕೊಟ್ಟಿರುವ ವಿಶೇಷಕಾಣಿಕೆಗಳನ್ನು ಸಂಗ್ರಹಿಸಿ ಗುರುಸನ್ನಿಧಿಗೆ ಒಪ್ಪಿಸಿದರು. ಸಹಸ್ರಕಿರಣನಾದ ಸೂರ್ಯನು ಸಮುದ್ರದಿಂದ ನೀರಹನಿಗಳನ್ನು ತಿರುಗಿ ದುಪ್ಪಟ್ಟಾಗಿ ಮಳೆಯ ರೂಪದಿಂದ ಭೂಮಿಗೆ ಕೊಡುವುದಕ್ಕಾಗಿ ತೆಗೆದುಕೊಳ್ಳುವಂತೆ ಶಿಷ್ಯವತ್ಸಲರಾದ ಆಚಾರ್ಯರು ಶಿಷ್ಯರು ಒಪ್ಪಿಸಿದ ಆ ವಿಶೇಷಕಾಣಿಕೆಯನ್ನು ರೂಪಾಂತರದಿಂದ ಶಿಷ್ಯರಿಗೆ ವಿನಿಯೋಗಿಸುವುದಕ್ಕಾಗಿ ಸ್ವೀಕರಿಸಿದರು.

ತತಶ್ಚಾಪ್ತೈಃ ಶಿಷ್ಯೈರಭಿಲಷಿತಸದ್ಮಾದಿರಚನಾ-
ವಿಚಾರೇ ತ್ವಾಚಾರ್ಯಃ ಸ್ವಪರಮತಭೇದಂ ಚ ವಿಮೃಶನ್ ।
ಸದಾಭ್ಯಾಗಂತ್ರೌಪಾಧಿಕವಿವಿಧಸೌಲಭ್ಯಸಹಿತಂ
ಪರಿಷ್ಕರ್ತುಂ ಸೌಧಂ ಕೃತಿಮನುವಿಧಿ ಪ್ರಾರಭತ ಸಃ ॥ ೪೪

ಆಚಾರ್ಯರು ತಮ್ಮ ಸಂಚಾರವನ್ನುಗಿಸಿ ಮಠಕ್ಕೆ ಹಿಂದಿರುಗಿದ ಬಳಿಕ ತಾವು ಅಪೇಕ್ಷಿಸಿದ ಮಠದ ನೂತನಕಟ್ಟಡವೇ ಮುಂತಾದುವುಗಳ ನಿರ್ಮಾಣ ವಿಷಯದಲ್ಲಿ ತಮ್ಮ ಆಪ್ತಶಿಷ್ಯಪ್ರಮುಖರೊಂದಿಗೆ ಸಮಾಲೋಚಿಸಿದರು. ಸೇರಿದ ಆ ಸಭೆಯಲ್ಲಿ ತಮ್ಮ ಮತ್ತು ಇತರಸದಸ್ಯರ ಅಭಿಪ್ರಾಯಗಳನ್ನು ವಿಮರ್ಶಿಸಿದರು. ಮಠದ ಹಳೆಯ ಕಟ್ಟಡವನ್ನು ಪರಿಷ್ಕರಿಸಲು ನಿಶ್ಚಯಿಸಿದರು. ಕಟ್ಟಿಸಲಿರುವ ನೂತನ ಕಟ್ಟಡದಲ್ಲಿ ಯಾವಾಗಲೂ ಮಠಕ್ಕೆ ಹೋಗಿಬರುವ ಅತಿಥಿ ಅಭ್ಯಾಗತರೇ ಮೊದಲಾದವರ ನಿಮಿತ್ತ ವಿಶೇಷ ಗುಣವುಳ್ಳ ವಿವಿಧ ನೂತನ ಸೌಕರ್ಯಗಳು ಪರಿಷ್ಕರಿಸಿದ ಸೌಧದಲ್ಲಿ ಇರಬೇಕೆಂದು ತೀರ್ಮಾನವಾಯಿತು. ಅದಕ್ಕೆ ಸೂಕ್ತವಾದ ನಕ್ಷೆಯೂ ತಯಾರಾಯಿತು. ಬಳಿಕ ಹಳೆಯ ರಾಮಚಂದ್ರಾಪುರದ ಮಠದ ಕಟ್ಟಡದ ಪರಿಷ್ಕರಣ ಕಾರ್ಯ ಆರಂಭವಾಯಿತು.

**ರಾಮಚಂದ್ರಾಪುರಮಠದ ಸುತ್ತುಮುತ್ತಲಿನ ಸನ್ನಿವೇಶ :–**

ನದೀ ಸವ್ಯೇ ಯಸ್ಯ ಪ್ರಕೃತಿಶಿಶಿರಾಮೋದಸಲಿಲಾ
ಶರಾವತ್ಯಾಶಾಸ್ತೇ ಭವ ಪಥಿಕತಾಪ್ರೋಪಶಮನಮ್ ।
ಶಠಾನ್ ಸದ್ಯಃ ಸಾಧೂಕರಣನಯಶಾಸ್ತ್ರೇ ಪ್ರತಿದಿನಂ
ಭೃಶಂ ಯಸ್ಯ ಸ್ವರ್ಣಪ್ರತಿಶಿಖರಕೇತುರ್ವಿನಯತೇ* ॥ ೪೫

ಯಾವ ಶ್ರೀರಾಮಚಂದ್ರಾಪುರದ ಶ್ರೀಮಠದ ಕಟ್ಟಡದ ಎಡಗಡೆ ಪ್ರಕೃತಿ ಶೀತಲವೂ ಪರಿಮಳಿತವೂ ಆದ ನೀರುಳ್ಳ ಶರಾವತೀ ಹೊಳೆಯು ಸಂಸಾರದ ದಾರಿಯಲ್ಲಿ ಹೆಜ್ಜೆಹಾಕಿ ನಡೆಯುತ್ತಿರುವ ದಾರಿಗರ ತಾಪವನ್ನು ಹೋಗಲಾಡಿಸುವುದೋ ಅದು ಹುಟ್ಟು ಸಾವುಗಳೆಂಬ ಹಾದಿಯಲ್ಲಿ ಹೋಗುತ್ತಿರುವ ಮುಮುಕ್ಷು ಜೀವಾತ್ಮನಿಗೆ ದುಃಖ ಕಾರಣವಾದ ಸಂಸಾರದಿಂದ ವೈರಾಗ್ಯವನ್ನು ಬೋಧಿಸುತ್ತದೆ. ಹಾಗೂ ಯಾವ ಶ್ರೀಮಠದ ಸೌಧದ ಬಂಗಾರದ ಬಣ್ಣದ ಶಿಖರದ ಬಾವುಟವು ದುಷ್ಟರನ್ನು ಕೂಡಲೇ ಶಿಷ್ಟರನ್ನಾಗಿ ಪರಿವರ್ತಿಸುವ ನೀತಿಶಾಸ್ತ್ರ ವಿಷಯದಲ್ಲಿ ಪ್ರತಿದಿನವೂ ವಿದ್ಯಾರ್ಥಿಗಳಿಗೆ ನೀತಿ ಶಾಸ್ತ್ರದ ಸಿದ್ಧಾಂತವನ್ನು ಅತ್ಯಂತವಾಗಿ ಬೋಧಿಸುತ್ತದೆ ಎಂಬಂತಿದೆಯೋ,

ಸ್ವಭಿತ್ತೌ ಯದ್ಧತ್ತೇ ಲಿಖಿತಲಿಪಿಜಾಲಂ ಶ್ರುತಿಶಿರಃ
ಪ್ರಗೀತಂ ಸಂದೇಶಂ ನಿಖಿಲಪುರುಷಾರ್ಥಾವಗಮಕಮ್ ।
ಅಗಸ್ತ್ಯಾಖ್ಯಂ ತೀರ್ಥಂ ವಿಲಸತಿ ಚ ಯಸ್ಯಾಂತಿಕಮಿದಂ
ಪ್ರಧಾನಂ ಸಂಸ್ಥಾನಂ ವಿಲಸತಿತರಾಂ ವಿಸ್ಮಯಕರಮ್ ॥ ೪೬

ಯಾವ ಸೌಧವು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಪ್ರಯೋಜನವನ್ನು ಬೋಧಿಸುವ, ಉಪನಿಷತ್ತಿನಲ್ಲಿ ಕೊಂಡಾಡಿದ 'ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ' ಎಂದು ಮುಂತಾದ ಧರ್ಮ ಸಂದೇಶದ ನಿರೂಪವನ್ನು ತನ್ನ ಮುಂಗಡೆಯ ಹೊರಗೋಡೆಯಮೇಲೆ ಧರಿಸಿರುತ್ತದೆಯೋ ಯಾವ ಕಟ್ಟಡದ ಹತ್ತಿರದಲ್ಲಿ ಮಹಾತಪಸ್ವಿಗಳಾದ ಅಗಸ್ತ್ಯಮಹರ್ಷಿಗಳ ಭಗ್ನಾವಶಿಷ್ಟವಾದ ಆಶ್ರಮದ ತೀರ್ಥವಿರುತ್ತದೆಯೋ ಆ ರಾಮಚಂದ್ರಾಪುರದ ಪರಿಷ್ಕೃತವಾದ ಪ್ರಧಾನಮಠದ ಕಟ್ಟಡವು ಆಶ್ಚರ್ಯಕರವಾಗಿದ್ದು ಅತಿಶಯವಾಗಿ ಶೋಭಿಸುತ್ತಿದೆಯೋ,

*ವಿನಯತೇ – ಶಾಸ್ತ್ರ ಸಿದ್ಧಾಂತವನ್ನು ಬೋಧಿಸುವುದು ಅಂದರೆ ಶಾಸ್ತ್ರೇ ನಯತೇ ಶಾಸ್ತ್ರಸ್ಥಂ ಸಿದ್ಧಾಂತಂ ಶಿಷ್ಯೇಭ್ಯಃ ಪ್ರಾಪಯಂತೇ ಇತ್ಯರ್ಥಃ । ಇಲ್ಲಿಶಿಷ್ಯಸಮ್ಮಾನನವು ತೋರುತ್ತದೆ.

ಸಸೌಮಿತ್ರಿಃ ಶ್ರೀಮಾನ್ ದಶವದನಹಂತಾ ಸಿತಯಶಾಃ
ಧನುರ್ಧಾರೀ ಸೀತಾಂ ನಿಜಹೃದಯಕಾಂತಾಮುಪಗತಃ ।
ಮಹಾಬಾಹೂ ರಾಮೋ ಮುನಿಜನಶರಣ್ಯಃ ಸಕರುಣೋ
ಯದಧ್ಯಾಸ್ತೇ ಧೀರಃ ಶ್ರಿತಜನಮನೋಭೀಷ್ಟವರದಃ ॥ ೪೭

ಯಾವ ಕಟ್ಟಡದಲ್ಲಿ ಮಹಾಬಾಹುವೂ ಮಹಾಧನುರ್ಧಾರಿಯೂ ರಾವಣ ಸಂಹಾರಿಯೂ ನಿರ್ಮಲಯಶಶ್ಶಾಲಿಯಾಗಿಯೂ ಆಶ್ರಿತರಿಗೆ ಇಷ್ಟಾರ್ಥಪ್ರದನೂ ಮುನಿಜನರಕ್ಷಕನೂ ಲಕ್ಷ್ಮಣಸಹಿತನೂ ಕರುಣಾಕರನೂ ಧೀರನೂ ಆದಶ್ರೀರಾಮನು ತನ್ನ ಮನಃಕಾಂತೆಯಾದ ಸೀತಾಸಮೇತನಾಗಿ ಸುಂದರಪ್ರತಿಮಾವತಾರಿಯಾಗಿ ವಾಸಿಸುತ್ತಿದ್ದಾನೆಯೋ.

ಅಥೋ ದಕ್ಷೇ ಚಾಸ್ಯ ಪ್ರಲಯಜಲಧಾರಾವೃತತಯಾ
ಸುಭೀತಾನ್ ಗೋಗೋಪಾನವಿತುಮಿಹ ಗೋವರ್ಧನಗಿರಿಮ್ ।
ಕರಾಂಗುಲ್ಯಾ ಧೃತ್ವಾ ನಿಖಿಲಜಗತೀವಿಸ್ಮಯಪುಷಾ
ಸ್ವಯಂ ವಿಶ್ವೋದ್ಧರ್ತಾ ಜಯತಿ ಸ ಚ ಗೋಬಾಲವಪುಷಾ॥ ೪೮

ಅನಂತರ ಈ ಶ್ರೀರಾಮವಿಗ್ರಹದ ಗುಡಿಯ ಬಲಗಡೆಗೆ ವಿಶ್ವೋದ್ಧರ್ತೃವಾದ ನಾರಾಯಣನು ಪ್ರಳಯಕಾಲದ ಭೀಕರ ಮಳೆಯ ಜಲಧಾರೆ ಸುತ್ತುವರಿದದ್ದರಿಂದ ಹೆದರಿದ ಗೋವುಗಳನ್ನೂ ಗೊಲ್ಲರನ್ನೂ ರಕ್ಷಿಸುವುದಕ್ಕಾಗಿ ಗೋವರ್ಧನ ಗಿರಿಯನ್ನು ತನ್ನ ಕೈಬೆರಳ ತುದಿಯಿಂದ ಎತ್ತಿಹಿಡಿದು, ಇಡೀವಿಶ್ವಕ್ಕೆ ಬೆಕ್ಕಸ ಬೆರಗು ತುಂಬುವಂತಹ ಬಾಲಗೋಪಾಲಶರೀರದಿಂದ ತನ್ನಷ್ಟಕ್ಕೆ ತಾನೇ ಸರ್ವೋತ್ಕೃಷ್ಟನಾಗಿ ಇದ್ದಾನೆ

ಸಖಾ ದಕ್ಷೇ ಯಸ್ಯ ಪ್ರಕೃತಿಸರಲೋ ವೇತ್ರಲತಯಾ
ಹರೇಃ ಸಾಹ್ಯಂ ಕರ್ತುಂ ಸ್ಪೃಶತಿ ಕಿಲ ಗೋವರ್ಧನಗಿರಿಮ್ ।
ಸಖೀ ಗೋಪೀ ಭೀರುಃ ಕಮಲಲತಯಾಽಲಂಕೃತಭುಜಾ
ವಹತ್ಯದ್ರಿಂ ಸವ್ಯೇ ಸ್ವಕರಕರವಾಲಸ್ಯ ಶಿಖಯಾ ॥ ೪೯

ಈ ಗೋವರ್ಧನಗಿರಿಧಾರಿಯಾದ ಬಾಲಕೃಷ್ಣವಿಗ್ರಹದ ಬಲಪಕ್ಕದಲ್ಲಿ ಸಹಜ ಮುಗ್ಧನಾದ ಗೆಳೆಯನಾದ ಗೋಪನು ಸೆಳೆಬೆತ್ತದ ಕೋಲಿನಿಂದ ಕೃಷ್ಣನಿಗೆ ನೆರವು ನೀಡುವುದಕ್ಕೋ ಎಂಬಂತೆ ಗೋವರ್ಧನಗಿರಿಯನ್ನು ಒತ್ತಿಹಿಡಿದಿದ್ದಾನೆ ಈ ಮೂರ್ತಿಯ ಎಡಪಕ್ಕಕ್ಕೆ ತನ್ನ ಒಂದು ಹೆಗಲಿನಮೇಲೆ ಕಮಲದ ಬಳ್ಳಿಯನ್ನು ಹೊತ್ತಿರುವ ಗೆಳತಿಯಾದ ಹೆದರಿದ ಗೊಲ್ಲತಿಯೊಬ್ಬಳು ತನ್ನ ಕೈಯಲ್ಲಿ ಹಿಡಿದ ಕುಡುಗೋಲಿನ ತುದಿಯಿಂದ ಗೋವರ್ಧನ ಪರ್ವತವನ್ನು ಹೊತ್ತಿದ್ದಾಳೆ.

ಕರೇ ವಾಮೇ ಪುಸ್ತಂ ತದಿತರಶಯೇ ಚಿನ್ಮಯೆಕಲಾಂ
ದಧಾನೋ ಯಃ ಪದ್ಮಾಸನಮಧಿನಿವಿಷ್ಟಃ ಸ್ಮಿತಮುಖಃ ।
ಸುಧಾಫೇನಸ್ವಚ್ಛಾಂಚಲ ಲಲಿತ ಸವ್ಯಾನ ಸುಭಗಃ
ಸದಾ ಶಾಂತಃ ಸವ್ಯೇ ಲಸತಿ ಗುರುರಾದ್ಯಃ ಖರರಿಪೋಃ ॥ ೫೦

ಶ್ರೀರಾಮನ ಗುಡಿಯ ಎಡಗಡೆಗಿರುವ ಗುಡಿಯಲ್ಲಿ ಜಗದ್ಗುರು ಆದ್ಯಶಂಕರ ಭಗವತ್ಪಾದರ ದಿವ್ಯಮೂರ್ತಿಯು ಶೋಭಿಸುತ್ತಿದೆ. ಅಮೃತ ಶಿಲೆಯಿಂದ ತಯಾರಾದ ಈ ಮೂರ್ತಿಯ ಎಡಗೈಯಲ್ಲಿ ಪುಸ್ತಕವಿದೆ. ಬಲಗೈಯಲ್ಲಿ ಜ್ಞಾನಮುದ್ರೆ ಇದೆ. ಪದ್ಮಾಸನಾಸೀನರಾದ ಆಚಾರ್ಯರ ಮುಖದಲ್ಲಿ ಕಿರುನಗೆಯು ಸೂಸುತ್ತಿದೆ. ಅವರ ತಲೆಗೆ ಮುಸುಕಿ ಎರಡೂ ಹೆಗಲಿಗೆ ಇಳಿದು ತೊಡೆಯ ಮೇಲೆ ಬಿದ್ದಿರುವ ನೊರೆಸೊದೆಯಂತೆ ಬೆಳ್ಳನೆಯ ಅಂಚಿನಿಂದ ಚಂದಗಾಣಿಸುತ್ತಿರುವ ಉತ್ತರೀಯದಿಂದ ಅವರ ಪೂರ್ಣ ಶರೀರವು ಸುಂದರವಾಗಿದೆ

ತತಶ್ಚಾನಾಭ್ಯಂಸಾನ್ಮಸೃಣಕನಕೋಲ್ಲೇಖಿತಕಲಾ–
ಮಿಷೇಣ ಬ್ರಾಹ್ಮೇಣಾಕಲಿತ ಇವ ಸೂತ್ರೇಣ* ಗುರುರಾಟ್ ।
ಉತಾಹೋ ಸದ್ರೂಪಃ ಸಹಜಪರಮಾನಂದಮಧುರಃ
ಪರೀತೋಽಸೌ ವಕ್ಷಸ್ಯುಡುಪತಿಧರ ಶ್ಚಿತ್ಕಲಿಕಯಾ ॥ ೫೧

ಆ ಶಂಕರಾಚಾರ್ಯರು ಹೆಗಲಿನಿಂದ ಹೊಕ್ಕಳಿನ ತನಕ ನುಣುಪಾದ ಬಂಗಾರದ ನೂಲಿನ ಎಳೆಯ ಗುರುತಿನ ನೆಪದಿಂದ ಜನಿವಾರವನ್ನು ಹಾಕಿಕೊಂಡಿರುವರೋ ಎಂಬಂತೆ ತೋರುತ್ತಿದ್ದಾರೆ. ಅಥವಾ ಸಹಜಾನಂದಸುಂದರನಾದ ಚಂದ್ರಶೇಖರನಾದ ಪರಮೇಶ್ವರನು ಶರೀರಧಾರಿಯಾಗಿ ಹೃದಯದಲ್ಲಿರುವ ಚಿತ್ಕಲೆಯಿಂದ ಸುತ್ತುವರಿದಿರುವನೋ! ಎಂಬಂತೆ ಆಚಾರ್ಯರ ಮೂರ್ತಿಯು ಶೋಭಿಸುತ್ತಿದೆ,

ವಿಜಿತ್ಯ ಶ್ರುತ್ಯುಕ್ತ್ಯಾತ್ವನುಪಹತತರ್ಕೈಃ ಪರಮತಂ
ಪ್ರತಿಷ್ಠಾಪ್ಯಾದ್ವೈತಂ ಮತಮಥ ಮಹಚ್ಛಾಪನಿಷದವ್ ।
ಪ್ರಸಾರಾಯೈತಸ್ಯ ಪ್ರತಿದಿಶಮಶೇಷಾನ್ಯತಿಪತೀನ್
ವಿನೇಯಾನ್ ಕೃತ್ವಾ ಯಂ ಜಯತಿ ಭಗವಾನ್ ಶಂಕರಗುರುಃ॥

ಶ್ರೀಮಜ್ಜಗದ್ಗುರು ಶ್ರೀಮದಾದ್ಯಶಂಕರಭಗವತ್ಪಾದರು ಚಾರ್ವಾಕ, ಬೌದ್ಧ, ಜೈನ ಮುಂತಾದ ನಾಸ್ತಿಕಮತಗಳನ್ನೂ ನ್ಯಾಯಶಾಸ್ತ್ರಪ್ರತಿಪಾದಿತವಾದ ಅಬಾಧಿತ ಊಹೆಗಳಿಂದಲೂ ಮೀಮಾಂಸಾ, ನ್ಯಾಯಗಳಿಂದಲೂ ಉಪನಿಷದ್ವಾಕ್ಯಗಳ ಪ್ರಮಾಣ

* ಅನುಬಂಧವನ್ನು ನೋಡಿ

ಗಳಿಂದಲೂ ನಿರಾಕರಿಸಿ ಉಪನಿಷಚ್ಛ್ರುತಿಪ್ರಾಗ್ರ್ಯವಾದ ಜೀವಬ್ರಹ್ಮೈಕ್ಯವನ್ನು ಸಿದ್ಧಾಂತಿಸಿದರು. ತಾವು ಸಿದ್ಧಾಂತಿಸಿದ ಅದ್ವೈತತತ್ತ್ವದ ಪ್ರಚಾರಕ್ಕಾಗಿ ಭಾರತದ ದಿಕ್ಕು ದಿಕ್ಕುಗಳಲ್ಲಿಯೂ ಆಚಾರ್ಯಪೀಠಗಳನ್ನು ಸ್ಥಾಪಿಸಿದರು ಅಲ್ಲಿ ಅನೇಕ ಸಂನ್ಯಾಸಿಶಿಷ್ಯರನ್ನೂ ನೇಮಿಸಿ ಈ ವರೆಗೂ ಆ ಶಿಷ್ಯಪರಂಪರೆಯು ಅವಿಚ್ಛಿನ್ನವಾಗಿ ನಡೆದುಕೊಂಡು ಬರಲು ಅನುಗ್ರಹಿಸಿದರು. ಹೀಗೆಮಾಡಿದ ಭಗವಚ್ಛಂಕರಾಚಾರ್ಯರು ಸರ್ವೋತ್ಕರ್ಷದಿಂದ ವಿರಾಜಮಾನರಾಗಿರುತ್ತಾರೆ.

**ಬಹಿಃಪ್ರಾಕಾರಾಂತರ್ವಿಲಸತಿ ಮಠಸ್ಯಾಸ್ಯ ಬೃಹತೋ**
**ನಿಕಾಯೋ ವಾಗ್ದೇವ್ಯಾಃ ಪ್ರಣತವರದಾಯಾ ಲಘುತರಃ ।**
**ತದಂತಸ್ಸ್ಥಾ ಮೂರ್ತಿಃ ಕಿರತಿ ಶಶಿಕಾಂತೋಪಲಮಯೀ**
**ಪ್ರಭಾಂ ಯಾ ತಿಷ್ಠಂತೀ ನಲಿನನಯನಾಭ್ಯಾಮಿವ ಕೃಪಾಮ್ ॥**

ಶ್ರೀರಾಮಚಂದ್ರಾಪುರದ ದೊಡ್ಡಮಠದ ಎದುರಿಗೆ ಇರುವ ಪ್ರಾಗಾರದ ಹೊರಗೆ ಎಡಕ್ಕೆ ಆವರಣದ ಒಳಗೆ ನಮಿಸಿದವರ ಕೋರಿಕೆಗಳನ್ನು ಕೈಗೂಡಿಸುವವಳಾದ ಶಾರದಾಂಬೆಯ ಚಿಕ್ಕ ಗುಡಿಯಿದೆ, ಆ ದೇವಾಲಯದೊಳಗೆ ಚಂದ್ರಕಾಂತ ಶಿಲೆಯಿಂದ ನಿರ್ಮಿಸಲ್ಪಟ್ಟು ಪ್ರತಿಷ್ಠಿಸಿದ ವಾಗ್ದೇವಿಯ ಮೂರ್ತಿಯು ತನ್ನ ತಾವರೆಗಣ್ಣುಗಳಿಂದ ಕರುಣೆಯೋ ಎಂಬಂತಿರುವ ಕಾಂತಿಯನ್ನು ಹುಕ್ಕಳಿಸುತ್ತಿದೆ.

**ಶ್ರುತೀನಾಮೀಶಾನಾ ಧೃತಸಿತದುಕೂಲಾ ಸ್ಮಿತಮುಖೀ**
**ಕರೈರಕ್ಷಸ್ರಕ್‌ಪುಸ್ತಕಕಲಶಪದ್ಮಾನಿ ದಧತೀ ।**
**ಸುಕೇಶೀ ಸೀಮಂತೇ ಹಿಮಕರಕಲಾನಾಗರುಚಿರಾ**
**ಸ್ಥಿತಾ ದ್ವಾರೇ ಶ್ರೇಯೋ ದ್ರುಹಿಣರಮಣೀ ಸಾ ವಿದಧತೀ ॥**

ವೇದೋಪನಿಷತ್ತುಗಳಿಗೆ ಒಡತಿಯೂ ಬಿಳಿಯಪಟ್ಟೆ ಸೀರೆಯುಟ್ಟವಳೂ ನಗುಮೊಗದವಳೂ ಆದ ಅವಳು ಕೈಗಳಲ್ಲಿ ಜಪಸರ, ಪುಸ್ತಕ, ಕಲಶ, ಕಮಲಗಳನ್ನು ಹಿಡಿದಿರುವಳು. ಸುಕೇಶಿಯಾದ ಆಕೆಯ ಬೈತಲೆಯಲ್ಲಿ ಚಂದ್ರಕಲೆ, ನಾಗಾಭರಣಗಳು ಕಂಗೊಳಿಸುತ್ತಿವೆ. ಬೊಮ್ಮನ ರಾಣಿಯಾದ ಆ ಸರಸ್ವತಿಯು ಶ್ರೇಯಸ್ಸನ್ನು ಭಜಕರಿಗೆ ಅನುಗ್ರಹಿಸುತ್ತಾ ಬಾಗಿಲಿನಲ್ಲಿ ನಿಂತಿದ್ದಾಳೆ.

**ಮಹಾನ್ ಸೌಧಃ ಸೀತಾರಮಣಕರುಣಾಂಬೋಧಿಲಹರೀ-**
**ಸುಧಾಫೇನಸ್ವಚ್ಛಃ ಸುರಪತಿಗಜೇಂದ್ರದ್ಯುತಿಹರಃ ।**
**ಕಿಮು ಶ್ರದ್ಧಾರಾದ್ಧಕ್ರತುವಿತತಿಪುಣ್ಯಾದ್ರಿಶಿಖರೋ**
**ಯಶೋ ಹಂಸಶ್ರೇಣೀವಲಯ ಇವ ಬಾಭಾತಿ ಸ ಗುರೋಃ ॥ ೫೫**

ಶ್ರೀರಾಮಚಂದ್ರಾಪುರದ ಮಠದ ಪರಿಷ್ಕೃತವಾದ ದೊಡ್ಡ ಕಟ್ಟಡವು ಶ್ರೀರಾಮನ ಕರುಣೆಯೆಂಬ ಕಡಲಿನ ಅಮೃತಮಯ ಪ್ರವಾಹದ ನೊರೆಯಂತೆ ಬೆಳಗಿದೆ. ಮತ್ತು ಅದು ದೇವೇಂದ್ರನ ವಾಹನವಾದ ಐರಾವತದ ಮೈಯ ಹೊಳಪನ್ನು ಅಪಹರಿಸಿದೆ. ಆ ಸೌಧವು ಶ್ರದ್ಧೆಯಿಂದ ವಿಧಿವತ್ತಾಗಿ ಆಚರಿಸಿದ ಅನೇಕ ಸತ್ಕರ್ಮಾನುಷ್ಠಾನಗಳಿಂದ ಉಂಟಾದ ಪುಣ್ಯಪುಂಜವೆಂಬ ಪರ್ವತದ ಶಿಖರವೋ ಅಥವಾ ಈಗಿನ ಗುರುಗಳ ಕೀರ್ತಿಯೆಂಬ ಹಂಸಗಳ ಶ್ರೇಣಿಗಳ ಮಂಡಲವೋ ಎಂಬಂತೆ ಅತಿಶಯವಾಗಿ ಪ್ರಕಾಶಿಸುತ್ತದೆ.

ಸ ಭಾತಿ ಪ್ರಾಸಾದೋ ಹರಿತವನಮಾಲಾ*ವೃತವಪುಃ
ಸ್ಫುರದ್ವಿದ್ಯುಲ್ಲಕ್ಷ್ಮೀಕಲಿತ ಇಹ ವಿಶ್ವಂಭರ ಇವ ||
ಶಿಲಾಸ್ತಂಭೋದಾರಸ್ಸುರಭಿಸುಮನಸ್ಸೇವಿತಪದಃ
ಸ್ವಗರ್ಭಾಂತರ್ಗೇಹಸ್ಥಿತಸಕಲಲೋಕೋಽಧಿಕರುಚಿಃ || ೫೬

ಹಚ್ಚಹಸುರಿನ ವನಶ್ರೇಣಿಯಿಂದ ಸುತ್ತುವರಿದಿರುವ, ಪ್ರಕಾಶಿಸುತ್ತಿರುವ ವಿದ್ಯುದ್ದೀಪಗಳ ಬೆಳಕಿನಿಂದ ಬೆಳಗುತ್ತಿರುವ. ಆ ಮಠದ ದೊಡ್ಡ ಕಟ್ಟಡವು ವನಮಾಲೆಯಿಂದ ಶೋಭಿತನೂ ಹೊಳಹೊಳೆಯುವ ಮಿಂಚಿನಬಳ್ಳಿಗೆ ಸದೃಶಳಾದ ಲಕ್ಷ್ಮೀದೇವಿಯಿಂದ ಸಹಿತನೂ ಆಗಿರುವ ವಿಷ್ಣುವೋ ಎಂಬಂತಿದೆ. ಮತ್ತು ಕರಿಯ ಹೆಗ್ಗಲ್ಲುಗಳ ಕಂಬಗಳಿಂದ ಮಹತ್ತರವೂ ವಿಖ್ಯಾತರಾದ ವಿದ್ವಜ್ಜನರಿಗೆ ಆಶ್ರಯವೂ ಸಮಸ್ತ ಜನರಿಗೆ ವಾಸಿಸಲು ಅನುಕೂಲವಾದ ಕೋಣೆ, ನೆಲಮಾಳಿಗೆ ಮುಂತಾದವುಗಳನ್ನು ತನ್ನ ಮಹೋದರದಲ್ಲಿ ತುರುಗಿಸಿ ಇಟ್ಟುಕೊಂಡಿರುವುದೂ ಆಗಿರುವ ಆ ಪ್ರಾಸಾದವು ಶಿಲಾಸ್ತಂಭಗಳಂತೆ ಮಹತ್ತರನೂ ಕಾಮಧೇನು, ಇಂದ್ರಾದಿ ದೇವವರ್ಗ ಇವುಗಳಿಂದ ಸೇವ್ಯನೂ ಚತುರ್ದಶಲೋಕಗಳನ್ನೂ ತನ್ನ ವಿರಾಡುದರದೊಳಗೆ ಅಡಗಿಸಿಕೊಂಡಿರುವವನೂ ಆದ ವಿರಾಟ್‌ಪುರುಷನಾದ ಹರಿಯೋ ಎನ್ನುವಂತಿದೆ

ಅಸಾಧ್ಯಂ ಕಿಂ ವಾ ಸ್ಯಾದಘುಟಘಟನಾಪಾಟವವತಾಂ
ಮಹಾಸೌಧಃ ಸ್ನಿಗ್ಧಃ ಪವನಸುಖಸಂಚಾರಸುಖದಃ |
ಕೃತೋಽಸೌ ಪ್ರೋತ್ತುಂಗೋ ನಗರಗಿರಿಶೃಂಗಪ್ರತಿಭಟೋ*
ಗುರೂಣಾಂ ವ್ಯಾಖ್ಯಾತಿ ಸ್ಫುಟಮವಿಚಲಂ ಧೀರಹೃದಯಮ್ ||

---

*ವನಮಾಲಾ — ಅರಣ್ಯಪಙ್ಕ್ತಿ ವಿಷ್ಣುವಿನ ಕೊರಳಸರ ಆಜಾನುಲಂಬಿನೀ ಮಾಲಾ ಸರ್ವರ್ತುಕುಸುಮೋಜ್ವಲಾ | ಮಧ್ಯೇಸ್ಥೂಲಕದಂಬಾಢ್ಯಾವನಮಾಲೇತಿ ಕೀರ್ತಿತಾ|| ಸುರಭಿ= ಕಾಮಧೇನು. ಪ್ರಖ್ಯಾತ, ಸುಮನಸ್= ಪಂಡಿತ. ದೇವತೆಗಳು, ಲೋಕ–ಭುವನ, ಜನ, ಲೋಕಸ್ತು ಭುವನೇಜನೇ ಇತ್ಯಮರಃ | ಸುಮನಾಃ ಪ್ರಾಜ್ಞದೇವಯೋಃ ಇತಿ ಹೇಮಚಂದ್ರಃ

*ನಗರಗಿರಿಶೃಂಗಪ್ರತಿಭಟಃ— ಈಗ ಹೊಸನಗರ ತಾಲ್ಲೂಕಿಗೆ ಸೇರಿದ ಹಳೇನಗರದ ಹತ್ತಿರ ಕೌಲೇದುರ್ಗ ಮುಂತಾದ ಶೈಲಶಿಖರಕ್ಕೆ ಸದೃಶವಾಗಿರುವ ಎಂದರ್ಥ.

ಸಾಮಾನ್ಯ ಜನತೆಗೆ ಸಾಧಿಸಲಾಗದ ಕಾರ್ಯಗಳನ್ನು ಅನಾಯಾಸವಾಗಿ ಸಾಧಿಸ ಬಲ್ಲ ಚಾತುರ್ಯವುಳ್ಳವರಿಗೆ ಲೋಕದಲ್ಲಿ ಸಾಧ್ಯವಾಗದುದು ಯಾವುದು ? ಏಕೆಂದರೆ, ರಾಮಚಂದ್ರಾಪುರದ ಮಠದ ಈ ದೊಡ್ಡ ಕಟ್ಟಡದ ನಿರ್ಮಾಣ ಅಂತಹುದು ಇಲ್ಲಿ ಹಳೆಯ ಮಾಟವು ಮಾಯವಾಗಿದೆ ಉನ್ನತವಾದ ಈ ಕಟ್ಟಡದಲ್ಲಿ ಗಾಳಿ ಧಾರಾಳ ವಾಗಿ ಸಂಚರಿಸಲು ಅನುಕೂಲವಾದ ಸುಂದರವಾದ ಅನೇಕ ಕಿಟಿಕಿಗಳಿವೆ. ಬೆಳಕು, ಗಾಳಿಗಳು ಚೆನ್ನಾಗಿರುವುದರಿಂದ ಇಲ್ಲಿ ವಾಸಿಸುವವರಿಗೆ ಸುಖಕರವಾದ ವಾತಾವರಣ ಏರ್ಪಟ್ಟಿದೆ ಈ ಮಹಡಿಯ ಕಟ್ಟಡ, ಹತ್ತಿರದ ಹಳೆ ನಗರದ ಕೋಟೆಯು ಒಳಗಿರುವ ಕಾಲೇದುರ್ಗದ ಬೆಟ್ಟದ ಶಿಖರವನ್ನು ಹೋಲುತ್ತಿದೆ. ಇಂತಹ ಉನ್ನತವೂ ರಮಣೀಯವೂ ಆದ ಈ ಹೊಸಕಟ್ಟಡವು ಈಗಿನ ಗುರುಗಳ ಧೀರ ಹೃದಯವನ್ನು ಸ್ಫುಟವಾಗಿ ವ್ಯಾಖ್ಯಾನಿಸುತ್ತಿದೆಯೋ ಎನ್ನುವಂತಿದೆ.

**ನಿರೀಕ್ಷ್ಯೇದಂ ಹೃದ್ಯಂ ವಿಶದಮನವದ್ಯಂ ಕವಿಸದೋ–**
**ನಿಗಾದ್ಯಂ ಬ್ರಹ್ಮೋದ್ಯಾಶ್ರಯಜನನಿವೇದ್ಯಂ ನಿರುಪಮಮ್ ।**
**ಗುರುಸ್ಥಾನಂ ವಿದ್ಯಾಸದನಮಧಿಶಾಲಂ ದಿವಿಷದಾಂ**
**ಸಭಾ ಶಾಲೀನತ್ವಂ ಭಜತು ವಿಗತಾರಾತಿನಿಕರಮ್ ॥** ೫೮

ಶ್ರೀಮಠದ ಈ ಮಹಾಸೌಧದ ಒಳಗಡೆ ಗುರುಗಳ ಉಪಸ್ಥಾನವಾದ ವಿದ್ಯಾ ಮಂದಿರವಿದೆ ಶಿಲ್ಪ ರಚನೆಯಿಂದ ಪ್ರಕಾಶಿಸುತ್ತಿರುವ ಅದು ದೋಷರಹಿತವಾಗಿದೆ ಹೃದಯಪ್ರಿಯವೂ ಆಗಿದೆ ಕವಿಗಳ ಗೋಷ್ಠಿಯಲ್ಲಿ ಬಣ್ಣಿಸಲು ಅರ್ಹವಾದ ಇದು ಬ್ರಹ್ಮವಾದಿಗಳಾದ ಸಂನ್ಯಾಸಿ ಜನರಿಗೆ ಒಪ್ಪಿಸಲು ಅರ್ಹವಾದದ್ದು. ಇಲ್ಲಿ ಯಾವ ವಿಧವಾದ ಮನೋವಿಕಾರಕ್ಕೂ ಅವಕಾಶವಿಲ್ಲ. ಅಸದೃಶವಾದ ಈ ವಿದ್ಯಾ ಮಂದಿರವೆಂಬ ಸಭಾಂಗಣವನ್ನು ನೋಡಿ ದೇವಸಭೆಯಾದ ಸುಧರ್ಮವು ಅಸೂಯೆ ಪಡದಿರಲಿ.

**ತತಸ್ತುಂಗಾತೀರೇ ವಿಮಲತರಗಂಗಾತಟನಿಭೇ**
**ಕೃಪಾಪಾಂಗಾಸಂಗಾನ್ಮೃಹರಿಪದಸಂಗವ್ಯಸನಿನಾಮ್ ।**
**ಗುರೂಣಾಂ ಯೋಗಶ್ರೀಪರಿಮಲಿತಶುದ್ಧಾಂತರತಯಾ**
**ಪುರಾಣಃ ಪ್ರಾಸಾದಃ ಪರಿಕಲಿತ ಆಸೀದಭಿನವಃ ॥** ೫೯

ಬಳಿಕ ಅತ್ಯಂತ ಪರಿಶುದ್ಧವಾದ ಗಂಗಾನದಿಯ ತೀರಕ್ಕೆ ಸದೃಶವಾದ ತುಂಗಾ ನದೀತೀರದಲ್ಲಿ ಇರುವ ತೀರ್ಥಹಳ್ಳಿಯಲ್ಲಿ ಇದ್ದ ಶ್ರೀರಾಮಚಂದ್ರಾಪುರದ ಮಠದ ಹಳೆಯ ಶಿಥಿಲವಾದ ಕಟ್ಟಡವು ಆ ಮಠದ ಉಪಾಸ್ಯದೇವತೆಯಾದ ಶ್ರೀನೃಸಿಂಹನ

ಪಾದಸೇವಾಸಕ್ತರಾದ ಹಿಂದಿನ ಗುರುಗಳ ಕೃಪಾಕಟಾಕ್ಷದ ಸಂಗದಿಂದ ಮತ್ತು ಧ್ಯಾನ ಯೋಗದ ತೇಜಸ್ಸಿನಿಂದ ವ್ಯಾಪ್ತವಾದ ನಿರ್ಮಲವಾದ ಈಗಿನ ಗುರುಗಳ ಅಂತಃ ಕರಣದಿಂದಲೂ ಹೊಸದಾಗಿ ರೂಪಗೊಂಡಿತು.

**ಮಠಾಗಾರಃ ಸಿದ್ದಾಪುರನಿಕಟವಲ್ಲೀವಲಯಿತಃ**
**ಸುಜೀರ್ಣಃ ಪ್ರಾಚೀನೋ ಹ್ಯಭಿನವವಪುರ್ಭಾನುಕುಲಿಭೂಃ ।**
**ಗುರೋರಾದೇಶಸ್ಥೈಃ ಪ್ರಕೃತಿಮಧುರೈಃ ಸಂಪ್ರತಿತನೈ–**
**ರಕಾರ್ಯಧ್ಯಾತ್ಮಶ್ರೀವಿವಶಮತಿಭಿಃ ಶಿಷ್ಯನಿಕರೈಃ ॥** ೬೦

ಸಿದ್ದಾಪುರ ತಾಲ್ಲೂಕಿನ ಬಿಳಿಗಿಸೀಮೆಯ ಪರಿಸರಕ್ಕೆ ಸೇರಿದ ಸಿದ್ದಾಪುರಕ್ಕೆ ಹತ್ತಿರವಾದ ಹಲವು ಹಳ್ಳಿಗಳಿಗೆ ಕೇಂದ್ರವಾದ 'ಬಾನುಕುಳಿ' ಎಂಬಲ್ಲಿ ಇರುವ ಶ್ರೀರಾಮಚಂದ್ರಾಪುರದ ಮಠದ ಗುರುಗಳಿಗೆ ಆ ಸೀಮೆಯವರು ಕ್ರಿ.ಶ. ೧೯೩೪ರಲ್ಲಿ ಒಪ್ಪಿಸಿದ್ದ ಮಠದ ಕಟ್ಟಡವು ತೀರ ಜೀರ್ಣವಾಗಿದ್ದಿತು. ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ನಡೆದುಕೊಳ್ಳುವ ಸಹಜ ಸರಳ ಸ್ವಭಾವವುಳ್ಳ ಅಧ್ಯಾತ್ಮವಿಷಯದಲ್ಲಿ ವಿವಶರಾದ ಈಗಿನ ಆ ಸೀಮೆಯ ಶಿಷ್ಯರ ಸಮೂಹವು ಬಾನುಕುಳಿ ಮಠದ ಹಳೆಯ ಕಟ್ಟಡವನ್ನು ತೆಗೆಯಿಸಿ ಭವ್ಯವಾದ ಹೊಸ ಕಟ್ಟಡವನ್ನು ಆ ಸೀಮೆಯ ಶಿಷ್ಯರು ಉದಾರವಾಗಿ ಕೊಟ್ಟ ಹಣದಿಂದ ಕಟ್ಟಿಸಿತು. (ಸೌಮ್ಯ ಸಂವತ್ಸರದ ವೈಶಾಖ ಶುದ್ಧ ಪಂಚಮಿಯ ಶ್ರೀ ಶಂಕರಜಯಂತಿಯ ಶುಭಸಂದರ್ಭದಲ್ಲಿ ಶ್ರೀ ರಾಘವೇಂದ್ರ ಭಾರತೀಸ್ವಾಮಿಗಳಿಗೆ ಅದನ್ನು ಒಪ್ಪಿಸಿತು ಅಂದು ಶ್ರೀಸ್ವಾಮಿಗಳು ಆ ಹೊಸ ಕಟ್ಟಡವನ್ನು ಉದ್ಘಾಟಿಸಿದರು. ಅಲ್ಲಿ ಸೀತಾ–ರಾಮ ಲಕ್ಷ್ಮಣರ ವಿಗ್ರಹಗಳನ್ನು ಸ್ಥಾಪಿಸಿದರು.)

**ಮಂಗಳೂರು ಪ್ರಾಂತದಲ್ಲಿ ನೂತನಮಠ ಕಟ್ಟಿದ ವಿಚಾರ**

**ಕದಾಚಿಚ್ಛಾರ್ಯಸ್ಯಾಂತಿಕಮುಪಗತಾ ಮಂಗಲಪುರಾ–**
**ದುಪಪ್ರಾಂತೀಯಾಃ ಸಂಪ್ರತಿತನಧುರೀಣಾಃ ಕತಿಪಯೇ ।**
**ಗುರೌ ಶ್ರದ್ಧಾಭಕ್ತಿಪ್ರವಣಮನಸಸ್ತೇ ಸುಮನಸಃ**
**ಪ್ರಣಮ್ಯಾಚಾರ್ಯಾಂಘ್ರೀ ಸವಿನಯಮಿತೀದಂ ಪ್ರಜಗದುಃ ॥**

ಯಾವುದೋ ಒಂದು ಸಮಯದಲ್ಲಿ ಮಂಗಳೂರಿನಿಂದ ಅಲ್ಲಿಯ ಹತ್ತಿರದ ಸೀಮೆಯಲ್ಲಿ ವಾಸಿಸುತ್ತಿರುವ ಈಗಿನ ಶಿಷ್ಯ ಪ್ರಮುಖರು ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳ ಸಂದರ್ಶನಕ್ಕಾಗಿ ಮಠಕ್ಕೆ ಬಂದರು. ಅವರು ಗುರುಗಳವರಲ್ಲಿ ವಿಶೇಷ ಶ್ರದ್ಧಾಭಕ್ತಿಯುಳ್ಳವರೂ ವಿದ್ಯಾವಂತರೂ ಆಗಿದ್ದರು ಅವರು ಶ್ರೀ ಸ್ವಾಮಿಗಳ ಅಡಿಗಳಿಗೆ ಎರಗಿ ವಿನಯಪೂರ್ವಕವಾಗಿ ಮುಂದೆ ಹೇಳುವಂತೆ ಶ್ರೀಗಳ ಸನ್ನಿಧಿಯಲ್ಲಿ ವಿಜ್ಞಾಪಿಸಿ ಕೊಂಡರು

ಅದಃಪೀಠಾಚಾರ್ಯೈರಸಕೃದನುಶಿಷ್ಟಾಶ್ಚ ಭಗವನ್
ಕೃತಾರ್ಥಾ ಅಸ್ಮಾಕಂ ಖಲು ಕುಲಭವಾಃ ಪೂರ್ವಪುರುಷಾಃ ।
ಚಿರಾಯೈತತ್ಪ್ರಾಂತೇಷ್ವಧಿಗತನಿಯೋಗಾ ವಯಮಮೀ
ಭವತ್ಸಾನ್ನಿಧ್ಯೇನ ವ್ಯಪಗತ ವಿಪತ್ಕಾಃ ಸುಖಯುತಾಃ ॥ ೬೨

ಪೂಜ್ಯರೇ ! ಈ ರಾಮಚಂದ್ರಾಪುರಮಠದ ಪೀಠಾಧಿಪತಿಗಳಾದ ಹಿಂದಿನ ಗುರುವರ್ಯರು ನಮ್ಮ ವಂಶದಲ್ಲಿ ಹುಟ್ಟಿದ ನಮ್ಮ ಹಿರಿಯರಿಗೆ ಧರ್ಮದ ವಿಷಯದಲ್ಲಿ ಅನೇಕ ಬಾರಿ ಮಾರ್ಗನಿರ್ದೇಶ ಮಾಡಿರುತ್ತಾರೆ. ಆದುದರಿಂದ ನಮ್ಮ ಹಿರಿಯ ಯರೆಲ್ಲರೂ ಈ ಪೀಠದ ಹಿಂದಿನ ಗುರುಗಳ ಅನುಗ್ರಹಕ್ಕೆ ಪಾತ್ರರಾಗಿದ್ದ ಕಾರಣ ಧನ್ಯರಾದರು. ಈ ಪ್ರಾಂತದಲ್ಲಿ ಶ್ರೀಶ್ರೀಗಳವರು ಸಂಚಾರ ಕೈಗೊಳ್ಳುವ ಬಗ್ಗೆ ನಮಗೆ ಬಹಳ ಕಾಲದ ಅನಂತರ ರಾಯಸವು ತಲಪಿದೆ. ನಾವು ಕೃತಕೃತ್ಯರು. ಪೂಜ್ಯರೇ ! ತಮ್ಮ ಸನ್ನಿಧಾನದಿಂದ ನಮ್ಮ ಆಪತ್ತುಗಳು ದೂರವಾಗಿವೆ. ನಾವು ಕ್ಷೇಮದಿಂದ ಇರುವೆವು.

ಪ್ರಶಾಸ್ತೄಣಾಂ ಭೇದಾದಧಿವಿವಿಧದೇಶಂ ನಿವಸತಾಂ
ಸಮೇಷಾಮನ್ಯೋನ್ಯಂ ತ್ವಸಕೃದಭಿಲಾಪಸ್ಯ ವಿರಹಾತ್ ।
ನ ತಾವತ್ಸೌಹಾರ್ದಂ ನ ಚ ಪರಿಚಯೋ ನ ವ್ಯವಹೃತಿ-
ರ್ನ ಚ ಸ್ವಂ ಬಾಂಧವ್ಯಂ ವ್ಯಕಸದಿವ ನಃ ಕ್ರಾಂತಸಮಯೇ ॥

ಕನ್ನಡ ರಾಜ್ಯದ ಏಕೀಕರಣವಾಗುವುದಕ್ಕಿಂತ ಹಿಂದೆ ಬೇರೆ ಬೇರೆ ರಾಜ್ಯಾಡಳಿತ ಗಾರರ ಆಡಳಿತವು ಬೇರೆಯಾದುದರಿಂದ ಬೊಂಬಾಯಿ ಪ್ರಾಂತ, ಮದರಾಸಾಧಿಪತ್ಯ, ಮೈಸೂರು, ಕೊಡಗು ಮುಂತಾದ ಸಂಸ್ಥಾನಗಳಲ್ಲಿ ವಾಸಿಸುತ್ತಿದ್ದ ನಮ್ಮೆಲ್ಲರ ಅನ್ಯೋನ್ಯ ಸಂಪರ್ಕ ಮತ್ತು ಸಂಭಾಷಣೆಗಳಿಗೆ ಹಿಂದೆ ಕಳೆದ ದಿವಸಗಳಲ್ಲಿ ಅವಕಾಶ ವಿರಲಿಲ್ಲವೋ ಎಂಬಂತೆ ಆಗಿತ್ತು. ಆದುದರಿಂದ ಆ ಕಳೆದ ಸಮಯದ ಲಾಗಾಯ್ತು ನಮ್ಮಲ್ಲಿ ಅನ್ಯೋನ್ಯವಾಗಿ ಸೌಹಾರ್ದವು ಬೆಳೆಯಲಿಲ್ಲ. ಪರಿಚಯವೂ ವಿಕಾಸವಾಗ ಲಿಲ್ಲ. ವ್ಯವಹಾರವು ವಿಶೇಷವಾಗಿ ಕುದುರಲಿಲ್ಲ; ಮತ್ತು ನಮ್ಮ ಅನ್ಯೋನ್ಯವಾದ ನಂಟಸ್ತಿಕೆಯೂ ಅರಳಲಿಲ್ಲವೋ ಎಂಬಂತೆ ಆಯಿತು.

ಪ್ರಜಾತಂತ್ರಾರಂಭಾದಿಯದವಧಿ ದೇಶಾ ಅಪಿ ಚ ಯೇ
ಯದಾ ತತ್ತದ್ಭಾಷಾ ವ್ಯವಹೃತಿವಿಶೇಷಕ್ರಮವಶಾತ್ ।
ವಿಭಿನ್ನಾಸ್ತದ್ಭಾಷಾಪ್ರಥಿತನಿಜನಾಮ್ನಾ ವ್ಯವಹೃತಾಃ
ಬಭೂವುಸ್ತೇ ಪ್ರಾಯೋ ಭರತಭುವಿ ಸರ್ವೇ ಕಿಲ ತದಾ ॥ ೬೪

ಭಾರತದಲ್ಲಿ ಪ್ರಜಾಶಾಸನದ ಶುರುವಿನಿಂದ ಈತನಕ ಯಾವ ಯಾವ ರಾಜ್ಯಗಳು ಇದ್ದುವೋ ಅವೆಲ್ಲವೂ ಆಯಾ ಭಾಷಾವಾರು ಕ್ರಮದಿಂದ ಯಾವಾಗ ಬೇರೆ ಬೇರೆ ವಿಂಗಡಿಸಲ್ಪಟ್ಟವೋ ಆಗ ಆಯಾ ರಾಜ್ಯಗಳಿಗೆ ಆಯಾ ಭಾಷೆಯ ಹೆಸರೇ ಬಹುಶಃ ನಾಮಕರಣ ಮಾಡಲ್ಪಟ್ಟಿತಷ್ಟೆ.

**ಅಖಂಡಂ ಕರ್ಣಾಟಾಭಿಧಮಿದಮಭೂದ್ರಾಜ್ಯಮಖಿಲಂ**
**ತತಃ ಸರ್ವೇಷಾಂ ನಃ ಪ್ರಚಿತ ಇವ ಕಾಲಃ ಸಮಜನಿ ।**
**ಕಲಾಯಾಂ ವಿಜ್ಞಾನೇ ನೃಪತಿನಯತಂತ್ರೇಽಥ ಗಣಿತೇ**
**ತಥಾ ಭೈಷಜ್ಯೇಽಪಿ ಪ್ರಗತಿಪಥಿಕಾ ಹವ್ಯಕಜನಾಃ ॥** ೬೫

ಭಾಷಾವಾರು ಪ್ರಾಂತಗಳ ರಚನೆಯಾದೊಡನೆ ಎಲ್ಲಾ ಖಂಡತುಂಡಾಗಿದ್ದ ಕನ್ನಡನಾಡು ಒಂದುಗೂಡಿ ಕರ್ಣಾಟಕ ರಾಜ್ಯವೆಂದು ಪ್ರಸಿದ್ಧವಾಯಿತು. ಅನಂತರದ ಕಾಲ ನಮ್ಮೆಲ್ಲರ ಅಭಿವೃದ್ಧಿಯ ಕಾಲವೆಂದು ಹೇಳಬಹುದು. ಇಂದು ತಮ್ಮ ಶಿಷ್ಯರಾದ ಹವ್ಯಕ ಬ್ರಾಹ್ಮಣರು ಕಲೆ, ವಿಜ್ಞಾನ, ರಾಜನೀತಿ, ಗಣಿತ, ಜ್ಯೋತಿಷ್ಯ, ವೈದ್ಯ ಮುಂತಾದವುಗಳಲ್ಲಿ ಪ್ರಗತಿಯ ಹಾದಿಯಲ್ಲಿ ಹೆಜ್ಜೆಯಿಟ್ಟಿದ್ದಾರೆ. ಅಂತಹ ಪ್ರಸಿದ್ಧ ಹವ್ಯಕ ಶಿಷ್ಯರಲ್ಲಿ,

**ಕಿಯಂತೋ ಧೀಮಂತಃ ಕತಿ ಕತಿ ಮಹಾಂತಶ್ಚ ಕವಯಃ**
**ಕಿಯಂತಃ ಶ್ರೀಮಂತಃ ಕತಿ ಕತಿ ಚ ವಾಚಸ್ಪತಿವರಾಃ ।**
**ಕಿಯಂತಃ ಸ್ವೋಪಜ್ಞಕ್ರಮವಿತತಕೃಷೌ ಪರಿಣತಾಃ**
**ಕಿಯಂತಸ್ತಂತ್ರಜ್ಞಾ ಭರತನಯವಿಜ್ಞಾನನಿಪುಣಾಃ ॥** ೬೬

ಎಷ್ಟು ಮಂದಿ ಪಂಡಿತರು! ಎಷ್ಟು ಮಂದಿ ಪ್ರಸಿದ್ಧರಾದ ಕವಿಗಳು! ಎಷ್ಟು ಮಂದಿ ಧನಿಕರು! ಅದೆಷ್ಟು ಮಂದಿ ವಕೀಲರು! ಅದೆಷ್ಟುಮಂದಿ ಇಂಜಿನೀಯರುಗಳು! ಎಷ್ಟು ಮಂದಿ ತಮ್ಮ ಸ್ವಂತ ತಿಳುವಳಿಕೆಯಿಂದ (ಅಂದರೆ ಇತರೋಪದೇಶವಿಲ್ಲದೇ) ಅನುಸರಿಸಿದ ವಿಧಿವಿಧಾನಗಳುಳ್ಳ ಕೃಷಿಯ ವಿಷಯದಲ್ಲಿ ಅತ್ಯಂತ ಪರಿಣಿತರಾದವರು! ಮತ್ತು ಅದೆಷ್ಟು ಮಂದಿ ನಾಟ್ಯಶಾಸ್ತ್ರ ಪ್ರಯೋಗ ಕುಶಲರು! ಅದೆಷ್ಟು ಮಂದಿ ಯಕ್ಷಗಾನಾದಿ ಜಾನಪದ ದರ್ಶನಾದಿಗಳಲ್ಲಿ ಪರಿಣತರೂ ಆಗಿರುವರು!

**ತತೋ ನಾನಾಕೃಷ್ಟೇಷ್ವಪಿ ಚ ವಿವಿಧೋದ್ಯೋಗ ಘಟಕೇ–**
**ಷ್ವಥೋ ಸಾಚಿವ್ಯೇಷು ಪ್ರಥಮಗಣನಾರ್ಹತ್ವಮಭಜನ್ ।**
**ಇದಂ ಸರ್ವಂ ಸಂಪ್ರತ್ಯನುಪಹತಸಂಪದ್ವಿಲಸಿತಂ**
**ಗುರೂಣಾಮಸ್ಮಾಕಂ ಕಠಿಣತಪಸಾಂ ಕೋಽಪಿ ಮಹಿಮಾ ॥**

ಅನಂತರ ಬಗೆಬಗೆಯ ಕೃಷಿ ಕರ್ಮಗಳಲ್ಲಿಯೂ ವಿವಿಧವಾದ ಉದ್ಯೋಗ ಘಟಕಗಳಲ್ಲಿಯೂ ಸಚಿವಕಾರ್ಯಗಳಲ್ಲಿಯೂ ಮೇಲೆಹೇಳಿದ ಹವ್ಯಕ ಬ್ರಾಹ್ಮಣರು ಮೊದಲನೆಯ ಸ್ಥಾನವನ್ನು ಗಳಿಸಿದ್ದಾರೆ. ಇವೆಲ್ಲವೂ ಈಗಿನ ಅಕ್ಷೀಣವಾದ ಸಂಪತ್ತಿನ ವೈಭವವು ನಮ್ಮ ಗುರುಗಳಾದ ತಮ್ಮ ಕಠೋರ ತಪಸ್ಸಿನ ಮಹಿಮೆಯಲ್ಲದೇ ಬೇರೆಯಲ್ಲ.

**ಕದಾ ವಾ ನಃ ಸ್ಯಾತ್ತ್ವೇ ಚರಣರಜಸಾ ಪೂತಸದನಂ**
**ಗುರೋಃ ಕಾರುಣ್ಯಾತ್ತ್ವೇ ಭವತು ವಿರಜಸ್ಕಂ ಚ ಹೃದಯಮ್ ।**
**ಕದಾ ತೇ ಸಾನ್ನಿಧ್ಯಂ ಪ್ರಶಮಯತು ನಃ ಶೋಕಮಖಿಲಂ**
**ಸುಧಾಸೇಕಃ ಕೋಽಪಿ ಶ್ರವಣಯುಗಯೋರಸ್ತು ವಚಸಾಮ್॥**

ಗುರುಗಳೇ ! ಯಾವಾಗ ತಮ್ಮ ಪಾದಧೂಳಿಯಿಂದ ನಮ್ಮ ಮನೆ ಪವಿತ್ರವಾದೀತು ? ಗುರುಗಳಾದ ತಮ್ಮ ಕರುಣೆಯಿಂದ ನಮ್ಮ ಹೃದಯ ನಿರ್ಮಲವಾದೀತು ? ಯಾವಾಗ ತಮ್ಮ ಸನ್ನಿಧಾನವು ನಮ್ಮ ಎಲ್ಲಾ ದುಗುಡಗಳನ್ನು ಹೋಗಲಾಡಿಸೀತು ? ತಮ್ಮ ಪ್ರವಚನದ ಅಪೂರ್ವವಾದ ಸುಧಾಸೇಚನೆಯು ನಮ್ಮ ಎರಡೂ ಕಿವಿಗಳಿಗೂ ಆಗಲಿ.

**ಯತಃ ಸೀತಾಜಾನಿಪ್ರಿಯತತನುನಾಮಾಂಕಿತಪುರಂ**
**ಸುದೂರಂ ನಃ ಸ್ಥಾನಾದ್ಗುರುಚರಣಸಾನ್ನಿಧ್ಯಮಧುರಮ್ ।**
**ಭವಂತಂ ದೂರಸ್ಥಂ ಪರಿಚರಿತುಮೀಶಾಃ ಕಥಮಮೀ**
**ತತಶ್ಶಾಸ್ತೃತ್ವಾಂತೇ ನಿವಸತು ಭವಾನತ್ರ ಕೃಪಯಾ ॥** ೬೯

ಪೂಜ್ಯರಾದ ಗುರುಗಳ ಸನ್ನಿಧಾನದಿಂದ ಹಿತವಾಗಿರುವ ಸೀತೆಯೇ ಜಾಯೆಯಾಗಿಉಳ್ಳವನ ಪವಿತ್ರವಾದ ಹೆಸರಿನಿಂದ ಅಂಕಿತವಾದ ಪಟ್ಟಣವು (ಅಂದರೆ, ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನಲ್ಲಿರುವ ಶರಾವತೀನದಿಯ ತೀರದಲ್ಲಿರುವ ಶ್ರೀರಾಮಚಂದ್ರಾಪುರವು) ನಮ್ಮ ನಿವಾಸವಾದ ದಕ್ಷಿಣಕನ್ನಡ ಜಿಲ್ಲೆಯ ಮಂಗಳೂರು ಪ್ರಾಂತದಲ್ಲಿ ವಾಸಿಸುತ್ತಿರುವ ನಮ್ಮ ಊರಂಗಳಿಗೆ ಬಹುದೂರವಾಗಿದೆ. ದೂರದಲ್ಲಿ ವಾಸಿಸುತ್ತಿರುವ ತಮ್ಮನ್ನು ಸೇವಿಸಲು ನಾವು ಅಸಮರ್ಥರಾಗಿದ್ದೇವೆ. ಆದುದರಿಂದ ತಾವು ದಯವಿಟ್ಟು ನಮ್ಮ ಮಂಗಳೂರು ಪ್ರಾಂತದಲ್ಲಿ ವಾಸಮಾಡಬೇಕೆಂದು ನಮ್ಮ ಪ್ರಾರ್ಥನೆ ಎಂದು.

**ತತಸ್ತ್ವೇ ಪುತ್ತೂರುಪ್ರಭೃತಿಬಹುಸೀಮಪ್ರತಿನಿಧಿ–**
**ಪ್ರವೇಕಾ ದುರ್ಗಾದ್ಯಾಯತನಭುವಿ ನಂದಾವರಪದೇ ।**
**ಗುರೂಣಾಂ ಸಾನ್ನಿಧ್ಯೇ ಸದಭಿಮತಭಾವಾಃ ಕತಿಪಯೇ**
**ಸಮಾವಿಷ್ಟಾಃ ಶಿಷ್ಯಾ ಗುರುಚರಣಸೇವಾಕುತುಕಿನಃ ॥** ೭೦

ಅನಂತರ ಪುತ್ತೂರು, ವಿಟ್ಲ, ಕುಂಬಳೇ ಮಂಜ ಮುಂತಾದ ಸೀಮೆಯ ಕೆಲವು ಮುಖ್ಯ ಪ್ರತಿನಿಧಿಗಳು ಶಾಲಿವಾಹನಶಕ ೧೮೮೪ನಯ ಪ್ಲವಸಂವತ್ಸರದ ಅಧಿಕಜ್ಯೇಷ್ಠ ತದಿಗೆ ಗುರುವಾರ (ದಿನಾಂಕ ೧-೬-೧೯೬೧)ರಲ್ಲಿ ಬಂಟ್ವಾಳ ತಾಲ್ಲೂಕ್ ಪಾಣೇಮಂಗಳೂರಿನ ಹತ್ತಿರ ನೇತ್ರಾವತಿಹೊಳೆಯ ದಂಡೆಯಲ್ಲಿರುವ ನಂದಾವರ ಗ್ರಾಮದ ದುರ್ಗಾಪಂಚಾಯತನ ದೇವಾಲಯದಲ್ಲಿ ಶ್ರೀರಾಘವೇಂದ್ರ ಭಾರತೀ ಸ್ವಾಮಿಗಳ ಸನ್ನಿಧಿಯಲ್ಲಿ ಸಭೆಸೇರಿದರು. ಆ ಸೀಮೆಯ ಪ್ರತಿನಿಧಿಗಳೆಲ್ಲರೂ ಗುರು ಪೀಠದಲ್ಲಿ ಒಳ್ಳೆಯ ಭಾವನೆಯುಳ್ಳವರು. ಗುರುಸೇವಾಕಾರ್ಯದಲ್ಲಿ ಕುತೂಹಲ ವುಳ್ಳವರೂ ಸನಾತನಸಂಪ್ರದಾಯವುಳ್ಳವರೂ ಆಗಿದ್ದರು.

**ನಿರಾಬಾಧೇ ಭವ್ಯೇ ಮಧುರತರಗವ್ಯೇ ಸುಖಕರೇ**
**ಪೆರಾಜೇ ಸ್ಥಾನೇಽಸ್ಮಿನ್ನಿತರಜನಸಂಬಾಧವಿಧುರೇ ।**
**ವಯಂ ಸಜ್ಜಾ ವಿದ್ವಜ್ಜನಸಮಿತಿನಿರ್ಧಾರಿತದಿಶಾ**
**ಮಠಂ ನವ್ಯಂ ನಿರ್ಮಾಪಯಿತುಮಭಿವಾಂಛಾಮ ಭಗವನ್ ॥**

ಪೂಜ್ಯರೇ! ಈ 'ಪೆರಾಜೆ' ಸ್ಥಳವು ಪ್ರಶಾಂತವಾಗಿದೆ, ಇಲ್ಲಿ ಯಾವ ತೊಂದರೆಯೂ ಇಲ್ಲ. ಇದು ಸಹಜ ಪ್ರಕೃತಿ ಸುಂದರವಾಗಿದೆ. ಇಲ್ಲಿ ನೀರಾವರಿ ಪ್ರದೇಶವಿರುವುದರಿಂದ ಹುಲ್ಲುಗಾವಲಿಗೆ ಕೊರತೆಯಿಲ್ಲ. ಪಶುಸಂಪತ್ತು ಇಲ್ಲಿ ಚೆನ್ನಾಗಿ ಇರುವುದರಿಂದ ಭಗವದಾರಾಧನೆಗೆ ಬೇಕಾದ ಪಂಚಾಮೃತಕ್ಕೆ ಕೊರತೆ ಯಿಲ್ಲ. ಹಾಲು, ಹಯನ ಸಮೃದ್ಧವಾಗಿರುವುದರಿಂದ ಸುಖಕರವಾಗಿದೆ ಇದು ಇಲ್ಲಿ ಪಟ್ಟಣದ ಯಾವ ಗೊಂದಲದ ವಾತಾವರಣವಿರುವುದಿಲ್ಲ. ಜನ ಜಂಗುಳಿಯ ಪಟ್ಟಣ ಪ್ರದೇಶಕ್ಕೆ ಇದು ದೂರವಾಗಿದೆ. ಆದುದರಿಂದ ಇಲ್ಲಿ ಇಂದು ಸೇರಿದ ಸಮಿತಿಯ ತೀರ್ಮಾನದಂತೆ ಈ 'ಪೆರಾಜೆ' ಗ್ರಾಮದಲ್ಲಿ ಹೊಸಮಠ ಕಟ್ಟಿಸಲು ನಾವು ಸಿದ್ಧ ರಾಗಿದ್ದೇವೆ. ಅದಕ್ಕೆ ತಗಲುವ ಆರ್ಥಿಕಭಾರವನ್ನು ನಾವು ಭರಿಸಬಯಸುತ್ತೇವೆ.

**ಭವಾನತ್ರ ಸ್ಥಿತ್ವಾ ತಪಸಿ ನಿರತಃ ಸ್ವಾಭಿಲಷಿತಂ**
**ಗುರೋ ಬ್ರಹ್ಮ ಧ್ಯಾಯನ್ನಿವಸತು ಸದಾಽಸ್ಮಾಸು ದಯತಾಮ್ ।**
**ಭವತ್ಸಾನ್ನಿಧ್ಯೇನ ಪ್ರಶಮಮುಪಯಾಂತ್ವೀತಯ ಇಮಾಃ**
**ಶಿಲಾನ್ಯಾಸಂ ಕುರ್ಯಾದಿಹ ಸದಯದೃಷ್ಟ್ಯಾ ಮಠಭುವಿ ॥ ೭೨**

ಗುರುಗಳೇ! ತಾವು ನಾವು ಮುಂದೆ ಕಟ್ಟಿಸುವ ಕಟ್ಟಡದಲ್ಲಿ ತಾವು ಉಳಿದು ತಪೋನಿರತರಾಗಿ ತಮಗೆ ಇಷ್ಟವಾದ ಪರಬ್ರಹ್ಮವಸ್ತುವನ್ನು ಉಪಾಸಿಸುತ್ತಾ ಇಲ್ಲಿ ವಾಸಮಾಡಬೇಕು. ತಾವು ನಮ್ಮ ಮೇಲೆ ದಯೆಯಿಡಬೇಕು. ತಮ್ಮ ಸನ್ನಿಧಿಯಿಂದ ಯಾವುದಾದರೂ ನಮಗೆ ತಿಳಿಯದ ಉಪದ್ರವಗಳು ಇಲ್ಲಿ ಇರಬಹುದಾದರೆ ಅವೂ

ನಷ್ಟವಾಗಲಿ ತಾವು ದಯವಿಟ್ಟು ನೂತನ ಮಠ ಕಟ್ಟುವ ಸ್ಥಳದಲ್ಲಿ ಶಂಕುಸ್ಥಾಪನೆ ಯನ್ನು ಮಾಡಬೇಕು ಎಂದು

ಅನಾಢ್ಯಾ ಆಢ್ಯಾಶ್ಚಾಪ್ಯಥ ಗುರುಷು ವಿಶ್ರಾಣಿತಧನಾಃ
ಅನನ್ಯಾಚಾರ್ಯಾಜ್ಞಾ ವಿನತಮನಸಸ್ತೇ ಸುಮನಸಃ ।
ತೃಷಾರ್ತಾ ಅಧ್ಯಾತ್ಮಶ್ರವಣಮನನಾದ್ಯೇಷು ಸತತಂ
ವಿನೇಯಾ ಇತ್ಯೂಚುಸ್ಸವಿನಯಮಮುಂ ಸಾಂಜಲಿಗುರುಮ್ ॥

ಅಲ್ಲಿ ಸೇರಿದ ಶಿಷ್ಯರೆಲ್ಲರೂ ಈ ಮಠದ ಆಚಾರ್ಯರ ವಿಷಯದಲ್ಲಿ ಅನನ್ಯ ಭಕ್ತರಾಗಿದ್ದರು. ಈ ಗುರುಗಳ ಆಣತಿಗೆ ಎಲ್ಲರೂ ವಿಧೇಯರೇ. ವಿದ್ಯಾವಂತ ರಾದ ಆ ಶಿಷ್ಯರಲ್ಲಿ ಬಡವರು ಸಾಹುಕಾರರು ಎಂದು ಭೇದವಿಲ್ಲದೇ ಎಲ್ಲರೂ ತಮ್ಮ ತಮ್ಮ ಆರ್ಥಿಕಾನುಕೂಲಕ್ಕೆ ತಕ್ಕಂತೆ ಧಾರಾಳವಾಗಿ ಗುರುಗಳಿಗೆ ಕಾಣಿಕೆ,ಹಣಗಳನ್ನು ತ್ಯಾಗಮಾಡಿದವರೇ ಆಗಿದ್ದರು ಇವರು ಯಾವಾಗಲೂ ಆಧ್ಯಾತ್ಮಿಕಜಿಜ್ಞಾಸುಗಳು. ಹೀಗಿರುವ ಆ ಶಿಷ್ಯರು ಮತ್ತೆ ಅಂಜಲಿಬದ್ಧರಾಗಿ ವಿನಯಪೂರ್ವಕವಾಗಿ ಗುರುಗಳಾದ ಶ್ರೀರಾಘವೇಂದ್ರಸ್ವಾಮಿಗಳಿಗೆ ಹಿಂದೆ ತಿಳಿಸಿದಂತೆ ನಿವೇದಿಸಿಕೊಂಡರು.

ವಿನೇಯಾನಾಂ ಪುಣ್ಯಾದ್ಗುರುರಪಿ ಚ ಸಾಧಾರಣಗತೇ
ಪ್ರಸಿದ್ಧೇ ವೈಶಾಖೇ ಕುಸುಮ ಸಮಯತೌ ಸಿತದಲೇ ।
ಶುಭೇ ಪಂಚಮ್ಯಂಕೇ ಶಿವಗುರುಸುತಾವಿರ್ಭವದಿನೇ*
ಶಿಲಾನ್ಯಾಸಂ ಚಕ್ರೇ ಮಠನಿಲಯನಿರ್ಮಾಪಣಭುವಿ ॥ ೭೪

ಶ್ರೀಗುರುಗಳು ಶಾಲಿವಾಹನಶಕ ೧೮೯೨ನೆಯ ಸಾಧಾರಣನಾಮ ಸಂವತ್ಸರದ ವಸಂತಋತುವಿನ ವೈಶಾಖ ಶುಕ್ಲಪಕ್ಷದ ಶ್ರೀಶಂಕರಾಚಾರ್ಯರ ಜಯಂತ್ಯುತ್ಸವದ ದಿನವಾದ ಪಂಚಮೀ ರವಿವಾರದಂದು ದಿನಾಂಕ (೧೦-೫-೧೯೭೦) ಸಕಲ ಶಿಷ್ಯರ ಪುಣ್ಯಪರಿಪಾಕದಿಂದ ಹೊಸಮಠದ ಕಟ್ಟಡಕಟ್ಟುವ ಭೂಮಿಯಲ್ಲಿ ಗರ್ಭಾಗಾರದ ಮೂಲಶಿಲಾನ್ಯಾಸವನ್ನು ನೆರವೇರಿಸಿದರು. ಅಂದಿನ ಪ್ರವಚನ ಹೀಗಿತ್ತು–

ಮನುಷ್ಯಾಣಾಂ ಧರ್ಮಃ ಪರಮಸುಖಹೇತುಃ ಸ ಚ ಗುರೋಃ
ಸಕಾಶಾಚ್ಛ್ರೋತವ್ಯೋ ನಿಗಮವಚಸಾಂ ಶಾಸನಮಿದಮ್ ।
ನ ಚೋಲ್ಲಂಘ್ಯಂ ಯಸ್ಮಾದತಿಶಯಿತಸಂಪತ್ತಿಸದನಂ
ತತಃ ಶಿಷ್ಯಾ ಯೂಯಂ ಶ್ರಯತ ಗುರುಮಾನಂದಶರಧಿಮ್ ॥

*ಶಿವಗುರುಗಳಪುತ್ರ ಶ್ರೀಮಚ್ಛಂಕರಭಗವತ್ಪಾದರ ಜಯಂತಿಯ ದಿನ

ಮಾನವರಿಗೆ ಪರಮ ಸುಖಕ್ಕೆ ಕಾರಣವಾದುದ್ದು ಧರ್ಮ ಇದು ಪ್ರವೃತ್ತಿ ಧರ್ಮ. ನಿವೃತ್ತಿ ಧರ್ಮ ಎಂದು ಎರಡುವಿದೆ. ಅಭ್ಯುದಯಕ್ಕೆ ಸಾಕ್ಷಾತ್ ಕಾರಣ ವಾದದ್ದು ಪ್ರವೃತ್ತಿಧರ್ಮ. ನಿಃಶ್ರೇಯಸವೆಂದರೆ ಮೋಕ್ಷ ಸ್ವಸ್ವರೂಪಾವಬೋಧ. ನಿಃಶ್ರೇಯಸಕ್ಕೆ ಕಾರಣವಾದುದ್ದು ನಿವೃತ್ತಿಧರ್ಮ. ಆ ಧರ್ಮವು ಬ್ರಾಹ್ಮಣನೇ ಮುಂತಾದ ವರ್ಣಗಳಿಂದಲೂ ಬ್ರಹ್ಮಚರ್ಯ ಮುಂತಾದ ಆಶ್ರಮಗಳಿಂದಲೂ ಅನುಷ್ಠಾನಮಾಡಲು ಅರ್ಹವಾದದ್ದು. ಶ್ರುತ್ಯುಕ್ತಧರ್ಮವು ಆಚಾರ್ಯರಿಂದ ಉಪದೇಶಿಸಲ್ಪಡಬೇಕು. "ಧರ್ಮೋ ಮೂಲಂ ಮನುಷ್ಯಾಣಾಂ ಸ ಚಾಚಾರ್ಯಾವಲಂಬನಃ" ಎಂದು ಶ್ರೀಶಂಕರಾಚಾರ್ಯರು ಮಠಾಮ್ನಾಯದಲ್ಲಿ ಹೇಳಿದ್ದಾರೆ ಈ ಧರ್ಮ, ಶ್ರುತಿ,ಸ್ಮೃತಿಗಳಿಂದ ಪ್ರತಿಪಾದ್ಯವಾಗಿದೆ, ಆಚಾರ್ಯರ ಮೂಲಕ ಉಪದೇಶಿಸಲ್ಪಟ್ಟ ಧರ್ಮವು ಅನುಷ್ಠಾನಕ್ಕೆ ಅರ್ಹವಾಗುವುದು. ಆಚಾರ್ಯರ ಮಾತನ್ನು ಮೀರಬಾರದು. ಎಲೈಶಿಷ್ಯರೇ! ಸಕಲದುಃಖನಿವಾರಕವಾದ ತತ್ತ್ವಜ್ಞಾನವು ಆಚಾರ್ಯರ ಕೃಪೆಯಿಂದ ಲಭಿಸುವುದು. ಆದುದರಿಂದ ಅತಿಶಯ ಸಂಪತ್ತಿಗೆ ಆಶ್ರಯನೂ ಆನಂದಜಲಧಿಯೂ ಆದ ಗುರುವನ್ನು ನೀವು ಆಶ್ರಯಿಸಿರಿ

**ಯಥಾಸ್ವಂ ಶಿಷ್ಯಾನ್ಸೌ ಸದಸಿ ನಿಗಮೋಕ್ತಂ ಹಿತವಚಃ**
**ತತಸ್ತಾಮ್ರಂ ಪಟ್ಟಂ* ಶುಭದಮಭಿಮಂತ್ರ್ಯಾಕ್ಷತಯುತಮ್|**
**ಶಿಲಾನ್ಯಾಸಸ್ಥಾನೇ ಸವಿಧಿ ಕೃತಗರ್ತೇ ಸುವಿಹಿತಂ**
**ನಿಚಿಕ್ಷೇಪಾಚಾರ್ಯೋ ನಿಖಿಲಮುನಿರಕ್ಷಾಕವಚಿತಮ್ || ೭೬**

ಹೀಗೆ ಈ ಆಚಾರ್ಯರು ಸಭೆಯಲ್ಲಿ ಶಿಷ್ಯರನ್ನು ಉದ್ದೇಶಿಸಿ ವೇದೋಕ್ತವಾದ ಹಿತವಚನವನ್ನು ಯಥಾರ್ಥವಾಗಿ ಉಪದೇಶಿಸಿದರು. ಬಳಿಕ ತಾಮ್ರದ ತಗಡಿನಲ್ಲಿ ರಕ್ಷಾರ್ಥವಾದ ವಾಕ್ಯಗಳನ್ನು ಬರೆದು ಅಭಿಮಂತ್ರಿಸಿದರು, ಅನಂತರ ಶಿಲಾನ್ಯಾಸಕ್ಕಾಗಿ ಮಾಡಿದ ಗುಳಿಯಲ್ಲಿ ಸಕಲಮುನಿರಕ್ಷಾಕವಚಿತವಾದ ಆ ತಾಮ್ರದ ಯಂತ್ರವನ್ನು ಮಂತ್ರಾಕ್ಷತೆಸಹಿತವಾಗಿ ಚೆನ್ನಾಗಿ ಭದ್ರವಾಗುವಂತೆ ಹಾಕಿದರು.

---

ಪೆರಾಜೆ ಶ್ರೀರಾಮಚಂದ್ರಾಪುರಮಠದ ಹೊಸಕಟ್ಟಡದ ಶಿಲಾನ್ಯಾಸಸಂದರ್ಭದಲ್ಲಿ ಗುರುಗಳು ತಾಮ್ರದ ತಗಡಿನಲ್ಲಿ ಈ ಕೆಳಗಿನ ಶ್ಲೋಕಗಳನ್ನು ಬರೆಯಿಸಿ ಅಭಿಮಂತ್ರಿಸಿ ಸ್ಥಾಪಿಸಿದ್ದಾರೆ ಶ್ಲೋಕಗಳು ಇವು:—

ಕೌಸಲ್ಯಾ ಸುಪ್ರಜಾರಾಮಃ ಸೀತಾಲಕ್ಷ್ಮಣ ಸಂಯುತಃ । ಸೋಮೋ ಹಿ ಚಂದ್ರಮೌಲಿಶ್ಚ ಸದಾ ಸಂತನು ತಾಚ್ಛಿವಮ್ ॥ ವಸಿಷ್ಠೋ ವಾಮದೇವಶ್ಚ ಜಾಬಾಲಿಶ್ಚಾಥ ಗೌತಮಃ । ವ್ಯಾಸಃ ಶುಕೋ ಗೌಡಪಾದೋ ಗೋವಿಂದೋ ಭಗವಾನ್ನೃಷಿಃ ॥ ಶಂಕರೋ ಭಗವತ್ಪಾದಃ ಶಿಷ್ಯಂತ್ವತ್ರ ಮುದಾನ್ವಹಮ್ । ತನ್ವಂತು ಹಿ ತಥಾ ನಿತ್ಯಂ ಸರ್ವೇಷಾಂ॥ ಜಗತಾಂ ಶಿವಮ್ ॥

**ಅಕಾಂಡೇ ಸೌವರ್ಣೀಂ ಕಿರತಿ ಕಿಮು ವೃಷ್ಟಿಂ ಸುರಪತಿಃ**
**ಕುಬೇರೋ ವಾ ಕೋಶಾದ್ವಿಸೃಜತಿ ಧನಂ ಕಿನ್ನು ವಿಪುಲಮ್ ।**
**ತದಾನೀಂ ದಾತೃಣಾಮಪರಿಮಿತ ಭಕ್ತಿಪ್ರವಹಣಾ**
**ಪ್ರಸನ್ನಾಽಭೂಲ್ಲಕ್ಷ್ಮೀರ್ನವನಿಲಯನಿರ್ಮಾಪಣಚಣಾ ॥** ೭೭

ಆಗ, ಅಕಾಲದಲ್ಲಿ ಇಂದ್ರನು ಬಂಗಾರದ ಮಳೆಗೆರೆದಿರುವನೋ? ಅಥವಾ ಕುಬೇರನು ತನ್ನ ವಿತ್ತಕೋಶದಿಂದ ಹೆಚ್ಚಾದ ಹಣವನ್ನು ಬಿಡುಗಡೆಮಾಡಿದನೋ ಎಂಬಂತೆ ಹೊಸಮಠದ ಕಟ್ಟಡದ ನಿಧಿಗಾಗಿ ದಾನಿಗಳ ಅಪರಿಮಿತವಾದ ಔದಾರ್ಯ ಮತ್ತು ಭಕ್ತಿಯ ರಥವೇರಿದ ಲಕ್ಷ್ಮೀದೇವಿಯು ಹೊಸಕಟ್ಟಡವನ್ನು ಕಟ್ಟಲು ಸಮರ್ಥಳಾಗಿ ಪ್ರಸನ್ನಳಾದಳು,

**ಮನೋಜ್ಞಂ ಪ್ರಾಸಾದಂ ಬುಧಜನಚಿರಾಕಾಂಕ್ಷಿತಪದಂ**
**ಮಹಾಂತಂ ಸದ್ಧರ್ಮಾಚರಣ ಪರಿಣಾಹಂ ಸುವಿಹಿತಮ್ ।**
**ಸಮಾಜಃ ಶಿಷ್ಯಾಣಾಂ ಪರಮಪುರುಷಪ್ರೀತಯೆ ಇಮಂ**
**ನ್ಯಧತ್ತಾರ್ಯಸ್ಯಾಸ್ಯ ಪ್ರಣಯಭರಚಿತ್ತೇನ ಪದಯೋಃ ॥** ೭೮

ಬಳಿಕ ಮಂಗಳೂರು ಪ್ರಾಂತ್ಯದ ಆ ಶಿಷ್ಯಮಂಡಲಿಯು ಅಲ್ಲಿಯ ವಿದ್ವಾಂಸರ ಬಹುಕಾಲದ ಅಪೇಕ್ಷೆಯಾಗಿದ್ದ ಸುಂದರವೂ ವಿಶಾಲವೂ ಸತ್ಕರ್ಮಾನುಷ್ಠಾನಗಳನ್ನು ನಡೆಸಲು ಅನುಕೂಲವೂ ಸೊಗಸಾದ ಕಟ್ಟಾಣಿಕೆಯುಳ್ಳದ್ದೂ ಆದ ಸೌಧವನ್ನು ಕಟ್ಟಿಸಿತು. ಬಳಿಕ ಆ ಮಂಡಳಿಯು ಭಕ್ತಿಭಾವಭರಿತವಾದ ಮನಸ್ಸಿನಿಂದ ಶ್ರೀಮನ್ನಾರಾಯಣನ ಪ್ರೀತಿಗಾಗಿ ಶ್ರೀಮದ್ರಾಘವೇಂದ್ರಭಾರತೀಗುರುಗಳ ಪಾದಗಳಿಗೆ ಆ ಕಟ್ಟಡವನ್ನು ಒಪ್ಪಿಸಿತು. ಅನಂತರ, ಪೆರಾಜೆಯಲ್ಲಿ ಶ್ರೀಮದ್ರಾಮಚಂದ್ರಾಪುರದ ಮಠವೆಂದು ಪ್ರಸಿದ್ಧವಾಗಿ ಈಗ ವಿರಾಜಿಸುತ್ತಿದೆ.*

**ಪುರಾ ಯೇ ಚಾರಾಮಾ ವಿರಲಫಲಪುಷ್ಪ್ಯಾತಪಹತಾಃ**
**ಪರಿಕ್ಷೀಣಾ ರುಗ್ಣಾ ಇವ ವಿಗತಸಾರಾಃ ಸಮಭವನ್ ।**
**ವಿಭಾಂತ್ಯದ್ಯ ಚ್ಛಾಯಾವಿಟಪಿಶತಶಾಖಾ ಕವಚಿತಾ**
**ಅಸೂರ್ಯಂಪಶ್ಯಾಸ್ತೇ ನೃಪತಿಕುಲದಾರಾ ಇವ ಕೃತಾಃ ॥**

ಈಗಿನ ಗುರುಗಳು ಮಠೀಯವಹಿವಾಟನ್ನು ವಹಿಸಿಕೊಳ್ಳುವುದಕ್ಕಿಂತ ಹಿಂದೆ ಮಠದ ಅಡಿಕೆತೋಟಗಳು ಕೃಷಿಯಿಲ್ಲದೇ ಹಾಳಾಗಿದ್ದುವು. ಇಲ್ಲಿ ಅತ್ಯಂತ ಕಡಿಮೆ ಬೆಳೆಯಾಗುತ್ತಿತ್ತು. ಬಿಸಿಲಿನ ತಾಪಕ್ಕೆ ಮರಗಳು ಕರುಕಲು ಆಗಿದ್ದವು. ಇವು ರೋಗಿಷ್ಠರಂತೆ ಬಲಹೀನವಾಗಿದ್ದುವು. ಸಾಕಷ್ಟು ಸಾರವಿಲ್ಲದೆ ಭೂಮಿಬರಡಾಗಿತ್ತು. ಈಗ ಶ್ರೀರಾಘವೇಂದ್ರಭಾರತೀಗಳ ವಿಶೇಷಕೃಪೆಯಿಂದ ಇವುಗಳಿಗೆ ವಿಶೇಷ

*ಅನುಬಂಧವನ್ನು ನೋಡಿ.

ಕೃಷಿ ನಡೆಯಿತು. ಈಗ ಇಲ್ಲಿರುವ ಅಡಿಕೆಮರಗಳು ಹಚ್ಚಹಸುರಾಗಿ ಬೆಳೆದಿವೆ ಮತ್ತು ಸುಳಿಯೊಡೆದು ಕೊಂತ ಚೆನ್ನಾಗಿ ಚಿಗುರಿದೆ. ತೋಟದ ತುಂಬಾ ಪ್ರಚ್ಛಾಯೆ ಆವರಿಸಿದೆ. ಶಾಖೋಪಶಾಖೆಗಳಿಂದ ತೋಟ ಮುಚ್ಚಿಹೋಗಿದೆ ಹೀಗಿರುವ ಆ ಅಡಿಕೆ ತೋಟಗಳು ಅರಮನೆಯ ಅಂತಃಪುರವಾಸಿಗಳಾದ ಮಹಾರಾಣಿಯರಂತೆ ಸೂರ್ಯದರ್ಶನ ಶೂನ್ಯಗಳಾಗಿವೆ.

**ಯದಾ ಪೀಠಾರೋಹಃ ಸಮಭವದಿದಾನೀಂತನಗುರೋಃ**
**ಕುಸೂಲಾದ್ಯಂ ವ್ರೀಹ್ಯಾದಿಭಿರಪರಿಪೂರ್ಣಂ ಕಿಲ ಮಠೇ ।**
**ದುದೋಹಾಚಾರ್ಯೋ ಗಾಂ ತದನು ಬಹುಧಾನ್ಯಾನಿ ಚ ಯತೋ**
**ಮಠೋಽದ್ಯಾಗಂತ್ಯೂನಾಂ ಶಮಯತಿ ಬುಭುಕ್ಷಾಂ ಪ್ರತಿದಿನಮ್॥**

ಈಗಿನ ಗುರುಗಳು ಪೀಠಕ್ಕೆ ಬಂದ ಸಮಯದಲ್ಲಿ ಮಠದ ಗದ್ದೆಗಳು ಕೃಷಿ ಕಡಿಮೆಯಾದ ಪ್ರಯುಕ್ತ ಹೆಚ್ಚಿನ ಬೆಳೆ ಬೆಳೆಯಲು ಅಸಮರ್ಥವಾಗಿದ್ದುವು. ಆ ಗದ್ದೆಗಳಲ್ಲಿ ಬೆಳೆದ ಬತ್ತದ ಬೆಳೆಯಿಂದ ಮಠದ ಕಣಜ ಪಣತ ಮುಂತಾದುವುಗಳು ತುಂಬುತ್ತಿರಲಿಲ್ಲ ಆದರೆ ಈಗ ಶ್ರೀಗುರುಗಳು ತಮ್ಮ ಅಧ್ಯಾತ್ಮತಪಸ್ಸಿನಿಂದ ಗೋವನ್ನು ಕರೆದರು. ಭೂಮಿಯನ್ನು ಕರೆದರು. ಬಳಿಕ ಅಪರಿಮಿತವಾದ ಧಾನ್ಯಗಳು ಒದಗಿದುವು. ಏಕೆಂದರೆ, ಈಗ ಮಠವು ಪ್ರತಿದಿನವೂ ಅಧಿತಿಅಭ್ಯಾಗತರ ಹಸಿವನ್ನು ಹೋಗಲಾಡಿಸುತ್ತಿದೆಯಲ್ಲವೇ!

**ಯದಲ್ಪೇ ಕಾಲೇಽಸ್ಮಿನ್ ಪ್ರಕೃತಿರಮಣೀಯಃ ಫಲಭರೋ**
**ಮಹಾನ್ ಪೂಗಾರಾಮೋ ವಿವಿಧಫಲಬೀಜಾಹಿತಗುಣಃ ।**
**ಯತೋಽಕಾರಿ ಸ್ವಾಮಿನ್! ಜನಹಿತಕೃತಾ ತತ್ರ ಭವತಾ**
**ಶ್ರಿಯಂ ದೃಷ್ಟ್ವಾ ಚಾಸ್ಯ ಹ್ನಿಯತ ಇವ ವಾಟೀ ಮಘವತಃ ॥**

ಓ ಸ್ವಾಮಿಗಳೇ! ಶಿಷ್ಯಜನಹಿತಕಾರಿಗಳಾದ ತಾವು ಪೀಠಕ್ಕೆ ಬಂದ ಕೊಂಚ ವರ್ಷಗಳಲ್ಲಿಯೇ ಮಠದ ಅಡಿಕೆ ತೋಟಗಳು ಚೆನ್ನಾಗಿ ಆದವು. ಬೇರೆ ಬೇರೆ ಸೀಮೆಯ ವಿವಿಧ ಮಾದರಿಯ ಗೋಟುಗಳಿಂದ ಸಸಿ ತಯಾರಿಸಿ ಅವುಗಳನ್ನು ತೋಟದಲ್ಲಿ ಹಾಕಿಸಿದುದರಿಂದ ಈಗ ಇಲ್ಲಿ ಎಲ್ಲಾ ಸೀಮೆಯ ಮಾದರಿಯ ಅಡಿಕೆ ಬೆಳೆಯನ್ನು ಕಾಣಬಹುದು ಈ ದೊಡ್ಡ ಅಡಿಕೆತೋಟವು ಪ್ರಕೃತಿರಮ್ಯವೂ ಫಲಭರಿತವೂ ವಿವಿಧ ಬೀಜಗಳಿಗೆ ಅನುಗುಣವಾದ ಉತ್ತಮವಾದ ವಿವಿಧ ಮಾದರಿಯ ಫಲವುಳ್ಳದ್ದೂ ಆಗಿದೆ ಹೀಗೆ ಪ್ರಕೃತಿಸುಂದರವಾದ ಈ ಅಡಿಕೆತೋಟದ ಸಿರಿಯನ್ನು ಕಂಡು ಇಂದ್ರನ ನಂದನವನವು ಸ್ಪರ್ಧಿಸುವುದೋ ಏನೋ?

ಸಮೀಪೇ ತೀರ್ಥಳ್ಯಾ ಅಹಹ! ಹುಲಿಮುಂಡೇ ಪರಿಸರೇ
ಭವಾನ್ ದಿವ್ಯಂ ನವ್ಯಂ ಕ್ರಮುಕವನಮಾರೋಪ್ಯ ಜಯತಿ ।
ಯದಾರಂಭೇ ಪ್ರಾಪ್ತಃ ಕಟುತರವಿರೋಧೋಽಪ್ಯಸುಹೃದಾಂ
ವಿನಷ್ಟೋ ಜ್ವಾಲಾಯಾಂ ಪ್ರಭವತಿ ಪತಂಗಸ್ಯ ನ ಬಲಮ್ ॥

ಗುರುಗಳೇ! ತಾವು ತೀರ್ಥಳ್ಳಿ ಹತ್ತಿರವಿರುವ ಹುಲಿಮುಂಡೇ ಗ್ರಾಮದ ಗುಡ್ಡದ ಹತ್ತಿರ ಮನೋಹರವಾದ ಹೊಸಅಡಿಕೆತೋಟವನ್ನು ಹಾಕಿಸಿ ಕೀರ್ತಿಶಾಲಿಗಳಾಗಿ ಶೋಭಿಸುತ್ತಿದ್ದೀರಿ. ಇಲ್ಲಿ ಉತ್ತಮವಾದ ಸ್ರೋತಸ್ಸು. ಅಬ್ಬಿ. ಹೊಂಡ ಮುಂತಾದ ನೀರಿನ ಸೌಕರ್ಯ, ಸೊಪ್ಪಿನಬೆಟ್ಟ ಮುಂತಾದ ಸನ್ನಿವೇಶಗಳು ಕ್ರಮುಕ ಕ್ಷೇತ್ರ ನಿರ್ಮಾಣಕ್ಕೆ ಅನುಕೂಲವಾಗಿದ್ದುದನ್ನು ಪರ್ಯಾಲೋಚಿಸಿದ ತಾವು ಈ ಜಮೀನಿನ ಅಭಿವೃದ್ಧಿಯ ಬಗ್ಗೆ ತೊಡಗಿದಿರಿ. ಆಗ ಕೆಲವು ಪಿಶುನರ ಅತ್ಯಂತ ಕಹಿಯಾದ ವಿರೋಧವು ತಲೆಯೆತ್ತಲು ಅನುವಾದರೂ ಅದು ತಮ್ಮ ಎದುರಿಗೆ ಕರಗಿ ಹೋಯಿತು. ಮಿನುಂಬುಳದ (ಮಿಂಚುಹುಳ) ಬಲ ಬೆಂಕಿಯ ಉರಿಯ ಎದುರು ನಡೆದೀತೇ!

ಬಹೋಃ ಕಾಲಾದ್ವ್ಯಾಘ್ರಪ್ರಚುರಮತಿಘೋರಂ ಸುವಿಪಿನಂ
ಬಭೂವಾನ್ವರ್ಥಂ ತತ್ಸಪದಿ ಹುಲಿಮುಂಡೇ ಇತಿ ಮತಮ್ ।
ತದದ್ಯೈಲಾರಂಭಾಕ್ರಮುಕನರತಾಂಬೂಲಲತಿಕಾ-
ಪ್ರತಾನೈರತ್ಯಂತಂ ರಸಿಕಜನಮಾಹ್ಲಾದಯತಿ ಚ ॥ ೮೩

ಯಾವ ಸ್ಥಳದಲ್ಲಿ ಬಹುಕಾಲದಿಂದಲೂ ಹುಲಿಗಳೇ ಹೆಚ್ಚಾಗಿ ವಾಸಿಸುತ್ತಿದ್ದುದರಿಂದ ಅದು ಅತ್ಯಂತ ಭಯಂಕರವಾದ ಅರಣ್ಯಪ್ರದೇಶವಾಗಿ "ಹುಲಿಮುಂಡೇ" (ಹುಲಿಗಳ ತಲೆಯೇ ಹೆಚ್ಚಾಗಿ ಕಾಣಲು ಸಿಗುವಸ್ಥಳವಾದುದರಿಂದ) ಎಂಬ ಅನ್ವರ್ಥ ನಾಮವನ್ನು ಹೊಂದಿದ್ದಿತೋ ಆ ಹುಲಿಮುಂಡೇಸ್ಥಳವಿಂದು ಏಲಕ್ಕಿ, ಬಾಳೆ, ಅಡಿಕೆ ಒಳ್ಳೆಯ ವೀಳ್ಯದೆಲೆಯ ಬಳ್ಳಿಗಳ ಗುಂಪುಗಳಿಂದ ಒಳ್ಳೆಯ ತೋಟವಾಗಿ ಪರಿಣಮಿಸಿ ರಸಿಕಜನತೆಯನ್ನು ಸಂತೋಷಪಡಿಸುತ್ತಿದೆ

ಅಸಾಮಾನ್ಯಾ ಧೀಸ್ತೇ ಪ್ರತಿನಿಯತಲೋಕವ್ಯವಹೃತೌ
ಕ್ಷಣಾದೇವಾಕೂತಂ ಕಲಯತಿ ಹೃದಿಸ್ಥಂ ಕಿಲ ನೃಣಾಮ್ ।
ತವಾದೇಶಂ ಲಬ್ಧ್ವಾ ನೃಪತಿನಯವಿಜ್ಞಾಃ ಕೃತಧಿಯಃ
ಸ್ವಕಾರ್ಯೇ ಸಂಸಿದ್ಧಿಂ ಸ್ವಜನಬಹುಮಾನಂ ಚ ದಧತಿ ॥ ೮೪

ಪ್ರತಿದಿನವೂ ಅಪರಿಹಾರ್ಯವಾದ ಲೌಕಿಕ ವ್ಯವಹಾರದಲ್ಲಿ ತಮ್ಮ ಧೀಶಕ್ತಿಯು ಅಸಾಧಾರಣವಾದದ್ದು. ಅದು ಚಣಕಾಲದಲ್ಲಿ ಇತರ ಜನರ ಇಂಗಿತವನ್ನು ತಿಳಿಯಬಲ್ಲದು. ರಾಜನೀತಿವಿಶಾರದ ವಿದ್ಯಾವಂತಪ್ರಮುಖರು ತಮ್ಮ ಸಂಗಡ ಸಮಾಲೋಚನೆ ನಡೆಸಿ, ತಮ್ಮ ಆದೇಶವನ್ನು ಪಡೆದು, ಅವರು ತಮ್ಮ ಕಾರ್ಯದಲ್ಲಿ ಸಿದ್ಧಿ ಪಡೆಯುವರು ಮತ್ತು ತಮ್ಮ ಅನುಯಾಯಿಗಳ ಗೌರವವನ್ನು ಸಂಪಾದಿಸುವರು.

ದ್ವಿಜಃ ಕೋಽಪಿ ಶ್ರೀಮಾನ್ ವಸತಿ ಕಿಲ ಕಲ್ಯಾಣನಗರೇ
ಕುಲೀನಃ ಕೃಷ್ಣಾಖ್ಯೋ ವಿಬುಧಕುಲಮಾನ್ಯೋ ಗೃಹಪತಿಃ ।
ಸ ಚೈತತ್ಪೀಠಸ್ಥೇಷ್ವಪಿ ಗುರುಷು ಭಕ್ತೋಽತಿ ಸರಲಃ
ಕದಾಚಿಚ್ಚಾರ್ತಸ್ಸನ್ ಗುರುಚರಣಮೂಲಂ ಹ್ಯಭಜತ ॥ ೮೫

ಬೆಂಗಳೂರಿನಲ್ಲಿ ಮಂಗಳೂರು ಪ್ರಾಂತದ ಹಳ್ಳಿಯಲ್ಲಿ ಜನಿಸಿದ ಹವ್ಯಕ ಬಂಧುಗಳಾದ ಬಿ. ಕೃಷ್ಣಭಟ್ಟರೆಂಬ ಸಭ್ಯಗೃಹಸ್ಥರು ವಾಸಿಸುತ್ತಿರುವರಷ್ಟೆ. ಸದ್ವಂಶದಲ್ಲಿ ಹುಟ್ಟಿದ ಅವರು ವಿದ್ಯಾವಂತರ ಶ್ರೇಣಿಯಲ್ಲಿ ಮಾನ್ಯರಾಗಿದ್ದಾರೆ. ವಿಶ್ವಭಾರತೀ ಗೃಹ ನಿರ್ಮಾಣ ಸಂಸ್ಥೆಯ ವ್ಯವಸ್ಥಾಪಕರಾದ ಅವರು ಗುರುಗಳ ವಿಷಯದಲ್ಲಿ ಅತ್ಯಂತ ಶ್ರದ್ಧಾಭಕ್ತಿಯುಳ್ಳವರು. ಪ್ರಕೃತಿ ಸರಳರಾದ ಶ್ರೀ ಕೃಷ್ಣಭಟ್ಟರು ಒಮ್ಮೆ ಯಾವುದೋ ಒಂದು ಕಷ್ಟಕ್ಕೆ ಗುರಿಯಾದರು. ಕೂಡಲೇ ಅವರು ಶ್ರೀಗುರುಗಳ ಸನ್ನಿಧಿಗೆ ಬಂದರು.

ಬೆಂಗಳೂರುಪುರೇ ಸೋಽಯಂ ಕೃಷ್ಣಭಟ್ಟಾಹ್ವಯಃ ಸುಧೀಃ ।
ಗೃಹನಿರ್ಮಾಣಸಂಸ್ಥಾಯಾ ವ್ಯವಸ್ಥಾಪಕಸತ್ತಮಃ ॥ ೮೬

ಧೀಮಂತರಾದ ಶ್ರೀಮಾನ್ ಕೃಷ್ಣ ಭಟ್ಟರು ಬೆಂಗಳೂರಿನ ಗಿರಿನಗರ ಬಡಾವಣೆಯಲ್ಲಿ "ವಿಶ್ವಭಾರತೀ ಹೌಸಿಂಗ್ ಕಾಂಪ್ಲೆಕ್ಸ್" ಎಂಬ ಗೃಹ ನಿರ್ಮಾಣ ಸಂಸ್ಥೆಯನ್ನು ರೂಪಿಸಿ ಆ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರಾಗಿದ್ದಾರೆ.

ವಿದಿತ್ವಾರ್ಯಸ್ಯಾಸ್ಯ ಪ್ರಥಿತಮಹಿಮಾನಂ ಯತಿಪತೇ–
ರ್ಗೃಹೀ ಕೃಷ್ಣೋಭಟ್ಟಃ ಪತಿತ ಇವ ಗಾಢಾಂಧತಮಸೇ ।
ಪ್ರಗಾಢೇ ಸಂಕಷ್ಟೇ ನೃಪತಿನಯತಂತ್ರೇಷು ಕುಶಲೋ
ವಿಪದ್ಭ್ಯಃ ಸಂತಾರಂ ಗುರುಚರಣಸಂಗಾದಮನುತ ॥ ೮೭

ಶ್ರೀ ಕೃಷ್ಣಭಟ್ಟರು ಪ್ರಗಾಢವಾದ ಕಷ್ಟದಲ್ಲಿ ಸಿಕ್ಕಿದ ತಮ್ಮನ್ನು ದಟ್ಟವಾದ ಕತ್ತಲೆಯಲ್ಲಿ ಬಿದ್ದಂತೆ ಭಾವಿಸಿದ್ದರು. ಅವರು ಈ ಯತೀಶ್ವರರಾದ ಗುರುಗಳ ಪ್ರಸಿದ್ಧ ಮಹಿಮೆಯನ್ನು ತಿಳಿದು ಮರಕ್ಕೆ ಬಂದರು. ರಾಜಕೀಯನೀತಿಕುಶಲರೂ ವಿಶ್ವಭಾರತೀ ಗೃಹನಿರ್ಮಾಣಸಂಕೀರ್ಣದ ವ್ಯವಸ್ಥಾಪಕರೂ ಗೃಹಸ್ಥರೂ ಆದ ಶ್ರೀ ಕೃಷ್ಣಭಟ್ಟರು ಆಪತ್ತುಗಳಿಂದ ತಮ್ಮ ಬಿಡುಗಡೆಯು ಶ್ರೀ ಗುರುಗಳ ಚರಣ ಸಂಗದಿಂದ ಆಗುವುದೆಂದು ನಿಶ್ಚಯಿಸಿದರು.

**ಸ ಚಾಚಾರ್ಯಂ ಹ್ಯೇನಂ ಪ್ರಣಯಭರಚಿತ್ತೇನ ಪದಯೋಃ**
**ಪ್ರಣಮ್ಯಾರ್ತತ್ರಾಣಂ ಶರಣಮುಪಯಾತಃ ಸದಯಿತಃ ।**
**ತತಃ ಸ್ವಾಚಾರ್ಯಸ್ಯಾಶಯಮನುವಿಧಾಯ ಪ್ರಚರತಃ**
**ಕ್ರಮಾದಂತಸ್ಸ್ಫೂರ್ತಿಸ್ತಮಸ ಇವ ತಂ ತಾರಿತವತೀ ॥** ೮೮

ಆ ಕೃಷ್ಣಭಟ್ಟರು ಪತ್ನೀಸಹಿತರಾಗಿ ಬಂದು ಶ್ರೀಗುರುಗಳ ಪಾದಗಳಿಗೆ ಭಕ್ತಿ ಪೂರ್ಣವಾದ ಮನಸ್ಸಿನಿಂದ ವಂದಿಸಿದರು. ಆರ್ತರಕ್ಷಕರಾದ ಈ ಗುರುಗಳನ್ನು ಮೊರೆಹೊಕ್ಕರು ಬಳಿಕ ಶ್ರೀಮದಾಚಾರ್ಯವರ್ಯರ ಆದೇಶವನ್ನು ಅನುಸರಿಸಿ ನಡೆದುಕೊಳ್ಳುತ್ತಿರುವ ಈ ಗೃಹಸ್ಥರ ಅಂತಸ್ಸ್ಫೂರ್ತಿಯು ಕ್ರಮವಾಗಿ ಅವರನ್ನು ಕತ್ತಲೆಯಿಂದ ಪಾರುಮಾಡಿಸಿರಬಹುದೋ ಎಂಬಂತೆ ಆಯಿತು.

**ತತೋ ನಾನಾಕ್ಲೇಶಾಪಗಮನಿಗಮಾಚಾರನಿರತಃ**
**ಸಭಾರ್ಯೋಽಯಂ ಕೃಷ್ಣೋ ನಿಖಿಲನಿಗಮಾಪಾಧಿಕಭಯಾತ್**
**ವಿನಿರ್ಮುಕ್ತಸ್ತುಷ್ಟೋ ಗುರುಚರಣಸಾಂದ್ರಾರ್ದ್ರಕೃಪಯಾ**
**ಸ್ವಕೀಯಂ ಸರ್ವಸ್ವಂ ಗುರುಷು ವಿನಿಯೋಜ್ಯಂ ತ್ವಮನುತ ॥**

ಅನಂತರ ಶ್ರೀಕೃಷ್ಣಭಟ್ಟರು ಕುಟುಂಬಸಹಿತರಾಗಿ ಆಧ್ಯಾತ್ಮಿಕ, ಆಧಿದೈವಿಕ ಆಧಿಭೌತಿಕ, ಎಂಬ ಹಲವು ಕಷ್ಟಗಳ ನಿವಾರಣೆಗಾಗಿ ವೇದೋಕ್ತವಾದ, ಅನುಷ್ಠಾನಗಳನ್ನು ನಡೆಸಿದರು. ಬಳಿಕ ಅವರು ಪೂಜ್ಯರಾದ ಗುರುಗಳ ಕೃಪಾ ವಿಶೇಷದಿಂದ ತಮಗೆ ಆಕಸ್ಮಿಕವಾಗಿ ಉಂಟಾಗಿದ್ದ ಹಾಗೂ ಸಂಸ್ಥೆಗೆ ಒಳಪಟ್ಟ ವ್ಯವಹಾರದ ತೊಡಕಿನಿಂದ ಉಂಟಾದ ಭಯದಿಂದ ಬಿಡುಗಡೆ ಹೊಂದಿದರು. ಅನಂತರ ಪರಮಸಂತುಷ್ಟರಾದ ಅವರು ತಮ್ಮಸರ್ವಸ್ವವೂ ಗುರುಸೇವೆಗೆ ಅರ್ಹವಾದದ್ದೆಂದು ಭಾವಿಸಿದರು

**ಸ ನಿರ್ಮಾಪ್ಯಾಗಾರಂ ನಿಜಭಜಕವಿಖ್ಯಾಚಲಪವೇಃ**
**ಮನೋಽಭೀಷ್ಟಾರ್ಥಾನಾಂ ಸವಿತುರತಿಶೀಘ್ರಂ ಗಣಪತೇಃ ।**
**ಉಮಾಸೂನೋರರ್ಚಾಮುಸಿತಶಿಲಯೋಟ್ಟಂಕಿತತನುಂ**
**ಯಥಾಶಾಸ್ತ್ರಂ ಹ್ಯಸ್ಥಾಪಯದಿಹ ಸಮಕ್ಷಂ ಖಲು ಗುರೋಃ ॥**

ಶ್ರೀಕೃಷ್ಣಭಟ್ಟರು, ತನ್ನ ಭಕ್ತರ ಎಡರುತೊಡರುಗಳೆಂಬ ಬೆಟ್ಟಗಳಿಗೆ ವಜ್ರಾಯುಧವಾಗಿರುವ, ಇಷ್ಟಾರ್ಥಗಳನ್ನು ಪ್ರಸವಿಸುವವನೂ ಆದ ಗಣಪತಿಯ ದೇವಾಲಯವನ್ನು ಅಂದವಾಗಿ ಶೀಘ್ರವಾಗಿ ಕಟ್ಟಿಸಿದರು. ಬಳಿಕ ಕಪ್ಪುಶಿಲೆಯಲ್ಲಿ ಕೆತ್ತಿದ ಶರೀರವುಳ್ಳ ಉಮಾಪುತ್ರನಾದ ವಿನಾಯಕನ ಮೂರ್ತಿಯನ್ನು ಜಗದ್ಗುರು ಶ್ರೀಶಂಕರಾಚಾರ್ಯ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳ ಸನ್ನಿಧಿಯಲ್ಲಿ ಶಾಸ್ತ್ರವಿಧಿಯನ್ನು ಅನುಸರಿಸಿ ಬೆಂಗಳೂರಿನ ಗಿರಿನಗರದಲ್ಲಿ ಪ್ರತಿಷ್ಠೆ ಮಾಡಿಸಿದರು.

ಅಸೌ ತುಷ್ಟಃ ಶ್ರೀಮಾನ್ ಗಿರಿನಗರನಾಮನ್ಯುಪಪುರೇ
ಸ್ವಕೀಯಂ ವಿಸ್ತೀರ್ಣಂ ಖಲು ವಿಪುಲಮೂಲ್ಯಂ ಸುಖಕರಮ್ ।
ನಿವೇಶಂ ಪ್ರಾಸಾದೋಚಿತಮಿಮಮಿದಾನೀಂತನಗುರೋಃ
ಪದಾಬ್ಜಾಭ್ಯಾಂಭಕ್ತ್ಯಾ ಸವಿಧಿ ಸುವಿಭಕ್ತಂ ಕಿಲ ದದೌ ॥ ೯೧

ಗುರುಗಳಮೇಲೆ ವಿಶೇಷಭಕ್ತಿಯುಳ್ಳವರೂ ಉದಾರಿಗಳೂ ಸಂತುಷ್ಟರೂ ಶ್ರೀಮಂತರೂ ಆದ ಕೃಷ್ಣಭಟ್ಟರು ಬೆಂಗಳೂರಿನ ಗಿರಿನಗರದ ಬಡಾವಣೆಯಲ್ಲಿ ಇರುವ ಮಠಾಯತನನಿರ್ಮಾಣಕ್ಕೆ ಅನುಕೂಲವೂ ವಿಸ್ತೀರ್ಣವೂ ಹೆಚ್ಚು ಬೆಲೆಬಾಳುವಂತಹುದೂ ಸುಖಪ್ರದವೂ ಆದ ತಮ್ಮ ನಿವೇಶನವೊಂದನ್ನು ಶ್ರೀರಾಮಚಂದ್ರಾಪುರದ ಮಠದ ಈಗಿನ ಗುರುಗಳ ಅಡಿದಾವರೆಗಳಿಗೆ ಭಕ್ತಿಯಿಂದ ಒಪ್ಪಿಸಿದರು. (ಆ ನಿವೇಶನವನ್ನು ಕಾನೂನಿನ ಪ್ರಕಾರ ಅಳತೆಮಾಡಿಸಿ ಮಠದ ಹೆಸರಿಗೆ ರಿಜಿಸ್ಟರ್ ಮಾಡಿಸಿಕೊಟ್ಟರು.)

ಗುರೋರಾಶೀರ್ವಾದಂ ಪರಮ ಸುಖದಂ ಭಕ್ತಿವಿವಶಃ
ಸ ಲಬ್ಧ್ವಾ ವಿದ್ಯಾಯಾ ಅಭಿನವಮಿಮಂ ಮಂದಿರವರಮ್ ।
ತತೋ ನಿರ್ಮಾಪ್ಯಾದಾದತಿಸುಭಗರೂಪಂ ಭಗವತೋ
ಹರೇಃ ಪ್ರೀತ್ಯೈ ದಾತೃಪ್ರವರ ಇಹ ಕೃಷ್ಣಸ್ತು ಗುರವೇ ॥೯೨

ಬಳಿಕ ಶ್ರೀಕೃಷ್ಣಭಟ್ಟರು ಪರಮಸುಖಪ್ರದವಾದ ಗುರುಗಳ ಆಶೀರ್ವಾದವನ್ನು ಪಡೆದರು. ಭಕ್ತಿವಿವಶರಾದ ಅವರು ಹೊಸವಿದ್ಯಾಮಂದಿರವನ್ನು ಕಟ್ಟಿಸಿದರು ಅತ್ಯಂತ ಸುಂದರವಾದ ಆ ವಿದ್ಯಾಮಂದಿರದ ಕಟ್ಟಡವನ್ನು ದಾನಿಶ್ರೇಷ್ಠರಾದ ಕೃಷ್ಣಭಟ್ಟರು ಭಗವಂತನಾದ ವಿಷ್ಣುವಿನ ಪ್ರೀತಿಗಾಗಿ ಶ್ರೀಗುರುಗಳಿಗೆ ಅರ್ಪಿಸಿದರು.

ಗುರುಂ ಚಾತುರ್ಮಾಸ್ಯೇ ನಿಜನಿಲಯಮಾನಾಯ್ಯ ಸುಗೃಹೀ
ಸಭಾರ್ಯೋ ರಕ್ಷಾಕ್ಷೌ ನಭಸಿ ಪರಿವಾರೈಃ ಪರಿವೃತಮ್ ।
ಉಪಾಸಾಂಚಕ್ರೇಽಸೌ ನಿಜವಿಭವಯೋಗ್ಯೇನ ವಿಧಿನಾ
ಸುಧೀಃ ಕೃಷ್ಣಾಖ್ಯಃ ಶ್ರೀಗುರುಚರಣಸೇವಾಫಲಮಗಾತ್ ॥

ಉತ್ತಮಗೃಹಸ್ಥರೂ ವಿದ್ಯಾವಂತರೂ ಆದ ಶ್ರೀಕೃಷ್ಣಭಟ್ಟರು ರಕ್ತಾಕ್ಷಿ ಸಂವತ್ಸರದ ಆಷಾಢಮಾಸದಲ್ಲಿ ಚಾತುರ್ಮಾಸ್ಯವ್ರತದಕಾಲ ಸಮೀಪಿಸಿದ ಕೂಡಲೆ ಗುರುಗಳಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳನ್ನು ತಮ್ಮ ಮನೆಗೆ ಬರಮಾಡಿ ಕೊಂಡರು. ಚಾತುರ್ಮಾಸ್ಯವ್ರತಮುಗಿಯುವತನಕ ಸಮಸ್ತಮರೀಯ ಪರಿವಾರ ದೊಡನೆ ಶ್ರೀಗುರುಗಳನ್ನು ತಮ್ಮ ಮನೆಯಲ್ಲಿ ಉಳಿಸಿಕೊಂಡರು. ನಿತ್ಯವೂ ಅವರು ಕುಟುಂಬಸಹಿತರಾಗಿ ಗುರುಗಳಿಗೆ ಸ್ನಾನ ಪೂಜೆ,ಧ್ಯಾನ, ಭಿಕ್ಷೆ ಮುಂತಾದ ನಿತ್ಯ ನಡೆಯಬೇಕಾದ ವಿಧಿವಿಧಾನಗಳಿಗೆ ಏರ್ಪಾಡುಮಾಡಿ ಭಕ್ತಿ ಶ್ರದ್ಧೆ ನಿಷ್ಠೆಗಳಿಂದ ಶ್ರೀಗುರುಗಳವರಿಗೆ ಸೇವೆ ಸಲ್ಲಿಸಿದರು ಹೀಗೆ ಅಪಾರ ಪುಣ್ಯ ಲಭ್ಯವಾದ ಚಾತು ರ್ಮಾಸ್ಯದ ಸೇವೆಮಾಡಿ ಗುರುಸೇವೆಯ ಪೂರ್ಣಫಲವನ್ನು ಪಡೆದರು.

**ಅಹೋ! ಸ್ಥಾನೇ ಚೈತತ್ತ್ರಥಮಮಿಹ ಕಲ್ಯಾಣನಗರೇ**
**ಶಿರಃಸ್ಥಾನೇ ಕರ್ಣಾಟಕಸಚಿವತಂತ್ರಾಲಯಯುತೇ ।**
**ಗುರೂಣಾಂ ಸದ್ವಿದ್ಯಾಭವನಮತಿನೂತ್ನಂ ಸ್ಥಿತಮಿದಂ**
**ತನೋತ್ಯಾಚಂದ್ರಾರ್ಕಂ ದಶಮುಖರಿಪೋಃ ಕೀರ್ತಿಮತುಲಾಂ॥**

ಬೆಂಗಳೂರು ಈಗ ಕರ್ಣಾಟಕರಾಜ್ಯದ ರಾಜಧಾನಿ. ಇಲ್ಲಿ ಕರ್ನಾಟಕರಾಜ್ಯದ ಪ್ರಜಾಪ್ರಶಾಸನದ ಸಚಿವಾಲಯವಿದೆ. ಇದು ಎಲ್ಲ ವಿಧವಾದ ವ್ಯವಹಾರಕ್ಕೂ ಮುಖ್ಯಸ್ಥಾನ ಇಂತಹ ಪ್ರಧಾನನಗರದಲ್ಲಿ ರಾಮಚಂದ್ರಾಪುರ ಮಠದ ಕಟ್ಟಡವು ಏರ್ಪಟ್ಟಿದ್ದು ಇದೇ ಮೊದಲು. ಪ್ರಕೃತ, ರಾಮಚಂದ್ರಾಪುರಮಠಕ್ಕೆ ಸೇರಿದ ವಿದ್ಯಾಮಂದಿರವು ನೂತನವಾಗಿ ಇಲ್ಲಿ ಇರುವುದು ಅತ್ಯಂತಸಮಂಜಸ. ಆಹಾ! ಈ ವಿದ್ಯಾಮಂದಿರವು ಶ್ರೀರಾಮಚಂದ್ರಾಪುರಮಠದ ಉಪಾಸ್ಯದೇವತೆಯಾದ ಶ್ರೀರಾಮನ ಕೀರ್ತಿಯನ್ನು ಸೂರ್ಯಚಂದ್ರರಿರುವವರೆಗೂ ಹರಡುವುದೆಂಬುದರಲ್ಲಿ ಸಂದೇಹವಿಲ್ಲ.

**ಸಹೋಮಾಸೇ ಸೌಮ್ಯೇ ಸಪದಿ ಬಹುಲೇ ತುರ್ಯದಿನಸೇ**
**ಶುಭೇ ರಕ್ತಾಕ್ಷ್ಯಬ್ದೇ ಹ್ಯುಷಸಿ ನವವಿದ್ಯಾಗೃಹಮಿದಮ್ ।**
**ಪ್ರವಿಶ್ಯಾನರ್ಚಾರ್ಯೋ ಜನಕತನಯಾಜಾನಿಮನಘಂ**
**ಶಿವಾಂ ಸೋಮಾಪೀಡಂ ಗಣಪತಿಮಜಂ ಭಾಸ್ಕರಮಪಿ ॥ ೯೫**

ಶ್ರೀಶಾಲಿವಾಹನಶಕ ೧೯೦೭ನೆಯ ರಕ್ತಾಕ್ಷಿಸಂವತ್ಸರದ ಮಾರ್ಗಶಿರಮಾಸದ ಬಹುಳ ಚೌತಿಯ ಶುಭತಿಥಿಯಂದು ಬೆಳಿಗ್ಗೆ ಶ್ರೀಮದ್ರಾಘವೇಂದ್ರಭಾರತೀಸ್ವಾಮಿ ಗಳು ಬೆಂಗಳೂರಿನ ಗಿರಿನಗರದ ಬಡಾವಣೆಯಲ್ಲಿ ಹೊಸದಾಗಿ ಕಟ್ಟಿಸಿದ ವಿದ್ಯಾ ಮಂದಿರವನ್ನು ಪ್ರವೇಶಿಸಿದರು. ಬಳಿಕ ಅಲ್ಲಿ ಶ್ರೀರಾಮ,ರವಿ,ಗಣಪತಿ ಅಂಬಿಕಾ, ಶಿವ,ವಿಷ್ಣು ಎಂಬ ಪಂಚಾಯತನ ದೇವತೆಗಳನ್ನು ವಿಧಿವತ್ತಾಗಿ ಅರ್ಚಿಸಿದರು.

(ಮಾಲಿನೀವೃತ್ತಮ್)

ಅಕೃತ ಭಜಕವೃಂದಂ ಸದ್ಗುರೋಃ ಪಾದುಕಾರ್ಚಾಂ
ಗುರುಕುಲಜಲಧೀಂದು ರ್ಭಾರತೀರಾಘವೇಂದ್ರಃ ।
ತದನು ಕೃತಸಪರ್ಯಃ ಸ್ವೀಚಕಾರಾತ್ರ ಭಿಕ್ಷಾ-
ಮಲಭತ ಖಲು ತೃಪ್ತಿಂ ಷಡ್ರಸಾನ್ನೈಶ್ಚ ಲೋಕಃ ॥ ೯೭

ಅಂದು ವಿದ್ಯಾಮಂದಿರದಲ್ಲಿ ನೇರಿದ್ದ ಭಕ್ತವೃಂದವು ಗುರುಗಳ ಪಾದಪೂಜೆಯನ್ನು ಮಾಡಿತು. ಬಳಿಕ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳು ಮಾಧ್ಯಾಹ್ನಸ್ನಾನಮಾಡಿ ಪೂಜಾದಿಗಳನ್ನು ನೆರವೇರಿಸಿದರು. ಅವರು ಈ ಕಟ್ಟಡದಲ್ಲಿಯೇ ಭಿಕ್ಷಾಸ್ವೀಕಾರಮಾಡಿದರು. ಆಸ್ತಿಕಮಹಾಜನರೂ ಷಡ್ರಸೋಪೇತವಾದ ಭೋಜನದಿಂದ ತೃಪ್ತಿಹೊಂದಿದರು.

ಅಥ ಪರಿಷದಿ ವಿದ್ಯಾಮಂದಿರೇ ದೇಶಿಕೇಂದ್ರೋ
ವ್ಯತನುತ ಕಿಲ ಲೋಕಶ್ರೇಯಸೇ ಮಂಗಳಾನಿ ।
ವ್ಯತರದಪಿ ಚ ಬಹ್ವೀಂ ದಕ್ಷಿಣಾಂ ವೈದಿಕೇಭ್ಯೋ
ಮಿಲದಖಿಲಜನೇಭ್ಯೋ ಮಂತ್ರಪೂತಾಕ್ಷತಾಂಶ್ಚ ॥ ೯೭

ಬ್ರಾಹ್ಮಣಸುವಾಸಿನೀಸಂತರ್ಪಣಾಂತವಾದ ವೈದಿಕಾನುಷ್ಠಾನವು ಮುಗಿದ ಬಳಿಕ ಅಪರಾಹ್ಣ ವಿದ್ಯಾಮಂದಿರದಲ್ಲಿ ಸಮಸ್ತ ಆಸ್ತಿಕ ಮಹಾಜನರ ಸಭೆ ಸೇರಿತು ಸಭಾಧ್ಯಕ್ಷರಾದ ಆಚಾರ್ಯವರ್ಯರು ಸನಾತನಧರ್ಮಮಾರ್ಗದಲ್ಲಿ ಶ್ರೀಶಂಕರ ಭಗವತ್ಪಾದರು ದಿಗ್ದರ್ಶನಮಾಡಿದಂತೆ ಎಲ್ಲರೂ ನಡೆದುಕೊಳ್ಳಬೇಕೆಂದೂ ಅದ್ವೈತ ತತ್ತ್ವಾನುಸಂಧಾನದಿಂದ ಎಲ್ಲರ ನಿಃಶ್ರೇಯಸ್ಸು ಸಿದ್ಧಿಸುವುದೆಂದೂ ಪ್ರವಚನಮಾಡಿ ಲೋಕ ಕಲ್ಯಾಣಕ್ಕಾಗಿ ಮಂಗಳಾಶಂಸನ ಮಾಡಿ ಎಲ್ಲರನ್ನೂ ಅನುಗ್ರಹಿಸಿದರು. ಅನಂತರ ಮಠದಲ್ಲಿ ನಡೆದ ವೈದಿಕ ಕರ್ಮಾನುಷ್ಠಾನದಲ್ಲಿ ಪಾಲ್ಗೊಂಡ ವೈದಿಕ ಋತ್ವಿಜರಿಗೆ ಮಂತ್ರಾಕ್ಷತೆ ದಕ್ಷಿಣಾದಿಗಳನ್ನು ಇತ್ತರು. ಅಲ್ಲಿ ಸೇರಿದ ಮಹಾಜನರಿಗೆ ಮಂತ್ರಾಕ್ಷತೆಯಿತ್ತು ಅನುಗ್ರಹಿಸಿದರು. ಅಂದಿನ ಸಭೆ ಮುಗಿಯಿತು.

(ಶಾರ್ದೂಲವಿಕ್ರೀಡಿತವೃತ್ತಮ್)

ಕಲ್ಯಾಣೇ ನಗರೇ ತ್ವಿದಂ ಪ್ರಥಮತಃ ಕಲ್ಯಾಣಹೇತೋಃ ಸತಾಂ
ವಿದ್ಯಾಮಂದಿರಮಾತತಾನ ಗುರುರಾಟ್ ಶ್ರೀರಾಮನಾಮಾಂಕಿತಮ್ ।
ಉತ್ತೀರ್ಣಾರ್ತಿರಮುಷ್ಯಹೇತುರುದಯೋ ಶ್ರೀಕೃಷ್ಣಭಟ್ಟಃ ಸುಧೀಃ
ಕೃತ್ವಾ ಭೂರಿ ಧನಾನಿ ಸದ್ಗುರುಪದೇ ಸತ್ಕೀರ್ತಿಮಾನ್ ರಾಜತೇ ॥

ಶ್ರೀಮದ್ರಾಮಚಂದ್ರಾಪುರದ ಶ್ರೀಮಜ್ಜಗದ್ಗುರುಶಂಕರಾಚಾರ್ಯ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳವರು ಸಮಸ್ತಸಜ್ಜನರ ಕಲ್ಯಾಣಕ್ಕಾಗಿ ಕರ್ನಾಟಕ ರಾಜ್ಯದ ರಾಜಧಾನಿಯಾದ ಬೆಂಗಳೂರಿನ ಗಿರಿನಗರದ ಬಡಾವಣೆಯಲ್ಲಿ ವಿದ್ಯಾಮಂದಿರವನ್ನು ಇದಂಪ್ರಥಮವಾಗಿ ಸ್ಥಾಪಿಸಿದರು ಈ ವಿದ್ಯಾಮಂದಿರದ ನಿರ್ಮಾಣಕ್ಕೆ ಗುರ್ವನುಗ್ರಹದಿಂದ ಕಷ್ಟದಿಂದ ಪಾರಾದ ಸಭ್ಯಗೃಹಸ್ಥರಾದ ಶ್ರೀಕೃಷ್ಣಭಟ್ಟರು ಕಾರಣ. ವಿದ್ಯಾವಂತರೂ ಉದಾರಿಗಳೂ ಆದ ಶ್ರೀ ಬಿ ಕೃಷ್ಣಭಟ್ಟರು ತಮ್ಮ ವಿಶೇಷ ಸಂಪತ್ತನ್ನು ವಿನಿಯೋಗಿಸಿ ಕೀರ್ತಿಶಾಲಿಗಳಾಗಿ ವಿರಾಜಿಸುತ್ತಿದ್ದಾರೆ.

**ಬಾಹ್ಯಾಂತರ್ದ್ವಿಷತಾಂ ದಮೇ ಶ್ರಿತಜನತ್ರಾಣೇ ಶುಭೇಲಕ್ಷಣೇ**
**ಸೀತಾಹರ್ಷವಿವರ್ಧನೇ ದಶಮುಖಪ್ರಾಣಾಪಹಾರೇ ಕ್ರಮಾತ್।**
**ಶತ್ರುಘ್ನೋ ಭರತಶ್ಚ ಲಕ್ಷ್ಮಣಮರುತ್ಸೂನೂ ರಘೂಣಾಂ ಪತಿ-**
**ಶ್ಚೈಕೋಽನೇಕ ಇವ ಪ್ರಭುರ್ವಿಜಯತೇ ನಾರಾಯಣೋಽಯಂ ಶ್ರಿಯಾ ॥ ೯೯**

ಇತಿ ಶ್ರೀಗುರುಕೃಪಾತರಂಗಿಣ್ಯಾಂ
ಪಂಚಮಸ್ತರಂಗಃ

ಸರ್ವಕ್ರಿಯೆಗಳಲ್ಲಿಯೂ ಸಾಮರ್ಥ್ಯಾತಿಶಯವನ್ನು ಹೊಂದಿರುವ ಶ್ರೀಮನ್ನಾರಾಯಣನು ಲಕ್ಷ್ಮೀಸಹಿತನಾಗಿ ಅದ್ವಿತೀಯನಾಗಿದ್ದರೂ ಆತನು ಬಹಿರಂಗ

ಮತ್ತು ಅಂತರಂಗದ ಶತ್ರುಗಳ ನಿಗ್ರಹವಿಷಯದಲ್ಲಿ, ಆಶ್ರಿತಜನರ ರಕ್ಷಣೆಯಲ್ಲಿ ಮಂಗಳ ಪ್ರದವಾದ ಲಕ್ಷಣದಲ್ಲಿ, ಸೀತೆಯ ಹರ್ಷವನ್ನು ವೃದ್ಧಿಗೊಳಿಸುವ ಕಾರ್ಯದಲ್ಲಿ, ರಾವಣನ ಸಂಹಾರದಲ್ಲಿ, ಅನುಕ್ರಮವಾಗಿ ಶತ್ರುಘ್ನ ಭರತ, ಲಕ್ಷ್ಮಣ ಹನುಮಾನ್ ಶ್ರೀರಾಮ ಎಂದು ಅನೇಕರೂಪವನ್ನು ಧರಿಸಿರುವನೋ ಎಂಬಂತೆ ಸರ್ವೋತ್ಕರ್ಷದಿಂದ ಸ್ವಯಂಪೂರ್ಣವಾಗಿ ಪ್ರಕಾಶಿಸುತ್ತಿದ್ದಾನೆ.

ಇಲ್ಲಿಗೆ ಶ್ರೀ ಗುರುಕೃಪಾತರಂಗಿಣಿಯಲ್ಲಿ
ಐದನೆಯ ತರಂಗ

## ಅಥ ಗುರುಕೃಪಾತರಂಗಿಣ್ಯಾಂ
## ಷಷ್ಠಸ್ತರಂಗಃ
### (ಶಾರ್ದೂಲ ವಿಕ್ರೀಡಿವೃತ್ತಮ್)

ಭವ್ಯೋಽಸ್ಮದ್ಭುವಿ ವೇದಮೂಲಸುದೃಢಃ ಶ್ರದ್ಧಾನವೀನಾಂಕುರೋ
ವ್ಯಾಸಂಗೋದ್ಗತಪಲ್ಲವಃ ಶುಭಕರಃ ಪ್ರಾಜ್ಞಪ್ರಕಾಂಡೋ* ಮಹಾನ್ ।
ರಾಜೌದಾರ್ಯಜಲಾವಸೇಕಸುಭಗಃ ಸತ್ಕಾವ್ಯ ಪುಷ್ಪೋತ್ಕರಃ
ಸ್ವಾತ್ಮಾನಂದಫಲೈರ್ಗ್ರಹಿರ್ವಿಜಯತಾಂ ಗೀರ್ವಾಣವಾಣೀ ದ್ರುಮಃ ॥ ೧

ವೇದಗಳ ಬೇರಿನಿಂದ ಗಟ್ಟಿಯಾಗಿರುವ ಶ್ರದ್ಧೆಯ ಹೊಸಮೊಳಕೆ ಯೊಡೆದು ಬೆಳೆದಿರುವ, ಸತತವಾದ. ಅಭ್ಯಾಸದಾಂಗುಡಿಯಿಟ್ಟಿರುವ, ಬಲ್ಲಿದರ ಕಾಂಡವುಳ್ಳ, ರಾಜಕೀಯದ ಉದಾರತೆಯ ನೀರಿನ ಸೇಕದಿಂದ ಚಂದಗಾಣಿಸುವ. ಒಳ್ಳೆಯ ಶಬ್ದಗಳ ಹೂಗೊಂಚಲುಳ್ಳ, ಆತ್ಮಾನಂದದ ಹಣ್ಣು ಬಿಟ್ಟಿರುವ, ಮಂಗಳಕರವೂ ಸುಂದರವೂ ಆದ ದೇವಭಾಷೆಯೆಂಬ ಹೆಮ್ಮರವು ನಮ್ಮ ಭಾರತ ಭೂಮಿಯಲ್ಲಿ ಸರ್ವವಿಧವಾದ ಏಳಿಗೆಹೊಂದಿ ವಿಜೃಂಭಿಸಲಿ.

ಪೂರ್ವೇ ದೇಶಿಕಸತ್ತಮಾಃ ಸುರಗವೀಸಂರಕ್ಷಕಾಃ ಸಾತ್ತ್ವಿಕಾಃ
ಬ್ರಹ್ಮಿಷ್ಠಾಃ ಕಿಲ ರಾಮಚಂದ್ರಪುರಸಂಸ್ಥಾನಾಧಿಪಾ ಯೇಽಭವನ್ ।
ತತ್ಕಾಲೇಽಪಿ ಸತೀ ಬಭೂವ ಪರಿಷತ್ಸದ್ಧರ್ಮವಿದ್ಯಾಪ್ತಯೇ
ಸ್ವಾಧ್ಯಾಯಾಧ್ಯಯನೋಚಿತಾ ಸುವಿಹಿತಾ ಯಾ ವಿಶ್ವನಾಥಾಭಿಧಾ

ಬ್ರಹ್ಮಿಷ್ಠರೂ ಸಾತ್ವಿಕರೂ ಸಂಸ್ಕೃತ ಭಾಷೆಯ ಸಂರಕ್ಷಕರೂ ಶ್ರೀರಾಮ ಚಂದ್ರಾಪುರಮಠದ ಅಧೀಶರೂ ಆದ ಹಿಂದಿನ ಹಿರಿಯ ಗುರುವರ್ಯರು ಯಾರಿದ್ದರೋ ಆ ಸಮಯದಲ್ಲಿ ವೈದಿಕವಿದ್ಯಾಸಂವರ್ಧನೆಗಾಗಿ ಶ್ರೇಷ್ಠವಾದ ವಿಶ್ವನಾಥಧರ್ಮ ವಿದ್ಯಾಪರಿಷತ್ ಎಂಬ ಸಂಸ್ಥೆಯುಂಟಾಯಿತು. ಅಲ್ಲಿ ವೇದವೇದಾಂಗಳ ಅಧ್ಯಯನಕ್ಕೆ ಯೋಗ್ಯವಾದ ವ್ಯವಸ್ಥೆಯಿತ್ತು. (ಈ ಸಂಸ್ಥೆ ಉತ್ತರ ಕರ್ಣಾಟಕದ ಹೊನ್ನಾವರ ತಾಲ್ಲೂಕಿನ ಕೆಕ್ಕಾರು ರಘೂತ್ತಮ ಮಠದಲ್ಲಿ ಇತ್ತು )

*ಪ್ರಕಾಂಡ–ಬೇರಿನಿಂದ ಹಿಡಿದು ಕೊಂಬೆಯ ವರೆಗಿರುವ ಮರದಮೂಲ

**ಕೆಕ್ಕಾರು ಪ್ರಥಿತೇ ಸ್ಥ ಯಶ್ಚ ಶಿವಭಟ್ಟಾಖ್ಯೋ ಮಹಾಶ್ರೋತ್ರಿಯ-**
**ಸ್ತಸ್ಯಾಃ ಕಾರ್ಯನಿರೂಪಕತ್ವಪದಭಾಗಾಸೀಚ್ಚ ಸಂಚಾಲಕಃ ।**
**ತಸ್ಯಾಸನ್ ಸುಧಿಯಾಂ ಮಣೇಶ್ಚ ಬಹವೋ ವಿದ್ಯಾರ್ಥಿನಃ ಶಾಸ್ತ್ರಿಣೋ**
**ವಿಪ್ರಾಃ ಪಂಡಿತಮಂಡಲೀ ಪರಿವೃಢಾ ಮಾನ್ಯಾ ಮಠಾಧೀಶ್ವರೈಃ**

ಕೆಕ್ಕಾರು ಗ್ರಾಮದಲ್ಲಿ ಹಿಂದೆ ಸದಾಚಾರಸಂಪನ್ನರೂ ವೇದವಿದ್ವಾಂಸರೂ ಸಾತ್ವಿಕರೂ ಆದ ಯಾವ ಶಿವಭಟ್ಟರೆಂಬುವರು ಪ್ರಸಿದ್ಧರಾಗಿದ್ದರೋ ಅವರು ಆ ವಿಶ್ವನಾಥಧರ್ಮವಿದ್ಯಾಪರಿಷತ್ತಿಗೆ ಕಾರ್ಯನಿರ್ವಹಿಸುವ ಸಂಚಾಲಕರಾಗಿದ್ದರು. ವಿದ್ವನ್ಮಣಿಗಳಾದ ಆ ಕೆಕ್ಕಾರು ಶಿವಭಟ್ಟರ ಹತ್ತಿರ ಓದಿದ ವಿದ್ಯಾರ್ಥಿಗಳನೇಕರು ಈಗ ಶಾಸ್ತ್ರಿಗಳೂ, ಕರ್ಮಠರೂ ಪಂಡಿತಮಂಡಲದ ಮುಖ್ಯಸ್ಥರೂ ಆಗಿ ಮಠಾಧೀಶ್ವರರ ಮನ್ನಣೆಗೆ ಪಾತ್ರರೂ ಆಗಿರುತ್ತಾರೆ.

**ಪ್ರಾತಃಸ್ಮುತ್ಯಗುಣಾರ್ಣವಸ್ಯ ಶಿವಭಟ್ಟಾಖ್ಯಸ್ಯ ತಸ್ಯಾಗ್ರಣೀಃ**
**ಶಿಷ್ಯೋಽಸೌ ಕಡತೋಕಪಲ್ಯಭಿಜನಃ ಶ್ರೀಶಂಭುಭಟ್ಟಃ ಸುಧೀಃ**
**ಏತಸ್ಯಾಃ ಪರಿಪೋಷಣೇ ಕೃತಮತಿಸ್ಸಂಚಾಲಕತ್ವಂ ತತಃ**
**ಸ್ವೀಕೃತ್ಯಾರ್ಯಕುಲೋಚಿತಾತ್ಮಚರಿತಃ ಸೇವಾಮಕಾರ್ಷೀ-**
**ಚ್ಚಿರಮ್ ॥ ೪**

ಪ್ರಾತಃ ಸ್ಮರಣೀಯರೂ ಸದ್ಗುಣ ಸಾಗರರೂ ಆದ ಆ ಕೆಕ್ಕಾರು ಶಿವಭಟ್ಟರಿಗೆ ವಿದ್ವಾಂಸರಾದ ಕಡತೋಕಾ ಶ್ರೀಶಂಭುಭಟ್ಟರು ಪ್ರಧಾನ ಶಿಷ್ಯರಾಗಿದ್ದರು. ಅವರು ಶಿವಭಟ್ಟರ ಅನಂತರ ಈ ವಿಶ್ವನಾಥಧರ್ಮವಿದ್ಯಾಪರಿಷತ್ತಿನ ಸಂಚಾಲಕರಾಗಿ ಆದರು. ಅವರು ಸದ್ವಂಶೋಚಿತವಾದ ಉತ್ತಮ ನಡದಳಿಕೆಯುಳ್ಳವರಾಗಿದ್ದರು. ಪರಿಷತ್ತಿನ ಅಭಿವೃದ್ಧಿಯಬಗ್ಗೆ ದೃಢಸಂಕಲ್ಪವುಳ್ಳ ಶಂಭುಭಟ್ಟರು ಪರಿಷತ್ತಿನ ಸಂಚಾಲಕರಾಗಿ ಬಹುಕಾಲದ ತನಕ ಸೇವೆ ಸಲ್ಲಿಸಿದರು.

**ವಿದ್ಯಾರಣ್ಯಸವೇದಸಂಸ್ಕೃತಕಲಾಶಾಲಾತ್ಮನಾ ಸಾ ಪುನಃ**
**ಶೈಲೂಷೀವ ತತಾನ ವೇಷಮಪರಂ ಕಾಲೇನ ರೂಪಾಂತರಮ್ ।**
**ಸೈಷಾ ಸಂಪ್ರತಿ ಸರ್ವವೈದಿಕಮನಾಂಸ್ಯಾಹ್ಲಾದಯಂತೀ ಗುರೋಃ**
**ಸರ್ವಾಂಗೀಣಸಮೃದ್ಧಿಮೇತಿ ಕೃಪಯಾ ಶ್ರೀರಾಘವೇಂದ್ರಸ್ಯ ನಃ**

ಕೆಲವು ಸಂವತ್ಸರಗಳು ಕಳೆದ ಬಳಿಕ ಆ ಧರ್ಮವಿದ್ಯಾಪರಿಷತ್ತು ನಟಿಯು ಬೇರೆ ಬೇರೆ ವೇಷವನ್ನು ತಳೆಯುವಂತೆ ವಿದ್ಯಾರಣ್ಯಸವೇದಸಂಸ್ಕೃತಪಾಠಶಾಲಾ ಎಂಬ ರೂಪಾಂತರವನ್ನು ಹೊಂದಿತು. ಈಗ ಆ ಪಾಠಶಾಲೆಯು ಈಗಿನ

ಗುರುಗಳಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳ ಕೃಪೆಯಿಂದ ಸರ್ವವೈದಿಕರ ಮನಸ್ಸಿಗೆ ಸಂತೋಷವನ್ನು ತುಂಬುತ್ತಾ ಎಲ್ಲ ವಿಧವಾದ ಸಮೃದ್ಧಿಯನ್ನು ಹೊಂದಿರುತ್ತದೆ.

ಕೆಕ್ಕಾರೌ ನರಸಿಂಹಭಟ್ಟ ಇತಿ ಸತ್ಕರ್ಮಸ್ವಭಿಜ್ಞೋ ಗೃಹೀ
ತದ್ಗೀರ್ವಾಣಕಲಾಲಯಸ್ಯ ಸುಚಿರಂ ಪ್ರಾಧ್ಯಾಪಕೋऽ
ಭೂತ್ತತಃ ।
ತಸ್ಯೇಂದೋರಿವ ಶುಭ್ರಗೋಸ್ಸುಮನಸೋ ವಿದ್ಯಾವದಾತಶ್ರಿಯ–
ಶ್ಚಾಂತೇವಾಸಿಮುಖಾನಿ ಕೈರವಕುಲಾನೀವ ಪ್ರಸೇದುಃ ಸದಾ ॥

ಕೆಕ್ಕಾರಿನಲ್ಲಿ ಕರ್ಮಠರೂ, ಕರ್ಮಕಾಂಡಪಂಡಿತರೂ ಸಭ್ಯಗೃಹಸ್ಥರೂ ಆದ ನರಸಿಂಹಭಟ್ಟರೆಂಬುವರೊಬ್ಬರು ವಿದ್ಯಾರಣ್ಯಸರ್ವೇದಸಂಸ್ಕೃತಪಾಠಶಾಲೆಯಲ್ಲಿ ಬಹು ಕಾಲ ಪ್ರಾಧ್ಯಾಪಕರಾಗಿದ್ದರು. ಸ್ವರವರ್ಣಾದಿ ಸ್ಖಾಲಿತ್ಯವಿಲ್ಲದ ಸ್ಫುಟವಾದ ಶುದ್ಧವಾದ ಮಂತ್ರಪಾಠ ಪ್ರವಚನವುಳ್ಳ ವಿದ್ಯೆಯಿಂದ ನಿರ್ಮಲವಾದ ಕಾಂತಿಇರುವ ವಿದ್ವಾಂಸರಾದ ಆ ನರಸಿಂಹಭಟ್ಟರಿಂದ ಶುಭ್ರಕಾಂತಿಯ ಚಂದ್ರನಿಂದ ಕನ್ನೈದಿಲೆಗಳ ಗುಂಪುಗಳಂತೆ ಯಾವಾಗಲೂ ವಿದ್ಯಾರ್ಥಿಗಳ ಮುಖಗಳು ಪ್ರಸನ್ನವಾಗಿರುತ್ತಿದ್ದವು.

ಶಾಸ್ತ್ರಜ್ಞಃ ಶ್ರುತಿಪಾರಗಃ ಕುಶಲಧೀಃ ಸಾಧುರ್ಮಹೌದಾರ್ಯವಾನ್
ಪ್ರಾಚಾರ್ಯೋರ್ಗುರುಭಕ್ತಿಮಾನ್ ದ್ವಿಜಮಣಿಃ ಸ್ವಾಚಾರ
ನಿಷ್ಠಃ ಕೃತೀ ।
ವೃದ್ಧಃ ಸದ್ಗುಣಶೇವಧಿಃ ಸ ಸುಮನೋಮಾನ್ಯಸ್ತು ಸಾಮಾಜಿಕೇ–
ಷ್ವಗ್ರಸ್ಥಾನಮವಾಪ ತತ್ರ ನರಸಿಂಹೋऽಯಂ ಸ್ವಯಂಭೂ–
ಪಮಃ ॥ ೭

ಶ್ರೀನರಸಿಂಹಭಟ್ಟರು ಶಾಸ್ತ್ರಜ್ಞರೂ ವೇದಪಾರಂಗತರೂ ಆಗಿದ್ದರು. ಸಜ್ಜನರಾದ ಅವರು ಉದಾರಿಗಳೂ ಹೌದು. ಸೂಕ್ಷ್ಮಬುದ್ಧಿಯ ಅವರು ಪ್ರಾಧ್ಯಾಪಕರೂ ಆಗಿದ್ದರು. ಆ ಬ್ರಾಹ್ಮಣೋತ್ತಮರಿಗೆ ಗುರುಗಳಮೇಲೆ ಅಪಾರ ಭಕ್ತಿ. ಆಚಾರದಲ್ಲಿ ಶ್ರದ್ಧೆಗಳು ಇದ್ದುವು. ಸದ್ಗುಣಗಳಿಗೆ ಆಶ್ರಯರಾದ ಅವರು ವಯೋವೃದ್ಧರೂ ಪಂಡಿತಮಾನ್ಯರೂ ಸಮಾಜದ ನಾಗರಿಕರಲ್ಲಿ ಅಗ್ರಗಣ್ಯರೂ ಆಗಿದ್ದರು. ವೇದಾಧ್ಯಯನ ಸಂಪನ್ನರಾದ ನರಸಿಂಹಭಟ್ಟರು ಪರಮೇಶ್ವರನಂತೆ ವಂದ್ಯರಾಗಿದ್ದರು.

ಏಕಾದ್ಯಕ್ಷ್ಸ್ಪ್ರ ಹಣೀಯವೈದಿಕವಣೀನಧ್ಯಾಪಕಾನ್
ಶ್ರೋತ್ರಿಯಾನ್
ಶಿಷ್ಯಾನ್ ದೇಶಿಕಪುಂಗವೋ ಬುಧಹಿತಃ
ಶ್ರೀರಾಘವೇಂದ್ರೋಯತಿಃ ।
ತತ್ರದ್ಧರ್ಮರಹಸ್ಯಸೂಕ್ಷ್ಮಮತಿಮಾನ್ ಸಂಮಾನಯಿಷ್ಯನ್ ಸಭಾಂ
ಕಾಂಚಿಚ್ಛಾಯಯುಯುಜೇ ರಘೂತ್ತಮಮಠೇ
ಕೆಕ್ಕಾರುಧಾಮ್ನಿ ಸ್ಥಿತೇ ॥ ೮

ವಿದ್ವಾಂಸರ ಹಿತೈಷಿಗಳಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಇಂತಹ ಅತ್ಯಂತ ಬೇಕಾಗಿರುವ ಆಪ್ತ ವೈದಿಕಶ್ರೇಷ್ಠರೂ ಅಧ್ಯಾಪಕರೂ ಶ್ರೋತ್ರಿಯರೂ ಆದ ಶಿಷ್ಯರಿಗೆ ಸಮ್ಮಾನ ಮಾಡಬೇಕೆಂದು ಬಯಸಿದರು. ಆಯಾಧರ್ಮಗಳ ರಹಸ್ಯಗಳ ಸೂಕ್ಷ್ಮತತ್ತ್ವವನ್ನು ಗ್ರಹಿಸುವ ಮೇಧಾವಿಗಳಾದ ಆಚಾರ್ಯರು ವಿದ್ವತ್ಸಂಮಾನಕ್ಕಾಗಿ ಕೆಕ್ಕಾರಿನ ರಘೂತ್ತಮಮಠದಲ್ಲಿ ಆಪ್ತರಾದ ಕೆಲವುಶಿಷ್ಯ ಪ್ರಮುಖರನ್ನು ಸೇರಿಸಿದರು. ಅವರೊಡನೆ ವಿದ್ವತ್ಪರಿಷತ್ತಿನ ಬಗ್ಗೆ ಸಮಾಲೋಚನೆ ನಡೆಸಿದರು.

ಪೂರ್ವೋಕ್ತಸ್ಯ ಕಲಾಲಯಸ್ಯ ಸುಮಹಾನ್
ವಜ್ರೋತ್ಸವಃ ಪ್ರಾಚಲತ್
ಕೆಕ್ಕಾರೌ ಹಿ ರಘೂತ್ತಮಾಂಕಿತಮಠೇ ವರ್ಷೇ
ಪ್ರಮಾದ್ಯಾಹ್ವಯೇ ।
ಸೀತಾಮಂಗಲಧಾಮರಾಮಮಹಿತೇ ಸತ್ಸನ್ನಿಧಾನೇ ಗುರೋ–
ರಾಧ್ಯಕ್ಷ್ಯೇತ್ವಧುನಾತನಸ್ಯ ಯಮಿನಃ ಶ್ರೀರಾಘವೇಂದ್ರಸ್ಯ ನಃ

ಹಿಂದೆ ಹೇಳಿದ ಕೆಕ್ಕಾರಿನ ವಿಶ್ವನಾಥ ಧರ್ಮವಿದ್ಯಾಪರಿಷತ್ತು ಕಾಲಕ್ರಮದಲ್ಲಿ ವಿದ್ಯಾರಣ್ಯಸವೇದ ಸಂಸ್ಕೃತ ಪಾಠಶಾಲೆಯಾಗಿ ಪರಿವರ್ತಿತವಾಯಿತಷ್ಟೆ. ಆ ಸಂಸ್ಕೃತ ಶಾಲೆಯ ವಜ್ರೋತ್ಸವವು ಶಾಲಿವಾಹನಶಕ ೧೮೯೪ನೇ ಪ್ರಮಾದಿ ಸಂವತ್ಸರದಲ್ಲಿ ಕೆಕ್ಕಾರಿನಲ್ಲಿರುವ ರಘೂತ್ತಮ ಮಠದಲ್ಲಿ ಮಹತ್ತರವಾಗಿ ನಡೆಯಿತು ಶ್ರೀ ರಾಘವೇಂದ್ರಭಾರತೀಗಳು ಸಭಾಧ್ಯಕ್ಷಸ್ಥಾನವನ್ನು ಅಲಂಕರಿಸಿದರು. ಸೀತಾಮಂಗಳ ಧಾಮನಾದ ಶ್ರೀರಾಮಚಂದ್ರನ ಸಾನ್ನಿಧ್ಯದಲ್ಲಿ ಪಾಠಶಾಲೆಯ ವಜ್ರೋತ್ಸವದ ಸಭೆ ಕ್ರಿ.ಶ. 1972ನೇ ಮೇ ತಿಂಗಳಿನಲ್ಲಿ ಏರ್ಪಟ್ಟಿತು.

ಅಜಸ್ರೈಃ ಶತಶೋ ಬುಧಾಃ ಸಹೃದಯಾ ದೂರಾದದೂರಾಜ್ಜನಾಃ
ಸಾನಂದಂ ಸುರಭಾರತೀ ಪ್ರಣಯಿನಃ ಸಭ್ಯಾಶ್ಚ ವಿದ್ಯಾರ್ಥಿನಃ
ಆಹೂತಾಃ ಸಪರಿಚ್ಛದಾಃ ಅಧಿಕೃತೋ ಮಾನ್ಯಾಸ್ತಥಾ
ಮಂತ್ರಿಣೋ
ಧರ್ಮಿಷ್ಠಾಶ್ಚ ಮಹೋತ್ಸವೋತ್ಸುಕಧಿಯೋ ನಾರ್ಯಶ್ಚ
ತತ್ಸಂಸದಮ್ ॥ ೨

ಆ ವಜ್ರೋತ್ಸವದ ಸಭೆಗೆ ದೂರದಿಂದಲೂ ಹತ್ತಿರದಿಂದಲೂ ನೂರಾರು ವಿದ್ವಾಂಸರೂ ಸಹೃದಯರೂ ಸಭ್ಯರೂಸಂಸ್ಕೃತಭಾಷೆಯ ಮೇಲಣ ಪ್ರೀತಿಯಿರುವವರೂ ವಿದ್ಯಾರ್ಥಿಗಳೂ ಬಂದಿದ್ದರು ಮತ್ತು ಆಹ್ವಾನಿತರಾದ ಪರಿವಾರಸಹಿತರಾದ ಅಧಿಕಾರಿಗಳೂ. ಅಂದಿನ ಕರ್ನಾಟಕರಾಜ್ಯದ ಮಂತ್ರಿವರ್ಯರೂ, ಧರ್ಮಿಷ್ಠರೂ ಮಹೋತ್ಸವವನ್ನು ನೋಡಲು ಕೌತೂಹಲವಿರುವ ಸ್ತ್ರೀಯರೂ ಬಂದು ಸೇರಿದ್ದರು

ತಸ್ಮಿನ್ ಸ್ವಾಗತಿಕೈರ್ಭಟೈರಭಿನುತಃ ಸೌವಸ್ತಿಕೈರ್ವೈದಿಕೈಃ
ಸಾಕಂ ಸಂಸದಮೇತ್ಯ ತತ್ರ ಯತಿರಾಡಧ್ಯಾಸ್ಯ ಭವ್ಯಾಂ
ಬೃಸೀಮ್ ।
ಸ್ವೀಕೃತ್ಯಾಖಿಲ ಪಾರಿಷದ್ಯ ವಿಹಿತಾಚಾರಾಭಿವಾದಾನಹೋ
ಯೋಗೀಶಃ ಶುಶುಭೇ ಬೃಹಸ್ಪತಿರಿವ ಪ್ರದ್ಯೋತಿವಜ್ರೋತ್ಸವೇ

ಅಂದಿನ ಮನೋಹರವಾದ ವಜ್ರೋತ್ಸವದಲ್ಲಿ ಶ್ರೀಮದ್ರಾಘವೇಂದ್ರ ಭಾರತೀಸ್ವಾಮಿಗಳು ಸಭೆಗೆ ದಯಮಾಡಿಸಿದರು, ಆಗ ಸ್ವಾಗತವನ್ನು ಕೋರುವ ಪರಿವಾರ ವರ್ಗದವರು ಪ್ರಣಾಮ ಮಾಡಿದರು. ವೇದ ಶಾಸ್ತ್ರಪಾರಂಗತರಾದ ವೈದಿಕರು ಸ್ವಸ್ತಿವಾಚನ ಮಂತ್ರಗಳನ್ನು ಪಠಿಸುತ್ತಾ ಸ್ವಾಮಿಗಳನ್ನು ಹಿಂಬಾಲಿಸಿದರು. ಮಾವಿನ ತಳಿರುತೋರಣಗಳಿಂದ ಅಲಂಕೃತವಾದ ಸಭೆಯಲ್ಲಿ ಭವ್ಯವಾದ ಪೀಠವನ್ನು ಇರಿಸಲಾಗಿತ್ತು. ಯತೀಶ್ವರರಾದ ಗುರುಗಳು ಕೃಷ್ಣಾಜಿನಹೊದಿಸಿದ ಪೀಠದ ಮೇಲೆ ಆಸೀನರಾದ ಮೇಲೆ ಸಮಸ್ತ ಸಭಾಸದರೂ ಸಾಂಪ್ರದಾಯಿಕವಾಗಿ ಫಲವಿಟ್ಟು ಗುರುಗಳಿಗೆ ವಂದಿಸಿದರು, ಶಿಷ್ಯರೊಡನೆ ಆ ಸಭೆಯಲ್ಲಿರುತ್ತಿದ್ದ ಯೋಗೀಶರಾದ ಸ್ವಾಮಿಗಳು ಬೃಹಸ್ಪತ್ಯಾಚಾರ್ಯರಂತೆ ಶೋಭಿಸಿದರು.

ಶಾಲಾಯಾ ಇತಿವೃತ್ತಮುಕ್ತಮಖಿಲಂ ಶ್ರುತ್ವಾ ಪ್ರಸನ್ನಸ್ತತಃ
ಪ್ರಾದಾತ್ಸ್ವಧುನಿವೇಶನಂ ಸುರಗವೀಶಾಲಾಲಯಾರ್ಥಂ ಗುರುಃ।
ಗೈರ್ವಾಣೀಪರಿವರ್ಧನಾಯ ನಿತರಾಂ ದತ್ವಾನುದಾನಾದಿಕಂ
ಬಭ್ರಾಜೇ ಕಿಲ ಭಾರತೀಪದಯುತಃ ಶ್ರೀರಾಘವೇಂದ್ರಸ್ತದಾ ॥

ಬಳಿಕ ಸಭೆಯು ಶುರುವಾಯಿತು. ಪ್ರಾರ್ಥನಾಸ್ವಾಗತಗಳಾದ ಬಳಿಕ ಶಾಲೆಯ ಇತಿವೃತ್ತದ ವರದಿಯನ್ನು ನಿವೇದಿಸಿದರು. ಪ್ರಸನ್ನಚಿತ್ತರಾದ ಗುರುಗಳು ಶಾಲೆಯ ಇತಿವೃತ್ತವನ್ನು ಕೇಳಿ ಶಾಲೆಯ ಕಟ್ಟಡಕ್ಕೆ ಯೋಗ್ಯವಾದ ಒಳ್ಳೆಯನಿವೇಶನವನ್ನು ಗೀರ್ವಾಣ ಭಾಷಾಪರಿವರ್ಧನೆಯ ಸಲುವಾಗಿ ಪಾಠಶಾಲೆಯ ಕಾರ್ಯನಿರ್ವಾಹಕ ಮಂಡಳಿಗೆ ಉಚಿತವಾಗಿ ನೀಡಿದರು. ಮತ್ತು ದ್ರವ್ಯ ಸಹಾಯವನ್ನೂ ಸಹ ಮಾಡಿದರು.

**ವಿದ್ಯಾಮಂತ್ರಿಪದೇ ಸ್ಥಿತಃ ಸ ಬದರೀನಾರಾಯಣಾಖ್ಯಃ ಸುಧೀಃ**
**ಧುರ್ಯೋ ರಾಜಸಭಾಸದಾಮಧಿಸಭಂ ವಿಭ್ರಾಜಮಾನೋಽತಿಥಿಃ**
**ಆಮ್ನಾಯಾದ್ಯುಪಬೃಂಹಣಾಯ ವಿಹಿತಾಯೋಗಾದ್ಯುಪಾಯೈರಲಂ**
**ಸಾಹ್ಯಂ ವಿತ್ತವಿಧಾಯಕಾದ್ವಿದಧ ಇತ್ಯಾಶಾಸ್ತ ಸಂಪ್ರೀಣಿತಃ ||**

ಅಂದಿನ ಸಭೆಯಲ್ಲಿ ವಿಧಾನಸಭಾ ಸದಸ್ಯರೊಳಗೆ ಮುಖ್ಯರೂ, ವಿದ್ಯಾಭ್ಯಾಸದ ಇಲಾಖೆಯ ಮಂತ್ರಿಗಳೂ ಧೀಮಂತರೂ ಆದ ಶ್ರೀಬದರೀನಾರಾಯಣೈಯ್ಯಂಗಾರ್ಯರು ಉಪಸ್ಥಿತರಾಗಿದ್ದರು. ಪೀಠಾಧಿಷ್ಠಿತರಾಗಿ ಶೋಭಿಸುತ್ತಿದ್ದ ಅವರು ವೇದ ಶಾಸ್ತ್ರಾದಿಗಳ ಅಭಿವೃದ್ಧಿಗಾಗಿ ಇಟ್ಟಿರುವ ರಾಜ್ಯಸರ್ಕಾರದ ಪಾಂಚವಾರ್ಷಿಕಾದಿ ಆಯೋಜನೆಗಳಿಂದ ವಿಭಾಗಿಸಿದ ಹಣದ ಮಂಜೂರಾತಿಯ ಪತ್ರದಿಂದ ಸಾಕಷ್ಟು ಆರ್ಥಿಕ ಸಹಾಯವನ್ನು ಮಾಡಿಸುವುದಾಗಿ ಭರವಸೆಕೊಟ್ಟರು.

**ಏತಸ್ಮಿನ್ ಸ್ಮರಣೀಯಭವ್ಯದಿವಸೇ ಮಧ್ಯೇಸಭಂ ದೇಶಿಕಃ**
**ಪ್ರಾಜ್ಞಂ ಶ್ರೋತ್ರಿಯವಲ್ಲಭಂ ಚ ತಮುಪಾಧ್ಯಾಯಂ**
**ನೃಸಿಂಹಾಭಿಧಮ್ ।**
**ವಿದ್ವದ್ಗೌರವಕಾರಿರಾಂಕವಯುಗೇನಾಚ್ಛಾದ್ಯ ಸಂಪ್ರೀತಿಮಾನ್**
**ದತ್ವಾ ಸ್ವರ್ಣಸುಮಾಕ್ಷತಾನ್ ಕುಲಪತಿಃ ಸಮ್ಮಾನಯಾ-**
**ಮಾಸ ಸಃ ||** ೧೪

ಸ್ಮರಣೀಯವೂ ಮಂಗಳಕರವೂ ಆದ ಪಾಠಶಾಲೆಯ ವಜ್ರೋತ್ಸವದ ಈ ದಿವಸ ಅಂದಿನ ಸಭಾಧ್ಯಕ್ಷರಾದ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳು ಸುಪ್ರೀತಮನಸ್ಕರಾಗಿ ಸಭೆಯಲ್ಲಿ ಪ್ರಾಜ್ಞರೂ ವೈದಿಕಪ್ರಿಯರೂ ವಿದ್ಯಾರಣ್ಯ ಸವೇದ ಸಂಸ್ಕೃತಪಾಠಶಾಲೆಯಲ್ಲಿ ಬಹುಕಾಲ ಪ್ರಾಧ್ಯಾಪಕರಾಗಿದ್ದವರೂ ಆದ ವೇ|ಬ್ರ||ಶ್ರೀ ನರಸಿಂಹ ಭಟ್ಟರಿಗೆ ವಿದ್ವತ್ಪುರಸ್ಕಾರದ ಮರ್ಯಾದೆಯಾದ ಒಳ್ಳೆಯ ಶಾಲುಜೋಡಿಯನ್ನು ಹೊದೆಯಿಸಿ ಸುವರ್ಣಮಂತ್ರಾಕ್ಷತೆಯಿತ್ತು. ಸಮ್ಮಾನಿಸಿದರು.

**ಐಧಿಷ್ಟೇಂದು ಕಲೇವ ಕೇರಲವಧೂಸೀಮಂತರತ್ನಾಯಿತಾ**
**ನೀರ್ಚಾಲ್‌ಸಂಸ್ಕೃತಶಾಲಿಕಾಽಖಿಲಕಲಾಪೂರ್ಣಾಕಲಾವತ್ಪ್ರಿಯಾ**
**ಲೋಕಜ್ಞಾಶ್ಚ ಬಹುಶ್ರುತಾಶ್ಚ ಕವಯಸ್ತೇ ಶ್ಯಾಮಭಟ್ಟಾದಯೋ**
**ಯಸ್ಯಾಃ ಕೀರ್ತಿಸುಧಾಂಬುಧೌ ವಿಲಸಿತಾ**
**ಮುಕ್ತಾಮಣಿಶ್ರೇಣಯಃ ॥** ೧೫

ಕೇರಳ ರಾಜ್ಯದ ಕಾಸರಗೋಡು ತಾಲ್ಲೂಕಿನ ಪೆರಡಾಲು ಗ್ರಾಮಕ್ಕೆ ಸೇರಿದ ನೀರ್ಚಾಲಿನಲ್ಲಿರುವ ಮಹಾಜನವಿದ್ಯಾವರ್ಧಕಸಂಘದ ಆಶ್ರಯದಲ್ಲಿ ಸಂಸ್ಕೃತ ಮಹಾಪಾಠಶಾಲೆಯು ನಡೆಯುತ್ತಿತ್ತು. ಸಕಲಕಲಾಪೂರ್ಣವಾದ ಆ ಶಾಲೆಯು ವಿದ್ವಾಂಸರ ಮೆಚ್ಚುಗೆ ಪಡೆದಿತ್ತು. ಆ ಸಂಸ್ಕೃತ ಕಲಾಶಾಲೆಯು ಕೇರಳ ದೇಶದ ನಾರಿಯರ ಬೈತಲೆ ಬೊಟ್ಟಿನ ರತ್ನದಂತೆ ಶೋಭಿಸುತ್ತಿತ್ತು. ಅದು ಶುಕ್ಲಪಕ್ಷದ ಚಂದ್ರಕಲೆಯಂತೆ ದಿನದಿನಕ್ಕೂ ಅಭಿವೃದ್ಧಿಹೊಂದಿತ್ತು. ಲೋಕತಂತ್ರ ವಿಶಾರದರೂ ಮಹಾಪಂಡಿತರೂ ಕವಿಗಳೂ ಆಗಿರುವ ಖಂಡಿಕ ಶ್ಯಾಮಭಟ್ಟರೇ ಮುಂತಾದವರು ಯಾವ ಸಂಸ್ಕೃತ ಮಹಾಪಾಠಶಾಲೆಯ ಕೀರ್ತಿಯ ಸುಧಾ ಸಮುದ್ರದಲ್ಲಿ ಕಂಗೊಳಿಸುವ ಮುತ್ತಿನ ಮಣಿಯ ಶ್ರೇಣಿಗಳಾಗಿದ್ದರೋ,

**ವ್ಯತ್ಯಾಸ್ಥತ್ಸಮಯೋದ್ಭವೋರಭಿನವಾ ಸಾ ಪ್ರೌಢಶಾಲಾತ್ಮನಾ**
**ವಿದ್ಯಾಂ ವೈದಿಕಲೌಕಿಕೋಭಯಹಿತಾಂ ಪ್ರಾಸೂತ ಗಾಂ**
**ಗ್ಲೌರಿವ ।**
**ತಸ್ಯಾ ವಾರ್ಷಿಕಮಂಗಲೋತ್ಸವಸಮಾರೋಹೇ ಸಭಾಧ್ಯಕ್ಷತಾಂ**
**ಸ್ವೀಕುರ್ವನ್ ಮುದಮಾತತಾನ ಗುರುರಾಟ್**
**ಶ್ರೀರಾಘವೇಂದ್ರಃ ಸುಧೀಃ ॥** ೧೬

ಕೆಲವು ವರ್ಷಗಳ ಅನಂತರ ಆ ಸಂಸ್ಕೃತ ಮಹಾಪಾಠಶಾಲೆಯು ನೂತನ ಪ್ರೌಢಶಾಲೆಯಾಗಿ ಬದಲಾಯಿಸಿತು. ಆ ಪ್ರೌಢಶಾಲೆಯು, ಚಂದ್ರನು ಕಾಂತಿಯನ್ನು ಚೆಲ್ಲುವಂತೆ ವೈದಿಕ ಲೌಕಿಕ ಇಬ್ಬರಿಗೂ ಹಿತವಾಗುವ ವಿದ್ಯೆಯನ್ನು ಪ್ರಕಾಶಪಡಿಸಿತು. ಆ ಶಾಲೆಯ ಒಂದು ವಾರ್ಷಿಕೋತ್ಸವದ ಸಭೆಯ ಅಧ್ಯಕ್ಷತೆಯನ್ನು ಗುರುವರ್ಯರಾದ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳವರು ವಹಿಸಿದ್ದರು. ತಮ್ಮ ಅನುಗ್ರಹ ಪ್ರವಚನದಿಂದ ಎಲ್ಲರಲ್ಲಿಯೂ ಹರ್ಷವನ್ನು ಉಂಟುಮಾಡಿದರು.

**ವಿದ್ಯಾವರ್ಧಕಸಂಘಕಾರ್ಯನಿರತೈಃ ಶ್ರೀಶ್ಯಾಮಭಟ್ಟಾದಿಭಿಃ**
**ಧೌರೇಯೈಕಸಕೃತ್ಸಭಕ್ತಿವಿಬುಧೈಃ ಸಂಪ್ರಾರ್ಥಿತಃ ಸದ್ಗುರುಃ ।**
**ಸಾಭಾಪತ್ಯಮಲಂಚಕಾರ ವಿದುಷಾಂ ವರ್ಜ್ಯೋತ್ಸವೇ ಸತ್ಕೃತಾ**
**ಶ್ರೇಣಿಸ್ತಂ ವಿಭವೈಃ ಸುಧೀಪ್ರಣಿಹಿತೈಃ ಸಸ್ಮಾರ ಧಾರಾಧಿಪಮ್**

ಮಹಾಜನ ವಿದ್ಯಾವರ್ಧಕ ಸಂಘದ ಕಾರ್ಯ ನಿರತರಾದ ಶ್ರೀಖಂಡಿಕ ಶ್ಯಾಮಭಟ್ಟರೇ ಮುಂತಾದ ವಿದ್ವತ್ಪ್ರಮುಖರು ತಮ್ಮ ಸಂಘದ ಆಶ್ರಯದಲ್ಲಿ ನಡೆಯುತ್ತಿರುವ ನೂತನ ಪ್ರೌಢಶಾಲೆಯ ವಜ್ರೋತ್ಸವ ಸಭೆಗೆ ಅಧ್ಯಕ್ಷಸ್ಥಾನ ವನ್ನು ಅಂಗೀಕರಿಸಬೇಕೆಂದು ಅನೇಕಬಾರಿ ಭಕ್ತಿಯಿಂದ ಶ್ರೀಗುರುಗಳನ್ನು ಪ್ರಾರ್ಥಿ ಸಿದರು ಶ್ರೀಮದಾಚಾರ್ಯರು ಅವರ ಕೋರಿಕೆಯಂತೆ ಪ್ರೌಢಶಾಲೆಯ ವಜ್ರೋತ್ಸವದ ಸಭಾಧ್ಯಕ್ಷತೆಯನ್ನು ಸ್ವೀಕರಿಸಿದರು. ಅಂದು ಶ್ರೀಗಳವರಿಂದ ಸಮ್ಮಾನಿತವಾದ ವಿದ್ಯಾ ವಂತರ ಸಮೂಹವು ವಿದ್ವದ್ವರ್ಗಕ್ಕೆ ನೀಡಿದ ಸಂಭಾವನೆಯ ಉಡುಗೊರೆಗಳಿಂದ ಪ್ರಸಿದ್ಧನಾದ ಧಾರಾಧೀಶನಾದ ಭೋಜರಾಜನನ್ನು ಸ್ಮರಿಸಿತು.

ಅನ್ಯೇದ್ಯುಃ ಕಿಲ ಲೋಕಸೇವನಸಭಾ ಸಭ್ಯೇನ ವಿಜ್ಞಾಪಿತಃ
ಪ್ರಾಚಾರ್ಯೋ "ಮಡಿಯಾಲ" ಪಲ್ಲಿವಸತಾ ನಾರಾಯಣೇ
ನಾಸಕೃತ್ ।
ಸಂಸ್ಥಾಯಾಃ ಕಿಲ ತಸ್ಯ ವಾರ್ಷಿಕಸಮಾರೋಹೇ ಸಭಾಧ್ಯಕ್ಷತಾಂ
ಸ್ವೀಕೃತ್ಯೋಚಿತಭಾಷಿತೈಃ ಪರಿಷದಂ ಪ್ರಾಶಂಸದಭ್ಯರ್ಹಿತಃ ॥

ಮತ್ತೊಂದು ದಿವಸ ಲೋಕಾಸೇವಾಸಂಸ್ಥೆಯ ಅಧ್ಯಕ್ಷರಾದ "ಮಡಿಯಾಲು" ಗ್ರಾಮದ ಶ್ರೀನಾರಾಯಣಭಟ್ಟರು ಗುರುಗಳನ್ನು ಸಂದರ್ಶಿಸಿ, ತಮ್ಮ ಸಂಸ್ಥೆಯ ವಾರ್ಷಿಕಮಹೋತ್ಸವದ ಅಧ್ಯಕ್ಷ ಪೀಠವನ್ನು ಅಲಂಕರಿಸಬೇಕೆಂದು ಶ್ರೀಮದಾಚಾ ರ್ಯರನ್ನು ಬಾರಿಬಾರಿಗೂ ಬೇಡಿಕೊಂಡರು. ಶ್ರೀಮಡಿಯಯಾಲ ನಾರಾಯಣ ಭಟ್ಟರ ಸಂಸ್ಥೆಯ ಅಭಿವೃದ್ಧಿಯನ್ನು ಕೇಳಿ ತಿಳಿದು ಸಂತುಷ್ಟರಾದ ಸ್ವಾಮಿಗಳು ಅವರ ಕೋರಿಕೆಯಂತೆ ವಾರ್ಷಿಕ ಸಭೆಯ ಅಧ್ಯಕ್ಷತೆ ವಹಿಸಿದರು. ಸಭ್ಯರಾದ ಶಿಷ್ಯ ರಿಂದ ಪುರಸ್ಕೃತರಾದ ಆಚಾರ್ಯರು ಉಚಿತವಾದ ಮಧುರೋಕ್ತಿಗಳಿಂಡ ಸಂಘದ ಕಾರ್ಯಾಭಿವೃದ್ಧಿಯನ್ನು ಹೊಗಳಿದರು.

ತಸ್ಮಿನ್ ವಾರ್ಷಿಕ್ಕಉತ್ಸವೇ ಪ್ರಚಲಿತಾಃ ಶ್ಲಾಘ್ಯಾಃ ಕ್ರಿಯಾಃ
ಸರ್ವಶೋ
ಯೋಗೀಂಪ್ರಾಂಬುದಮಂಡಲಾದ್ವಿಗಲಿತಾ ಹ್ಯಾಧ್ಯಾತ್ಮಿಕೀ
ವಾಙ್ಮಯೀ ।
ವೃಷ್ಟಿರ್ವ್ಯಷ್ಟಿಸಮಷ್ಟಿತುಷ್ಟಿಜನನೀ ಶಿಷ್ಯಾಂತರಂಗಸ್ಥಲೀ–
ಮಾಪೂರ್ಯೋದಚಲಚ್ಚ ಚಿತ್ತಮಭವನ್ನಿಷ್ಪಂಕಿಲಂ
ಧೀಮತಾಮ್ ॥ ೧೯

ಅಂದಿನ ವಾರ್ಷಿಕೋತ್ಸವದಲ್ಲಿ ಏರ್ಪಡಿಸಿದ್ದ ಎಲ್ಲಾ ಕಾರ್ಯಕಲಾಪಗಳೂ ಎಲ್ಲೆಡೆಯಿಂದಲೂ ಹೊಗಳತಕ್ಕವುಗಳಾಗಿದ್ದುವು. ಸಭಾಧ್ಯಕ್ಷರೂ, ಪರಮಹಂಸ ಪರಿವ್ರಾಜಕಾಚಾರ್ಯರೂ ಆದ ಶ್ರೀರಾಘವೇಂದ್ರಭಾರತೀಸ್ವಾಮಿಗಳೆಂಬ ಮೇಘಮಂಡಲದಿಂದ ಸುರಿದ ಆತ್ಮವಿದ್ಯಾ ವಿಷಯಕವಾದ ಮಾತಿನ ಮಳೆಯು ವ್ಯೆಯಕ್ತಿವಾಗಿಯೂ ಸಾಮೂಹಿಕವಾಗಿಯೂ ತೃಪ್ತಿಯನ್ನು ಉಂಟುಮಾಡುತ್ತಾ ಶಿಷ್ಯರ ಅಂತರಂಗಸ್ಥಳದಲ್ಲಿ ತುಂಬಿ ಉಕ್ಕಿಹರಿಯಿತು. ಪಂಡಿತರ ಚಿತ್ತವು ನಿರ್ಮಲವಾಯಿತು

**ಯದ್ಗ್ರಂಥಾಲಯನಿರ್ಮಿತೌ ಸ ಗುರುಣಾ ಶಂಕುಃ ಪುರಾ ಸ್ಥಾಪಿತಃ**
**ಪುತ್ತೂರೌ ಪರಿವರ್ಧತೇ ಸ ಹಿ ವಿವೇಕಾನಂದನಾಮಾಲಯಃ ।**
**ವಿದ್ಯಾರ್ಥಿ ಪ್ರಚಯೇನ ಲೋಕನಿಚಯೇನಾರಾಧಿತಶ್ಚಾನ್ವಹಂ**
**ಸೂತೇ ಕಲ್ಪಲತೇವ ಸಂಪ್ರತಿ ಸತಾಂ ಸೇವಾನುರೂಪಂ ಫಲಮ್**

ಕ್ರಿ. ಶ. ೧೯೭೫ನೆಯ ಜನವರಿ ೧೩ನೆಯ ತಾರೀಖಿನಲ್ಲಿ ಶ್ರೀಸ್ವಾಮಿಗಳವರು ಯಾವ ಗ್ರಂಥಾಲಯದ ಕಟ್ಟಡದ ಶಂಕುಸ್ಥಾಪನೆ ಮಾಡಿದ್ದರೋ ಆ ವಿವೇಕಾನಂದ ಗ್ರಂಥಾಲಯವು ಈಗ ಪುತ್ತೂರಿನಲ್ಲಿ ಅಭಿವೃದ್ಧಿಹೊಂದುತ್ತಿದೆ. ಪ್ರತಿದಿವಸವೂ ಹಲವಾರು ವಿದ್ಯಾರ್ಥಿಗಳೂ ಹಲವುಸಾರ್ವಜನಿಕಮಹಾಶಯರೂ ಪುಸ್ತಕ ಭಂಡಾರದ ಉಪಯೋಗ ಪಡೆಯುತ್ತಿದ್ದಾರೆ. ಈ ಪುಸ್ತಕ ಭಂಡಾರವು ಸಜ್ಜನರಿಗೆ ಅವರವರ ಸೇವೆಗೆ ಅನುಗುಣವಾದ ಪ್ರಯೋಜನವನ್ನು ಕಲ್ಪಲತೆಯಂತೆ ನೀಡುತ್ತಿದೆ.

**ತಸ್ಯೈತಸ್ಯ ನಿವೇಶನೇ ಹಿ ಗುರುಣಾ ನ್ಯಸ್ತಾ ಶಿಲಾ ಚಾಮುನಾ**
**ಸೌವರ್ಣಾಕ್ಷತಬೀಜವಾಪಸಹಿತಾ ಸಾ ಸರ್ವಸಂಪತ್ತಯೇ ।**
**ಯಸ್ಮಾತ್ಪುಸ್ತಕಹಸ್ತಶಸ್ತಕೃತಿನಾಂ ವಿದ್ಯಾರ್ಥಿನಾಮಾದರಾ–**
**ದಿಷ್ಟಾರ್ಥೈಕ ಪಟೀಯಸೀ ಸ ಮಹತೇ ಭೋಗಾಯ ಚೇಷ್ಟೇ**
**ಸ್ವಯಮ್ ॥ ೨೧**

ಈ ವಿವೇಕಾನಂದ ಪುಸ್ತಕಾಲಯದ ಕಟ್ಟಡಕಟ್ಟುವ ಮೊದಲು ಶ್ರೀ ಗುರುಗಳ ಈ ನಿವೇಶನದಲ್ಲಿ ಎಲ್ಲವಿಧವಾದ ಏಳಿಗೆಗಾಗಿ ಸುವರ್ಣ ಮಂತ್ರಾಕ್ಷತೆಯೆಂಬ ಬೀಜದ ಬಿತ್ತನೆಯೊಡನೆ ಸಮೇತವಾದ ಆ ತಳಪಾಯದ ಕಲ್ಲನ್ನು ತಮ್ಮ ಅಮೃತ ಹಸ್ತದಿಂದ ಹಾಕಿದ್ದರಲ್ಲವೇ, ಬಹುಶಃ ಅವರಮಹಿಮೆಯೇ ಇರಬೇಕು ಏಕೆಂದರೆ ಇಲ್ಲಿ ತಮತಮಗೆ ಬೇಕಾದ ಉತ್ತಮೋತ್ತಮವಾದ ಆಧಾರ ಗ್ರಂಥಗಳನ್ನು ಹಸ್ತದಲ್ಲಿ ಹಿಡಿದು ಓದಿ ಉತ್ತಮಕೃತಿಗಳನ್ನು ತಯಾರಿಸಿದ ಅನೇಕ ವಿದ್ಯಾರ್ಥಿಗಳಿಗೆ ತಮ್ಮ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸುವುದರಲ್ಲಿ ಸಮರ್ಥವಾದ ಮಹತ್ತರ ಪಾಪಸೌಖ್ಯಕ್ಕೆ ಈ ವಿವೇಕಾನಂದ ಗ್ರಂಥಾಲಯವು ಸ್ವತಂತ್ರವಾಗಿ ಶಕ್ತವಾಗಿದೆ.

(ಯುಗ್ಮಕಮ್)

ಏತತ್ಪೀಠಪರಂಪರಾಗತವತಾಂ ಶ್ರೀರಾಮಚಂದ್ರಾಪುರೇ
ಪ್ರಾಚಾಂ ಭವ್ಯಚರಿತ್ರವೇದಕಮತೀವಾವಶ್ಯಕಂ ಪುಸ್ತಕಮ್ ।
ಶಿಷ್ಯಾ ಯೇನ ಪುರಾತನಂ ಗುರುಕುಲೇ ವೃತ್ತಂ ತ್ವಿದಾನೀಂತನಂ
ಬೋದ್ಧುಂ ಶಕ್ನುಯುರಪ್ಯಯೀಸಮಖಿಲಾ ಅಗ್ರೇಸರಾ ದೇಶಿಕಾಃ॥

ಇತ್ಯಾಲೋಚ್ಯ ಸ ಲೋಕವಿದ್ಗುರುರಸೌ ಶ್ರೀರಾಘವೇಂದ್ರಸ್ತತಃ
ಪ್ರಾಚ್ಯಂ ಲೇಖ್ಯಮವೇಕ್ಷ್ಯ ವೃತ್ತಮಖಿಲಂ ಜ್ಞಾತ್ವಾ
ತದುತ್ತಂಭಿತಮ್ ।
ವಿದ್ವಾನತ್ಪರಿಶೀಲಿತಂ ಸುಲಲಿತಂ ಗ್ರಂಥಂ ವಿಲೇಖ್ಯಾದರಾತ್
ಕಾರ್ಣಾಟಂ ಮತಿಮಾನಿದಂಪ್ರಥಮತಃ ಪ್ರಾಕಾಶಯದ್ದೇಶಿಕಃ॥

"ಶ್ರೀ ರಾಮಚಂದ್ರಾಪುರದ ಮಠದ ಗುರುಪರಂಪರೆಯಲ್ಲಿ ಪೀಠಕ್ಕೆ ಬಂದಿರುವ ಹಿಂದಿನ ಗುರುಗಳ ಕಾಲದ ಭವ್ಯಚರಿತ್ರೆಯನ್ನು ಬೋಧಿಸುವ ಪುಸ್ತಕವು ಇಂದು ಅತ್ಯಾವಶ್ಯಕ ಏಕೆಂದರೆ, ನಮ್ಮ ಶಿಷ್ಯಸಮಾಜವು ಮುಂದೆ ಈ ಪೀಠಕ್ಕೆ ಬರುವ ಆಚಾರ್ಯರೂ ಕೂಡ ಇದರಿಂದ ಮಠದಲ್ಲಿ ಹಿಂದೆ ಏನೇನು ನಡೆಯಿತು? ಇಂದು ಏನು ನಡೆಯುತ್ತಿದೆ? ಎಂಬ ಸಂಗತಿಯನ್ನು ಸುಲಭವಾಗಿ ತಿಳಿಯಲು ಶಕ್ತರಾಗುವರು" ಎಂದು ಲೋಕಜ್ಞರಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ತಮ್ಮೊಳಗೆ ಆಲೋಚಿಸಿದರು. ಅನಂತರ ಮಠದ ಹಿಂದಿನ ಇತಿವೃತ್ತದ ದಾಖಲೆಗಳನ್ನು ನೋಡಿ ಎಲ್ಲಾ ವಿಷಯಗಳನ್ನು ಕೂಲಂಕಷವಾಗಿ ತಿಳಿದರು. ಆ ಎಲ್ಲಾ ವಿಷಯಗಳನ್ನು ಅವಲಂಬಿಸಿರುವ ಪುಸ್ತಕವನ್ನು ಬರೆಯಿಸಿ, ವಿದ್ವಾಂಸರ ಪರಿಶೀಲನೆಗೆ ಕಳುಹಿಸಿದರು. ವಿದ್ವಜ್ಜನರು ಪರಿಶೀಲಿಸಿದ ಬಳಿಕ ಬುದ್ಧಿ ಶಾಲಿಗಳಾದ ಆಚಾರ್ಯರು ಆಗ್ರಂಥವನ್ನು ಎಲ್ಲರಿಗೂ ಗ್ರಹಿಸಲು ಅನುಕೂಲವಾಗುವಂತೆ ಸರಳವಾದ ಕನ್ನಡ ಭಾಷೆಯಲ್ಲಿ ಅಚ್ಚುಹಾಕಿಸಿ ಪ್ರಚುರ ಪಡಿಸಿದರು,

ಮಾಗಾನ್ಧರ್ಮಪರಿಕ್ಷಯಸ್ತು ವಿಹಿತತ್ಯಾಗಾನ್ನಿಷಿದ್ಧಾದರಾತ್
ಸರ್ವೇಸ್ಯಧ್ಯತನಾಃ ಸ್ವಕರ್ಮನಿರತಾ ವಿಂದಂತು ನಿಶ್ರೇಯಸಮ್
ಇತ್ಯಾಲೋಚ್ಯ ಸ ನಿತ್ಯಕರ್ಮಯೋಜನಾದ್ಯಾವಶ್ಯಕಾನ್ಯನ್ವಹಂ
ಪ್ರಾಜ್ಞೋ ಧಾರ್ಮಿಕಪುಸ್ತಕಾನ್ಯಭಿನವಾನ್ಯೂರೀಚಕಾ-
ರಾಂಜಸಾ ॥ ೨೪

"ಶಾಸ್ತ್ರದಲ್ಲಿ ಹೇಳಿದ ಸ್ನಾನ, ಸಂಧ್ಯಾ, ಬ್ರಹ್ಮಯಜ್ಞ ಮುಂತಾದ ನಿತ್ಯ ಕರ್ಮಗಳನ್ನು ಆಚರಿಸದೇ ಇರುವುದು, ಶಾಸ್ತ್ರದಲ್ಲಿ ನಿಷಿದ್ಧವಾದ ಮದ್ಯಮಾಂಸಾದಿಗಳನ್ನು ಸೇವಿಸುವುದು, ಅಂದರೆ ವಿಹಿತತ್ಯಾಗ ನಿಷಿದ್ಧಾಚರಣ ಇವುಗಳಿಂದ ಸನಾತನ ಧರ್ಮವು ನಷ್ಟವಾಗುವುದು ನಮ್ಮ ಸಮಾಜದಲ್ಲಿ ಶಿಷ್ಯರು ಆಚಾರ ಭ್ರಷ್ಟರಾಗಬಾರದು. ಎಲ್ಲರೂ ಆಚಾರವಂತರಾಗಿ ಶ್ರೇಯಸ್ಸನ್ನು ಪಡೆಯಲಿ ಧಾರ್ಮಿಕ ಆಚರಣೆಗೆ ಅನುಕೂಲವಾದ ಪುಸ್ತಕಗಳೂ ಈಗಿನವರಿಗೂ ಬೇಕು" ಎಂದು ಶ್ರೀಮದಾಚಾರ್ಯರು ಆಲೋಚಿಸಿ, ಕನ್ನಡಸಂಧ್ಯಾಭಾಷ್ಯ, ಬೋಧಾಯನೀಯ ನಿತ್ಯಕರ್ಮ ಪ್ರದೀಪ, ಲಘುಸಂಧ್ಯಾಪ್ರಯೋಗವಿಧಿ ಮುಂತಾದ ಧಾರ್ಮಿಕ ಪುಸ್ತಕಗಳಿಗೆ ಮನ್ನಣೆ ನೀಡಿ ಪ್ರೋತ್ಸಾಹಿಸಿದರು.

**ಶ್ರೀಮದ್ಭಾರತದರ್ಶನಾದಿವಿವಿಧೈಸ್ಸದ್ಗ್ರಂಥಸಂಪಾದಕೈಃ**
**ಸಂಘೀಯೈರುಪಯಾಚಿತಃ ಸ ಗುರುರಾಟ್ ಧರ್ಮೋಪದೇಷ್ಟಾ**
**ಸ್ವಯಮ್ ।**
**ಶ್ರೀರಾಮಾಯಣ ಭಾರತಾದಿಷು ಮಹಾಗ್ರಂಥಾದಿಸಂಪಾದನೇ**
**ತಾಂಸ್ತಾನ್ ಪ್ರೇರಯದೂರ್ಜಿತಾಮಲಮತಿರ್ದತ್ವಾ ಚ**
**ತೇಭ್ಯೋ ಧನಮ್ ॥** ೨೫

ಬೆಂಗಳೂರಿನಲ್ಲಿ ಭಾರತದರ್ಶನ ಪ್ರಕಾಶನಸಮಿತಿ ಮುಂತಾದ ಒಳ್ಳೆಯ ಗ್ರಂಥ ಸಂಪಾದಕ ಸಮಿತಿಗಳು ಅನೇಕವಿವೆ ಆ ಸಮಿತಿಯ ಕಾರ್ಯಕರ್ತರು, ವ್ಯವಸ್ಥಾಪಕ, ಪ್ರಕಾಶಕರು, ಮುಂತಾದವರು ಶ್ರೀಮದಾಚಾರ್ಯರನ್ನು ಸಂದರ್ಶಿಸಿ ತಮ್ಮ ಕಾರ್ಯೋದ್ಯಮವನ್ನು ವಿವರಿಸಿ ಶ್ರೀಗಳವರ ಆಶೀರ್ವಾದವನ್ನು ಬೇಡಿದರು. ಸ್ವಯಂಧರ್ಮದೇಶಿಕರಾದ ಶ್ರೀರಾಘವೇಂದ್ರಭಾರತೀಗಳು ಅವರ ಸದಭಿಪ್ರಾಯವನ್ನು ಮನ್ನಿಸಿ, ಶ್ರೀಮದ್ರಾಮಾಯಣ ಮಹಾಭಾರತವೇ ಮುಂತಾದ ಸನಾತನ ಧರ್ಮಬೋಧಕ ಗ್ರಂಥಗಳನ್ನು ಆಧರಿಸಿ ಕನ್ನಡ ಭಾಷೆಯಲ್ಲಿ ಅವುಗಳ ಪ್ರಕಾಶನಕ್ಕೆ ತಮ್ಮ ಮೆಚ್ಚಿಗೆಯನ್ನು ಇತ್ತರು. ಊರ್ಜಿತಧೀಶಕ್ತಿಯುಳ್ಳ ಸ್ವಾಮಿಗಳು ಆಯಾ ಗ್ರಂಥ ಪ್ರಕಾಶಕರ ಸಮಿತಿಯ ಸದಸ್ಯರಿಗೆ ಧನಸಹಾಯಮಾಡಿ, ಅವರನ್ನು ಪ್ರೋತ್ಸಾಹಿಸಿದರು.

(ಯುಗ್ಮಕಮ್)

**ಹಿಂದೂಧರ್ಮಸಮಾಜಸಂಸ್ಕೃತಿ ಸಮುತ್ಥಾನಾರ್ಥಮಾಯೋಜಿತಃ**
**ಸಂಘಃ ಕಶ್ಚನ ಕಾರ್ಮಣೈರುಪಹಿತ ಸ್ತ್ಯಾಗೈಕಜೀವಾತುಭಿಃ ।**
**ಸಂಸ್ಥಾಪ್ಯೇತ ತದಾ ವಿಧುಂತುದಮುಖಾನ್ಮುಕ್ತಂ ಭವೇದ್ ಭಾರತಂ**
**ಸಂತಾನಂ ವಿಮಲೇಂದುಮಂಡಲಮಿವಾಶೋಭೇತ**
**ನಿಷ್ಕಂಟಕಮ್ ॥** ೨೬

ಇತ್ಥಂ ಸ್ವಾಶಯಬೋಧಕಂ ಲಘುತರಂ ಕರ್ಣಾಟವಾಗ್ಗುಂಫಿತಂ
ಗ್ರಂಥಂ ಮಾಲ್ಯನಿಭಂ ನಿಧಾಯ ಪದಯೋ ರಾಚಾರ್ಯ-
ವರ್ಯಸ್ಯ ನಃ ।
ಪ್ರಾಣಂಸೀತ್ಸುಧಿಯಾಂ ಮಣಿರ್ಹಿ ಮಡಿಯಲಸ್ಥಃ ಸ ನಾರಾಯಣಃ
ಪ್ರಾದಾತ್ತತ್ಪರಿಶೀಲ್ಯ ರಾಘವಗುರುಃ ಸೌವರ್ಣಮಂತ್ರಾಕ್ಷತಾನ್

"ಹಿಂದೂಧರ್ಮ, ಹಿಂದೂಸಮಾಜ ಹಿಂದೂ ಸಂಸ್ಕೃತಿ ಇವುಗಳ ಏಳಿಗೆಗಾಗಿ ಒಂದು ಸಂಸ್ಥೆಯು ರೂಪಿತವಾಗಬೇಕು. ಆ ಸಂಸ್ಥೆಯ ಕಾರ್ಯಕರ್ತರಾದ ಸದಸ್ಯರು ತ್ಯಾಗಜೀವಿಗಳಾದ ತಪಸ್ವಿಗಳಾಗಿರಬೇಕು. ಆ ತ್ಯಾಗಿಗಳ ಆಧ್ಯಾತ್ಮಿಕ ಪ್ರಭಾವ. ಸತತ ಪ್ರಯತ್ನಗಳ ಮೂಲಕ ಧರ್ಮಪ್ರಚಾರವಾಗಬೇಕು. ಪ್ರಜೆ ಧರ್ಮಾಚರಣೆಯಲ್ಲಿ ತೊಡಗಬೇಕು ಆಗ ಭಾರತವು ರಾಹುವಿನ ಮುಖದಿಂದ ಬಿಡುಗಡೆ ಹೊಂದ ಬಹುದು. ಆಗ ಹಿಂದೂಪ್ರಜಾವರ್ಗವು ನಿರ್ಮಲವಾದ ಚಂದ್ರಮಂಡಲದಂತೆ ಶೋಭಿಸುವುದು" ಹೀಗೆ ತಮ್ಮ ಅಭಿಪ್ರಾಯವನ್ನು ಬೋಧಿಸುವ ಕನ್ನಡ ಭಾಷೆಯಲ್ಲಿ ಬರೆದ ಚಿಕ್ಕ ಪ್ರಬಂಧವನ್ನು ವಿದ್ವಸ್ಮಾನ್ಯರಾದ ಮಡಿಯಾಲದ ಶ್ರೀನಾರಾಯಣ ಭಟ್ಟರು ಬರೆದರು. ಅವರು ಗುರುವರ್ಯರ ಹತ್ತಿರ ಬಂದು ಹೂಮಾಲೆಯಂತಿರುವ ಆ ಪ್ರಬಂಧವನ್ನು ಗುರುಗಳ ಪಾದಾರವಿಂದಗಳಿಗೆ ಒಪ್ಪಿಸಿದರು. ಶ್ರೀರಾಘವೇಂದ್ರ ಭಾರತೀಸ್ವಾಮಿಗಳು ಅದನ್ನು ಪರಿಶೀಲಿಸಿ ಮೆಚ್ಚಿ ಶ್ರೀ ನಾರಾಯಣಭಟ್ಟರಿಗೆ ಸುವರ್ಣ ಮಂತ್ರಾಕ್ಷತೆಯಿತ್ತು ಅನುಗ್ರಹಿಸಿದರು,

ಆಕೃಷ್ಟಾ ಇವ ಷಟ್ಪದಾಃ ಸುಮರಸಾತ್ ಸೌಜನ್ಯತಃ ಸದ್ಗುರೋಃ
ಪಶ್ಚಾತ್ತಾಪವಿಧೂತಕಲ್ಮಷತಯಾ ಚಕ್ಷುಃ ಪಥಂ ಪ್ರಾಪಿತಾಃ ।
ಪೂರ್ವಾಚಾರ್ಯಬಹಿಷ್ಕೃತಾಃ ಕತಿಪಯೇ ಶಿಷ್ಯಾ ಇದಾನೀಂತನೈ-
ರಾರ್ಯೈಸ್ತೇ ಸಕಲಾಪುರದ್ವಿಜಜನಾಃ ಕಾರುಣ್ಯತಸ್ಸ್ವೀಕೃತಾಃ ॥

ಸಕಲಾಪುರ ಬ್ರಾಹ್ಮಣ ವರ್ಗಕ್ಕೆ ಸೇರಿದ ಕೆಲವು ಶಿಷ್ಯರು ಶ್ರೀರಾಮಚಂದ್ರಾಪುರದ ಮಠದ ಹಿಂದಿನ ಗುರುಗಳ ಕಾಲದಲ್ಲಿ ಯಾವುದೋ ಕಾರಣಕ್ಕಾಗಿ ಬಹಿಷ್ಕೃತರಾಗಿದ್ದರು. ಅವರು ಈಗ ಈಗಿನ ಗುರುಗಳ ಸೌಜನ್ಯದಿಂದ ಹೂವಿನ ಮಕರಂದದಿಂದ ಸೆಳೆಯಲ್ಪಟ್ಟ ದುಂಬಿಗಳಂತೆ ಆಕೃಷ್ಟರಾದರು. ಪಶ್ಚಾತ್ತಾಪದಿಂದ ಅವರ ಪಾಪಗಳು ನಶಿಸಿಹೋದದ್ದರಿಂದ ಅವರಿಗೆ ಈಗಿನ ಶ್ರೀರಾಘವೇಂದ್ರಭಾರತೀಸ್ವಾಮಿಗಳ ದರ್ಶನವಾಯಿತು. ಗುರುಗಳ ಕಾರುಣ್ಯದಿಂದ ಅವರು ಮತ್ತೆ ಪುರಸ್ಕೃತರಾದರು.

ಕಾರುಣ್ಯಂ ವಿಜಿತೇಂದ್ರಿಯತ್ವಮಪಿ ಚ ಕ್ಷಾಂತಿಶ್ಚ ಸೂಕ್ಷ್ಮಜ್ಞತಾ
ಗಾಂಭೀರ್ಯಂ ಮಿತಭಾಷಿತಾಪ್ಯುಪರತಿಃ ಶಾಂತಿಸ್ತಥೋ-
ದಾರತಾ ।
ವಾತ್ಸಲ್ಯಂ ತ್ವನಸೂಯತಾಽಪರುಷತಾ ಸ್ವಾಚಾರನಿಷ್ಠಾತ್ಮತಾ
ಪುಂಜೀಭೂಯ ಗುಣಾ ಇಮೇ ಹ್ಯಧಿವಸಂತ್ಯೇನಂ ಸದಾ
ರಾಗಿಣಃ ॥ ೨೯

ಕರುಣೆ, ಇಂದ್ರಿಯಜಯ, ತಾಳ್ಮೆ, ಸೂಕ್ಷ್ಮಗ್ರಾಹಿತ್ವ ಅವಿಕೃತ ಚಿತ್ತವೃತ್ತಿ ಮಿತಭಾಷೆ, ವಿರಕ್ತಿ ಸಮಾಧಾನ, ಔದಾರ್ಯ, ವಾತ್ಸಲ್ಯ ಅನಸೂಯೆ- ಮೃದುತ್ವ ತಮ್ಮ ಆಚಾರದಲ್ಲಿ ಆಸಕ್ತಿ. ಈ ಎಲ್ಲಾ ಗುಣಗಳೂ ಈ ಗುರುಗಳ ಮೇಲೆ ಪ್ರೀತಿಗೊಂಡು ಗುಂಪುಗೂಡಿ ಯಾವಾಗಲೂ ಇವರಲ್ಲಿ ನೆಲಸಿವೆ

ಶಿಷ್ಯಾನ್ ಭಿನ್ನರುಚೀನ್ ವಿವಾದವಿವಶಾನ್ ಸ್ವಾಭ್ಯರ್ಣಮಭ್ಯಾಗತಾ-
ನಾಕಾರೇಂಗಿತಚೇಷ್ಟಿತೈಃ ಸಹೃದಯೋ ಜ್ಞಾತ್ವಾ
ತದಂತರ್ಗತಮ್ ।
ವಾಕ್ಯಾರ್ಥಂ ಹ್ಯುಭಯೋರ್ನಿಶಮ್ಯ ಮತಿಮಾನ್ನಿಸ್ಸಾರ್ಯ
ತತ್ಸಂಶಯಂ
ತತ್ತ್ವಂ ತತ್ಫಣಿತೇಷ್ವಸೌ ವಿನಯತೇ ಶ್ರೀರಾಘವೇಂದ್ರೋ
ಗುರುಃ ॥ ೩೦

ಭಿನ್ನಭಿನ್ನ ಅಭಿರುಚಿಯುಳ್ಳ ಶಿಷ್ಯರು ಯಾವುದೋ ವ್ಯವಹಾರದಲ್ಲಿ ಪರಸ್ಪರ ವಿರುದ್ಧವಾದ ಅಭಿಪ್ರಾಯ ಹೊಂದಿ ಕಲಹಾಭಿಮುಖರಾಗಿ ನಿರ್ಣಯಕ್ಕಾಗಿ ಗುರುಗಳ ಹತ್ತಿರಕ್ಕೆ ಬಂದಾಗ ಸಹೃದಯರೂ, ಸೂಕ್ಷ್ಮಬುದ್ಧಿಯುಳ್ಳವರೂ ಆದ ಆಚಾರ್ಯರು ಎರಡೂ ಪಕ್ಷದವರ ಮನಸ್ಸನ್ನು ಅವರವರ ಆಕಾರೇಂಗಿತಗಳಿಂದ ತಿಳಿದು ಇಬ್ಬರ ವಾಕ್ಯಾರ್ಥವನ್ನೂ ಕೇಳಿ, ಅವರವರ ಸಂದೇಹವನ್ನು ನಿವಾರಿಸುವರು ಮತ್ತು ಅವರ ಮಾತಿನಲ್ಲಿಯೇ ಇರುವ ವಾಸ್ತವ ಪ್ರಾಮಾಣಿಕ ಸಿದ್ಧಾಂತವನ್ನು ಅವರಿಗೆ ಮನದಟ್ಟು ಮಾಡಿಕೊಟ್ಟು, ಅವರ ವಿವಾದವನ್ನು ಹೋಗಲಾಡಿಸುವರು,

ದುರ್ದಮ್ಯಾನಿಹ ಚೇಂದ್ರಿಯಾರ್ಥವಿಷಯಾನ್ ಜಿತ್ವಾ ನಿಜೌ
ಪಾಧಿಕಾ-
ನತ್ಯಾವಶ್ಯಕಕಾರ್ಯಸಾಧನವಿಧಿಂ ಸೂಕ್ಷ್ಮಾತಿಸೂಕ್ಷ್ಮಜ್ಞಯಾ।
ಮತ್ವಾ ಸಾಧು ವಿಚಾರ್ಯ ಕಾರ್ಯಮನಿಶಂ ಕೃತ್ವಾ
ಪ್ರಯತ್ನೋಚಿತಾಂ
ಲೇಭೇ ಸತ್ಫಲತಾಮಸೌ ಕಿಲ ಗುರುಃ ಶ್ರೀರಾಘವೇಂದ್ರೋ
ಯತಿಃ ॥ ೩೧

ಸ್ವಾಮಿಗಳ ಆಧ್ಯಾತ್ಮಿಕ ಜೀವನದಲ್ಲಿಯೂ, ಮರೀಯು ಲೌಕಿಕ ವ್ಯವಹಾರದಲ್ಲಿಯೂ ಅನೇಕ ಕಠಿಣ ಸಮಸ್ಯೆಗಳು ಒದಗಿದ ಪ್ರಸಂಗಗಳಲ್ಲಿ ಆಚಾರ್ಯರು ಇಂದ್ರಿಯೋದ್ವೇಗಕ್ಕೆ ಒಳಗಾಗುತ್ತಿರಲಿಲ್ಲ. ಆಯಾಯ ಪ್ರಸಂಗಗಳಲ್ಲಿನ ವಿಶೇಷಗುಣ ನಿಮಿತ್ತದಿಂದ ಉಂಟಾದ, ಹತೋಟಿಗೆ ತರಲು ಅಸದಳವಾದ, ಮನೋವಿಕಾರಗಳನ್ನು ಗೆದ್ದು ಧೀರರಾಗಿ ಅಂದಿನ ಅವಶ್ಯ ಕರ್ತವ್ಯ ನಿರ್ವಹಣೆಯ ವಿಧಾನವನ್ನು ಅತ್ಯಂತ ಸೂಕ್ಷ್ಮಮತಿಯಿಂದ ಚೆನ್ನಾಗಿ ವಿವೇಚಿಸುತ್ತಿದ್ದರು. ಬಳಿಕ ವಿಚಾರ ಮಾಡಿದ ದೆಸೆಯಲ್ಲಿ ನ ಕಷ್ಟ ಪ್ರಯತ್ನ ಮಾಡುವರು. ಬಳಿಕ ತಮ್ಮ ಪ್ರಯತ್ನಕ್ಕೆ ಅನುಗುಣವಾದ ಪ್ರಯೋಜನವನ್ನು ಶ್ರೀರಾಘವೇಂದ್ರಭಾರತೀಗಳು ಪಡೆದರು. ಹೀಗೆ ಫಲ ಪಡೆಯುತ್ತಿರುವುದು ಇವರಲ್ಲಿ ಇರುವ ಕಾರ್ಯಜ್ಞತೆಯ ವೈಶಿಷ್ಟ್ಯ.

ಶ್ರೀಮಚ್ಛಂಕರಸಂಪ್ರದಾಯವಿಹಿತೇ ಶ್ರೀತೋಟಕಾರ್ಯಾನುಗೇ
ಪೀಠೇಽಧ್ಯಾತ್ಮಪದೇ ಸ್ಥಿತೋ ಹಿ ಯಡನೀರುಸ್ಥೋ
ಮಠಾಧೀಶ್ವರಃ ।
ತಂ ಚೈನಂ ಸಮಪೂಪುಜತ್ಸ ಸುಮನಃಪ್ರೀತ್ಯೇಶ್ವರಾನಂದ ಇ-
ತ್ಯಾಖ್ಯಾತಃ ಕಿಲ ಭಾರತೀತಿ ಪದಭಾಗಾಚಾರ್ಯಜನ್ಮೋತ್ಸವೇ॥

ಕೇರಳ ರಾಜ್ಯಕ್ಕೆ ಸೇರಿದ ಕಾಸರಗೋಡಿಗೆ ಹತ್ತಿರವಿರುವ ಎಡನೀರು ಗ್ರಾಮದಲ್ಲಿ ಶ್ರೀಮಚ್ಛಂಕರಭಗವತ್ಪಾದರ ಸಂಪ್ರದಾಯದ ತೋಟಕಾಚಾರ್ಯ ಗುರುಪರಂಪರೆಗೆ ಸೇರಿದ ಅದ್ವೈತಪೀಠದ ಮಠವಿದೆಯಷ್ಟೆ. ಅಲ್ಲಿನ ಆಚಾರ್ಯವರ್ಯರಾದ ಶ್ರೀಮದೀಶ್ವರಾನಂದಭಾರತೀಗಳು ಸುಮಾರು ಕ್ರಿ. ಶ. ೧೯೫೮ ನೆಯ ಇಸವಿಯ ವಿಲಂಬಿ ಸಂವತ್ಸರದ ವೈಶಾಖ ಶುಕ್ಲ ಪಂಚಮೀಯಂದು ಶ್ರೀಶಂಕರ ಭಗವತ್ಪಾದಾಚಾರ್ಯರ ಜಯಂತಿಯದಿನ ಶ್ರೀ ಶಂಕರಜಯಂತೀ ಸಭೆಗೆ ನಮ್ಮ ಗುರುಗಳಾದ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳನ್ನು ಆಹ್ವಾನಿಸಿದರು. ಶ್ರೀಮದಾಚಾರ್ಯರು ಎಡನೀರು ಮಠಕ್ಕೆ ಹೋದಾಗ ಅಲ್ಲಿಯ ಮಠದವರು ವಿದ್ವತ್ಪ್ರೀತಿಯಿಂದ ಗೌರವವಾಗಿ ಸ್ವಾಗತಿಸಿದರು. ಆಚಾರ್ಯರು ಎಡನೀರು ಮಠಾಧೀಶರಿಂದ ಸನ್ಮಾನಿತರಾಗಿ ಅಂದಿನ ಸಭಾಧ್ಯಕ್ಷತೆಯನ್ನು ವಹಿಸಿದರು.

ತಸ್ಮಿನ್ ಶಂಕರದೇಶಿಕಸ್ಯ ಭಗವತ್ಪಾದಸ್ಯ ಜನ್ಮೋತ್ಸವೇ
ವ್ಯಾಖ್ಯಾಪೀಠಮಧಿಷ್ಠಿತೋಽಥ ಗುರುರಾಡದ್ವೈತತತ್ತ್ವನ್ಯಸಾ।
ವಿದ್ವತ್ತಾ ಪರಿಪೂರ್ಣಯಾ ನಿಜಗಿರಾ ಮಧ್ಯೇಸಭಂ ವಾಕ್ಯವಿತ್
ವ್ಯಾಚಕ್ರೇ ವಿಮಲಾನಿ ಚೌಪನಿಷದಾಂ ಸೈದ್ಧಾಂತಿಕಾನ್ಯಂಜಸಾ॥

ಶ್ರೀಮಚ್ಛಂಕರಭಗವತ್ಪಾದರ ಜನ್ಮೋತ್ಸವದ ಜಯಂತೀ ಸಭೆಯಲ್ಲಿ ಅಧ್ಯಕ್ಷ ಪೀಠದಲ್ಲಿ ಮಂಡಿಸಿದ ಶ್ರೀರಾಘವೇಂದ್ರ ಭಾರತೀಗಳು ಶ್ರೀಶಂಕರಾಚಾರ್ಯರ ಅದ್ವೈತ ಮತವನ್ನು ಕುರಿತು ಮಾತನಾಡಿರು. ವಾಕ್ಯಜ್ಞರಾದ ಶ್ರೀಮದಾಚಾರ್ಯರು ವಿದ್ವತ್ಪೂರ್ಣವಾದ ಶೈಲಿಯಲ್ಲಿ ಉಪನಿಷತ್ತಿನಲ್ಲಿ ಪ್ರತಿಪಾದಿಸಿದ, ನಿರ್ದೋಷವಾದ ಅದ್ವೈತ ಸಿದ್ಧಾಂತದ ತತ್ತ್ವಗಳನ್ನು ಬೋಧಿಸಿದರು,

**ಸರ್ವೇ ವೈದಿಕಧರ್ಮರಕ್ಷಣವಿಧೌ ಬದ್ಧಾದರಾಃ ಸ್ವಾತ್ಮನೋ**
**ವೈಮತ್ಯಂ ಪ್ರವಿಹಾಯ ಶಿಷ್ಯಜನತಾಶ್ರೇಯೋಽಭಿವೃದ್ಧ್ಯೈ ಚ**
**ಸದಾ ।**
**ಧರ್ಮಾಚಾರ್ಯಪದೇ ಸ್ಥಿತಾ ವಯಮಮೀ ತನ್ವೀಮಹಿ ಪ್ರಕ್ರಿಯಾಃ**
**ಪ್ರಾಚೀನಾರ್ಯಮತೇನ ಚೈಕಮತಯೋ ಭೂಯಾಸ್ಮ**
**ಸಂನ್ಯಾಸಿನಃ ॥ ೩೪**

ಎಲ್ಲರೂ ಸನಾತನ ವೈದಿಕಧರ್ಮ ರಕ್ಷಣಾಕಾರ್ಯದಲ್ಲಿ ಶ್ರದ್ಧೆಯಿಡಬೇಕು. ಧರ್ಮಾಚಾರ್ಯಪೀಠದಲ್ಲಿರುವ ನಾವು ನಮ್ಮ ನಮ್ಮ ಭಿನ್ನಾಭಿಪ್ರಾಯವನ್ನು ಬಿಟ್ಟು ಐಕಮತ್ಯದಿಂದ ಶಿಷ್ಯಜನತೆಯ ಶ್ರೇಯೋಭಿವೃದ್ಧಿಗಾಗಿ ಕಾರ್ಯ ತತ್ಪರರಾಗಬೇಕು. ಹಿಂದಿನ ಆಚಾರ್ಯರಾದ ಶ್ರೀಶಂಕರಭಗವತ್ಪಾದರೇ ಮುಂತಾದವರು ನಿರ್ದೇಶಿಸಿದ ಅಧ್ಯಾತ್ಮ ಮಾರ್ಗದಲ್ಲಿ ಸಂನ್ಯಾಸಿಗಳಾದ ಈ ನಾವುಗಳು ಏಕಾಭಿಪ್ರಾಯವುಳ್ಳವರಾಗಿ ನಾನಾ ವಿಧವಾದ ಆಧ್ಯಾತ್ಮಿಕ ಕಾರ್ಯಗಳನ್ನು ವಿಸ್ತರಿಸೋಣ,

**ಇತ್ಥಂ ಸಂಭೃತಸಮ್ಮುದೇ ಚ ಭಗವತ್ಪಾದಾರ್ಯಜನ್ಮೋತ್ಸವೇ**
**ತಸ್ಯಾಂ ಸಂಸದಿ ರಾಘವೇಂದ್ರ ಗುರುರಾಡಧ್ಯಾತ್ಮಪೀಠೇ ಸ್ಥಿತಃ ।**
**ಭಾಷಿತ್ವಾ ಸ್ಪೃಹಣೀಯಸಾಧುಚರಿತೋ ವಿದ್ವದ್ಭಿರಭ್ಯರ್ಚಿತ-**
**ಶ್ಚಾಶೀರ್ಭಿಸ್ಸಕಲಾನಸೌ ಸಹೃದಯಾನನ್ವಗ್ರಹೀದಂಜಸಾ ॥**

ಸಂತೋಷಭರಿತವಾದ ಶ್ರೀಶಂಕರಾಚಾರ್ಯರ ಜಯಂತೀ ಮಹೋತ್ಸವದಲ್ಲಿ ಆ ಸಭೆಯ ಅಧ್ಯಕ್ಷತೆಯನ್ನು ವಹಿಸಿದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಸಭಾಸದಸ್ಯರನ್ನು ಉದ್ದೇಶಿಸಿ ಹೀಗೆ ಮಾತನಾಡಿದರು ಬಳಿಕ ಎಲ್ಲರಿಗೂ ಬೇಕಾದವರೂ ಸಾಧು ನಡತೆಯುಳ್ಳವರೂ ಆದ ಸ್ವಾಮಿಗಳಿಗೆ ವಿದ್ವಾಂಸರೂ ಅಭಿವಂದಿಸಿದರು. ಬಳಿಕ ಗುರುಗಳು ವಿದ್ವಜ್ಜನರಿಗೂ ಸಾರ್ವಜನಿಕರಿಗೂ ಮಂತ್ರಾಕ್ಷತೆಯಿತ್ತು ಅನುಗ್ರಹಿಸಿದರು. ಸಭೆಯು ಮುಗಿಯಿತು.

ಆರ್ಯಸ್ಯಾಸ್ಯ ಪುರಾತನಾಸಿತಮಿದಂ ಹಸ್ತೀಂದ್ರದಂತೋದ್ಭವಂ
ಸರ್ವಾಂಗೀಣಕಲಾವಿತಾನಲಲಿತಂ ಚೇತಶ್ಚಮತ್ಕಾರಕಮ್ ।
ಶ್ರೀರಾಮಾಯಣಭಾರತೇತಿಹಕಥಾಕಾರ್ತ್ಸ್ನ್ಯೇನ ಚಿತ್ರೋಜ್ಜ್ವಲಂ
ಸರ್ವೇಷಾಂ ನಯನೋತ್ಸವಾಯ ನಿಹಿತಂ ಸಿಂಹಾಸನಂ ತತ್ತದಾ

ಈ ಗುರುಗಳ ಹಿಂದಿನ ಗುರುಗಳಾದ ಶ್ರೀರಾಮಚಂದ್ರಭಾರತೀಸ್ವಾಮಿಗಳು ಆರೋಹಣ ಮಾಡಿದ್ದ ಆನೆಯದಂತದಿಂದ ತಯಾರಿಸಿದ ಸಿಂಹಾಸನವನ್ನು ಎಲ್ಲರ ಕಣ್ಣಿನ ಹಬ್ಬಕ್ಕಾಗಿ ಇಲ್ಲಿ ಆಗ ಪ್ರದರ್ಶನದ ಬಗ್ಗೆ ಇಡಲಾಗಿತ್ತು. ಆ ಸಿಂಹಾಸನ ಅಪೂರ್ವವಾದುದು ಅದರ ಎಲ್ಲಾ ಭಾಗಗಳೂ ಕಲೆಯ ವಿತಾನದಿಂದ ಲಲಿತವಾಗಿವೆ ಅದರಲ್ಲಿ ಶ್ರೀರಾಮಾಯಣ ಮತ್ತು ಮಹಾಭಾರತದ ಇತಿವೃತ್ತದ ಕಥಾವಳಿಯ ಕಾರ್ತ್ಸ್ನ್ಯವನ್ನು ದಂತದಲ್ಲಿ ಚಿತ್ರಿಸಲಾಗಿದೆ. ಇದು ಚೇತೋವಿಸ್ಮಯಕರವಾದ ದಿವ್ಯ ನೋಟವಾಗಿದೆ.

ಜಾನೀಯುಃ ಕಥಮಸ್ಯ ದೀರ್ಘತಪಸೋ ಮಾಹಾತ್ಮ್ಯಮಸ್ಯಾದೃಶಂ
ಸಂನ್ಯಾಸಗ್ರಹಣಾಂಕುರಾರ್ಪಣದಿನಾದ್ಯಾರಭ್ಯ ಮೂಢಾ ಜನಾಃ
ಕೇಽಮನ್ಯಂತ ಬಲೇಃ ಪದತ್ರಯಮಿತಾಂ ಭೂಮಿಂ ತು ಗೃಹ್ಣನ್ ವಟುಃ
ವ್ಯಾಪ್ನೋತ್ಯೇವ ಜಗತ್ತ್ರಯೀಮಿತಿ ನರಾಸ್ತ್ರೈವಿಕ್ರಮೇ ಪ್ರಕ್ರಮೇ ॥ ೩೭

ದೀರ್ಘತಪಸ್ವಿಗಳಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳ ಸಂನ್ಯಾಸ ಸ್ವೀಕಾರದ ಅಂಕುರಾರ್ಪಣ ದಿವಸಗಳಿಂದ ಆರಂಭಿಸಿ, ಇಲ್ಲಿನವರೆಗೆಯ ಅಸದೃಶವಾದ ಮಹಿಮೆಯು ಪಾಮರಜನತೆಗೆ ಏನು ಗೊತ್ತು? ಬಲಿಚಕ್ರವರ್ತಿಯಿಂದ ವಾಮನ ವಟುವು ಮೂರುಹೆಜ್ಜೆ ಭೂಮಿ ಬೇಡಿ ತೆಗೆದುಕೊಳ್ಳುತ್ತಾ ಆ ತ್ರಿವಿಕ್ರಮ ಹೆಜ್ಜೆಯಲ್ಲಿ ಮೂರು ಲೋಕಗಳನ್ನು ವ್ಯಾಪಿಸುವನೆಂದು ಸಾಮಾನ್ಯ ಮಾನವರೇನು ಬಲ್ಲರು?

ಶಿಷ್ಯಾಃ ಕೇಚನ ವೈದಿಕಾ ಗೃಹಿಜನಾ ಗೋಕರ್ಣನಾಥಾಲಯೇ-
ಪ್ರಖ್ಯಾಃ ಸತ್ವರಮೇತ್ಯ ರಾಘವಗುರುಂ ಕೆಕ್ಕಾರುಶಾಖಾಮಠೇ
ಸೋಽಪಗ್ರಾಹ್ಯಮಥಾಭಿವಂದ್ಯ ಸುಧಿಯಃ ಸ್ವಾಭೀಪ್ಸಿತಂ ಯೋಗಿನೇ
ವಾಕ್ಯಜ್ಞಾಃ ಶ್ರುತಿಪಾರಗಾಯ ಗುರವೇ ವ್ಯಜ್ಞಾಪಯನ್ ಸಾಂಜಲಿ ॥ ೩೮

ಒಂದುಸಲ ಗೋಕರ್ಣ ಕ್ಷೇತ್ರದ ಪ್ರಮುಖರೂ ಶಿಷ್ಯರೂ ಆದ ಕೆಲವು ವೈದಿಕರೂ ಗೃಹಸ್ಥರೂ ಹೊನ್ನಾವರ ತಾಲ್ಲೂಕಿನ ಕೆಕ್ಕಾರಿನಲ್ಲಿರುವ ರಘೂತ್ತಮ ಮಠಕ್ಕೆ ಧಾವಿಸಿ ಬಂದರು. ಫಲಪುಷ್ಪಕಾಣಿಕೆ ಹಸ್ತರಾದ ಅವರು ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳನ್ನು ಸಂದರ್ಶಿಸಿ ವಂದಿಸಿದರು. ವಿದ್ವಾಂಸರೂ, ವಾಕ್ಯಜ್ಞರೂ ಆದ ಅವರು ಯೋಗಿಗಳೂ ವೇದವಿದ್ಯಾಪಾರಂಗತರೂಆದ ಗುರುಗಳ ಸನ್ನಿಧಿಯಲ್ಲಿ ಕೈಮುಗಿದು ಮುಂದೆ ಹೇಳಿದಂತೆ ತಮ್ಮ ಕೋರಿಕೆಯನ್ನು ಬಿನ್ನವಿಸಿದರು.

ಕೈಲಾಸಪ್ರಿಯತಾಂ ವಿಹಾಯ ಪುರಭಿದ್ಭಕ್ತೇಷ್ಟ ಕಲ್ಪದ್ರುಮೋ
ನಿತ್ಯಂ ಸನ್ನಿಹಿತೋಽತ್ರ ಗೋಶ್ರುತಿಪುರೇ ಗೋಬ್ರಾಹ್ಮಣ
ಶ್ರೇಯಸೇ ।
ತಸ್ಯೈತಸ್ಯ ಕೃಪಾಲವಾದ್ವಯಮಮೀ ಸಂಸಾರಿಣಃ ಸಾಂಪ್ರತಂ
ನೀರೋಗಾ ನಿರುಪದ್ರವಾಶ್ಚ ಸುಖಿನೋ ಯುಷ್ಮಾಕಮಾಶೀ
ರ್ಬಲಾತ್ ॥ ೩೯

ಗುರುಗಳೇ ! ಭಕ್ತರ ಇಷ್ಟಾರ್ಥಸಲ್ಲಿಸುವ ಕಲ್ಪವೃಕ್ಷವಾದ ಪರಮೇಶ್ವರನು ಕೈಲಾಸದಮೇಲಿನ ಪ್ರೀತಿಯನ್ನು ತ್ಯಜಿಸಿ, ಗೋಬ್ರಾಹ್ಮಣರ ಶ್ರೇಯಸ್ಸಿಗಾಗಿ ಗೋಕರ್ಣ ಕ್ಷೇತ್ರದಲ್ಲಿ ಯಾವಾಗಲೂ ಸನ್ನಿಹಿತನಾಗಿರುವನು. ಆ ಮಹಾನುಭಾವನ ಕೃಪಾಲೇಶದಿಂದ ಮತ್ತು ತಮ್ಮ ಆಶೀರ್ವಾದದ ಬಲದಿಂದಲೂ ಸಂಸಾರಿಗಳಾದ ನಾವು ಈಗ ರೋಗಹೀನರೂ ಉಪದ್ರವಶೂನ್ಯರೂ ಆಗಿ ಸುಖಿಗಳಾಗಿರುತ್ತೇವೆ.

ಕಿಂತು ಪ್ರಾಕ್ತನಕಾಲತೋಽದ್ಯ ವಿಹಿತಾದ್ ರುದ್ರಾಭಿಷೇಕಾರ್ಚನಾತ್
ಪೀಠೇಷ್ವಗ್ರಿಮಬಂಧನಾದಿಶಿಥಿಲಂ ಜಾತಂ ನ ತಚ್ಛರ್ಮಣೇ ।
ಭೂಯೋಽದಿತ್ಯವಗತ್ಯ ಲಿಂಗವಪುಷೋ ದೇವಸ್ಯ ಪೀಠಾದಿಕೇ
ಶಾಸ್ತ್ರಜ್ಞಾಃ ಪುನರಷ್ಟಬಂಧವಿಧಿನಾ ಸಂಸ್ಕಾರಮಾಚಕ್ಷತೇ ॥ ೪೦

ಆದರೆ, ಬಹುಹಿಂದಿನ ಕಾಲದಿಂದ ಈವರೆಗೂ ಮಾಡಿದ ರುದ್ರಾಭಿಷೇಕದ ಪೂಜಾದಿಗಳಿಂದ ಸ್ವಾಮಿಯ ಸಾಲಿಗ್ರಾಮ ಪೀಠಗಳಲ್ಲಿ ಮೇಲಣ ಅಷ್ಟಬಂಧಾದಿಗಳು ಸಡಿಲವಾಗಿ, ಪೀಠದಲ್ಲಿ ನೀರು ಹೊರಕ್ಕೆ ಹೋಗಲು ಅವಕಾಶವಿಲ್ಲದೆ ನೀರುನಿಂತು ಕಶ್ಮಲವಾಗಿ ಕ್ರಿಮಿಗಳು ಉಂಟಾದರೆ ಪೀಠವು ಅಶುದ್ಧವಾಗುವುದು. ಅಶುದ್ಧವಾದುದನ್ನು ಶುದ್ಧೀಕರಿಸದೇ ಇರುವುದರಿಂದ ಭಕ್ತರಿಗೆ ಸುಖವಾಗಲಾರದು, ಎಂದು ತಿಳಿದು ಆಗಮಶಾಸ್ತ್ರಜ್ಞರಾದ ವೈದಿಕರು ಮಹಾಬಲ ಲಿಂಗರೂಪವಾದ ದೇವರ ಪೀಠಾದಿಗಳನ್ನು ಮತ್ತೆ ಅಷ್ಟಬಂಧ ವಿಧಾನದಿಂದ ಸಂಸ್ಕರಿಸಬೇಕೆಂದು ಹೇಳುತ್ತಿದ್ದಾರೆ.

ವಾಂಛಾವೇಶೋಽದ್ಯ ಯೋಽಭಾಗನುಂ ಭಗವತಃ ಕರ್ತುಂ ಭವತ್ಸನ್ನಿಧೌ
ಗೋಕರ್ಣೇಶಿತುರಷ್ಟಬಂಧಘಟಿತಂ ಪೀಠಪ್ರತಿಷ್ಠಾಪನಮ್ ।
ಗೋಕರ್ಣೀಯಮುತಾಗ್ನಿನಾಥ ದಯಯಾ ಸಂಮಾನ್ಯತಾಂ
ಪ್ರಾರ್ಥನಾ
ಹಂಸೈಃ ಪದ್ಮಸರಾಂಸಿ ಭಾಂತು ನಿತರಾಂ ಸದ್ಮಾನಿ ಸದ್ಭಿಶ್ಚ ನಃ ॥

ಓ ಗೋಕರ್ಣಮಂಡಲಾಚಾರ್ಯರೇ! ತಮ್ಮ ಸನ್ನಿಧಿಯಲ್ಲಿ ಗೋಕರ್ಣನಾಥನಾದ ಶ್ರೀಮಹಾಬಲೇಶ್ವರಸ್ವಾಮಿಯ ಅಷ್ಟಬಂಧನಹಿತವಾದ ಪೀಠಪ್ರತಿಷ್ಠಾಪನೆಯನ್ನು ಆಗಮ ಶಾಸ್ತ್ರದ ಅನುಸಾರವಾಗಿ ಮಾಡಲು ನಾವು ಬಯಸಿದ್ದೇವೆ ತಾವು ಕೃಪೆ ಯಿಂದ ನಮ್ಮ ಪ್ರಾರ್ಥನೆಯನ್ನು ಸಫಲಗೊಳಿಸಬೇಕು ಹಂಸಗಳಿಂದ ಕಮಲ ಸರೋವರಗಳು ಕಂಗೊಳಿಸಲಿ ಸಜ್ಜನರಿಂದ ನಮ್ಮ ಮನೆಗಳು ಶೋಭಿಸಲಿ

ಇತ್ಯಭ್ಯರ್ಥನಯಾ ಪ್ರಸನ್ನಹೃದಯಃ ಸ್ವೀಕೃತ್ಯ ತತ್ ಪ್ರಾರ್ಥನಾಂ
ಗೋಕರ್ಣಾಭಿಮುಖೋ ಜಗಾಮ ಸಹನಾಚಾರ್ಯಃ ಸ
ಶಿಷ್ಯೈಃಸಹ ।
ಪೌರೈಃ ಸ್ವಾಗತಿಕೈಃ ಸಪೂರ್ಣಕಲಶೈರಭ್ಯುತ್ಥಿತಃ ಸನ್ ಪುರ-
ದ್ವಾರೇ ಸ್ವಾಗತಮಾದದತ್ ಪರಿಯಯೌ ಗೋಕರ್ಣ
ನಾಥಾಲಯಮ್ ॥ ೪೨

ಈ ರೀತಿಯಾದ ಶಿಷ್ಯರ ಬೇಡಿಕೆಯಿಂದ ಪ್ರಸನ್ನ ಚಿತ್ತರಾದ ಗುರುಗಳು ಅವರ ಕೋರಿಕೆಯನ್ನು ಒಪ್ಪಿಕೊಂಡು, ಕೂಡಲೇ ಶಿಷ್ಯರೊಡಗೂಡಿ ಗೋಕರ್ಣಕ್ಕೆ ಪ್ರಯಾಣಮಾಡಿದರು ಗೋಕರ್ಣದ ಪುರದ್ವಾರದಲ್ಲಿ ಪೂರ್ಣಕುಂಭದೊಡನೆ ಸ್ವಾಗತಹೇಳಲು ತೊಡಗಿದ್ದ ಪಟ್ಟಣಪದವರಿಂದ ಎದುರುಗೊಳ್ಳಲ್ಪಟ್ಟ ಆಚಾರ್ಯರು ಅವರು ಮಾಡಿದ ಸ್ವಾಗತವನ್ನು ಸ್ವೀಕರಿಸುತ್ತ ಮಹಾಬಲೇಶ್ವರ ಸ್ವಾಮಿಯ ದೇವಾ ಲಯಕ್ಕೆ ಹೋದರು.

ರಾಧೇ ಪೂರ್ಣಿಮಯಾಯುತೇಽಹ್ನಿ ರುಧಿರೋದ್ಗಾರ್ಯಾಹ್ವಯೇ
ಹಾಯನೇ
ಮಾಂಗಲ್ಯೇ ಗುರುವಾಸರೇ ಕಿಲ ಪುನಃ ಪೀಠಪ್ರತಿಷ್ಠಾಪನಮ್।
ದೇವಸ್ಯಾತ್ರ ಮಹಾಬಲೇಶಿತುರಯಂ ಗೋಕರ್ಣ ಪೀಠಾಧಿಪೋ
ಭಾರತ್ಯುತ್ತರ ಶಬ್ದಭಾಗಕುರುತ ಶ್ರೀರಾಘವೇಂದ್ರೋ ಯತಿಃ ॥

ಶಾಲಿವಾಹನಶಕವರ್ಷ ೧೯೦೬ನೆಯ ರುಧಿರೋದ್ಗಾರಿ ಸಂವತ್ಸರದ ವೈಶಾಖ ಶುಕ್ಲ ಪೂರ್ಣಿಮಾ ಗುರುವಾರ ಮಂಗಳಕರವಾದ ಮುಹೂರ್ತದಲ್ಲಿ ಗೋಕರ್ಣದ ರಘೂತ್ತಮ ಪೀಠಾಧೀಶರಾದ ಜಗದ್ಗುರು ಶಂಕರಾಚಾರ್ಯ ಶ್ರೀರಾಘವೇಂದ್ರ ಭಾರತೀಸ್ವಾಮಿಗಳು ಗೋಕರ್ಣ ಕ್ಷೇತ್ರಾಧಿದೈವತವಾದ ಶ್ರೀಮಹಾಬಲೇಶ್ವರ ಸ್ವಾಮಿಯ ಪೀಠದ ಪುನಃ ಪ್ರತಿಷ್ಠೆಯನ್ನು ಆಗಮಶಾಸ್ತ್ರಾನುಸಾರವಾಗಿ ನೆರವೇರಿಸಿದರು.

**ಗೋಕರ್ಣೇಶ್ವರಮೀಶ್ವರಂ ಶಶಿಧರಂ ಗಂಗಾಧರಂ ಶಂಕರಂ**
**ಪಾರೇವಾರಿಧಿ ವಾರಣೇಂದ್ರವದನೇನಾದೌ ಪ್ರತಿಷ್ಠಾಪಿತಮ್ ।**
**ಲಂಕಾಭರ್ತುರಪಾರಶೌರ್ಯಜಲಧೇರ್ದೋರ್ದಂಡದರ್ಪಾಪಹಂ**
**ನಿಸ್ಸಂಗಂ ಸ ಜಗೌ ಮಹಾಬಲಮುಮಾಸಂಗೈಕಶೃಂಗಾರಿಣಮ್॥**

ಒಳಿಕೆ ಗೋಕರ್ಣಕ್ಷೇತ್ರಕ್ಕೆ ಅಧೀಶ್ವರನೂ ಚಂದ್ರಶೇಖರನೂ ಗಂಗೆಯನ್ನು ಮುಡಿಯಲ್ಲಿ ಸೂಡಿದವನೂ ಮಂಗಳಕರನೂ ಅಪಾರಶೌರ್ಯಸಮುದ್ರನಾದ ಲಂಕೇಶ್ವರನಾದ ರಾವಣನ ನಿಡುದೋಳುಗಳ ಸೊಕ್ಕನ್ನು ಅಡಗಿಸಿದವನೂ ಸಂಗರಹಿತನಾದರೂ ಉಮಾಸಂಗೈಕರಸಿಕನೂ ಸಮುದ್ರತೀರದಲ್ಲಿ ಹುಟ್ಟಮೊದಲು ವಿನಾಯಕನಿಂದ ಪ್ರತಿಷ್ಠಿತನೂ ಆಗಿರುವ ಶ್ರೀಮಹಾಬಲನೆಂದು ಹೆಸರು ಪಡೆದ ಪರಮೇಶ್ವರನನ್ನು ಆಚಾರ್ಯರು ಸ್ತುತಿಸಿದರು.

**ಆಚಾರ್ಯೋ ವಿಧಿಪೂರ್ವಕಂ ಭಗವತಃ ಪೀಠಪ್ರತಿಷ್ಠಾಪನಂ**
**ಕೃತ್ವಾ ತೇಷು ಮಹಾಜನೇಷು ಕುಮುದೇಷ್ವಿಂದೋಃ ಶ್ರಿಯಂ**
**ಬಿಭ್ರತಿ ।**
**ಭಕ್ತಾಭೀಪ್ಸಿತವರ್ಷಿಣೀ ಗುರುಮುಖಾತ್ತಾಪತ್ರಯೋನ್ಮೂಲಿನೀ**
**ಶೀತಾದ್ರೇರಘನಾಶಿನೀ ತ್ರಿಪಥಗೇವಾಶೀಃ ಸಮುಜ್ಜೃಂಭಿತಾ ॥**

ಸ್ವಾಮಿಗಳು ವಿಧಿವತ್ತಾಗಿ ಗೋಕರ್ಣ ಕ್ಷೇತ್ರದ ಮಹಾಬಲೇಶ್ವರಸ್ವಾಮಿಯ ಪೀಠ ಪ್ರತಿಷ್ಠೆಯನ್ನು ನೆರವೇರಿಸಿ, ಅಲ್ಲಿ ನೆರೆದಿದ್ದ ಮಹಾಜನರೆಂಬ ಕನ್ನೈದಿಲೆಗಳ ವಿಷಯದಲ್ಲಿ ಚಂದ್ರನಕಾಂತಿಯನ್ನು ಧರಿಸಿರಲು (ಅಂದರೆ ಚಂದ್ರನಿಂದ ಕನ್ನೈದಿಲೆಗಳು ನಲಿಯುವಂತೆ ಆಚಾರ್ಯರಿಂದ ಮಹಾಜನರು ಸಂತುಷ್ಟರಾಗಲು) ಭಜಕರ ಇಷ್ಟಾರ್ಥಗಳನ್ನು ಮಳೆಗರೆಯುವ. ತಾಪತ್ರಯಗಳನ್ನು ಹೋಗಲಾಡಿಸುವ. ಆಶೀರ್ವಾದ ವಾಗ್ಧಾರೆಯು ಹಿಮಾಲಯದಿಂದ ಹೊರಹೊಮ್ಮಿದ ಅಘನಾಶಿನಿಯಾದ ಭಾಗೀರಥಿಯಂತೆ ಗುರುಗಳ ಮುಖದಿಂದ ಪ್ರಕಾಶಗೊಂಡಿತು.

ದೈವಸ್ಥಾನಿಕಮಾಧಿಕಾರಿಕಮುಖೋ ಧುರ್ಯಂ ಜನಂ ಸ್ವಾನುಗಂ
ಪ್ರಾಚಾರ್ಯೈಃ ಸ ನಿವರ್ತ್ಯ ಶಿಷ್ಯಸಹಿತಃ ಕೆಕ್ಕಾರುಸಂಸ್ಥಂ
ಮಠಮ್ ।
ಪ್ರಾಪ್ತಸ್ತತ್ರ ಸಮಾಹಿತೇನ ಮನಸಾ ಸಾಯಂತನೀಃ ಪ್ರಕ್ರಿಯಾಃ
ಕೃತ್ವಾ ಸಂತತಚಿಂತಿತಾರ್ಥವರದಂ ರಾಮಂ ನಿದಧ್ಯೌ ಚಿರಮ್ ॥

ಬಳಿಕ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಗೋಕರ್ಣದಿಂದ ಹೊರಟರು ಅವರು ತಮ್ಮನ್ನು ಹಿಂಬಾಲಿಸಿದ ದೇವಸ್ಥಾನದ ಮುಖ್ಯಸ್ಥರನ್ನೂ ಸರ್ಕಾರದ ಅಧಿಕಾರ ಪ್ರಮುಖರನ್ನೂ ಸಹ ಮಾತನಾಡಿಸಿ ಹಿಂದಕ್ಕೆ ಕಳುಹಿಸಿ, ತಾವು ಶಿಷ್ಯಸಹಿತ ರಾಗಿ ಕೆಕ್ಕಾರಿನಲ್ಲಿರುವ ಮಠಕ್ಕೆ ತಲುಪಿದರು ಬಳಿಕ ಅತ್ಯಂತ ಏಕಾಗ್ರಮನಸ್ಸಿನಿಂದ ಸಾಯಂಕಾಲ ಮಾಡತಕ್ಕ ಸ್ನಾನಪೂಜಾದಿಕಾರ್ಯಕಲಾಪಗಳನ್ನು ನೆರವೇರಿಸಿ ಯಾವಾಗಲೂ ಚಿಂತಿಸಿದ ಇಷ್ಟಾರ್ಥರೂಪವಾದ ವರವನ್ನು ಅನುಗ್ರಹಿಸುವ ಶ್ರೀರಾಮನನ್ನು ಚಿರಕಾಲ ಧ್ಯಾನಿಸಿದರು.

ಶ್ರೀವಿಶ್ವೇಶಸುತೀರ್ಥಪಾದಯತಿನಃ ಶ್ರೀರಾಘವೇಂದ್ರೇ ಯತಾ-
ವವ್ಯಾಜಪ್ರತಿಪನ್ನಗೌರವಧಿಯಃ ಪರ್ಯಾಯ ದಿವ್ಯೋತ್ಸವೇ ।
ಈಪ್ಸಿತ್ವಾಗಮನಂ ಗುರೋರುಡುಪಿಸುಕ್ಷೇತ್ರೇ ಚ ವಾರ್ತಾಹರಂ
ಪ್ರಾಹಿಣ್ವನ್ ಪ್ರತಿವತ್ಸರಂ ಕೃತಧಿಯಃ ಸಂತೋ ಹಿ
ನಿರ್ಮತ್ಸರಾಃ ॥ ೪೭

ಶ್ರೀಮದ್ರಾಮಚಂದ್ರಾಪುರದ ಮಠಾಧೀಶರಾದ, ಜಗದ್ಗುರುಶಂಕರಾಚಾರ್ಯ ಶ್ರೀರಾಘವೇಂದ್ರಭಾರತೀ ಗುರುಗಳ ಮೇಲೆ ಸಹಜವಾಗಿಯೇ ಗೌರವ ಬುದ್ಧಿಯಿಟ್ಟಿ ರುವ, ಉಡುಪಿಯ ಮಾಧ್ವಮಠಗಳಯತಿಗಳೊಳಗೆ ಒಬ್ಬರಾದ ಪೇಜಾವರಮಠದ ಅಧೀಶರಾದ ಶ್ರೀಮದ್ವಿಶ್ವೇಶ ತೀರ್ಥಪಾದಂಗಳವರು ಪ್ರತಿವರ್ಷವೂ ತಮ್ಮ ಮಠ ದಲ್ಲಿ ನಡೆಯುವ ಪರ್ಯಾಯ ದಿವ್ಯೋತ್ಸವಕ್ಕಾಗಿ ಉಡುಪಿ ಕ್ಷೇತ್ರಕ್ಕೆ ದಯಮಾಡಿ ಬರಬೇಕೆಂದು ಶ್ರೀರಾಘವೇಂದ್ರಭಾರತೀಸ್ವಾಮಿಗಳಿಗೆ ಸಂದೇಶವನ್ನು ಕಳುಹಿಸು ತ್ತಿದ್ದರು ಕರ್ತವ್ಯಾಂಶದಲ್ಲಿ ನಿರ್ಣಯಬುದ್ಧಿಯುಳ್ಳ ವಿದ್ವಾಂಸರಿಗೆ ಅಸೂಯೆ ಬರುವುದಿಲ್ಲವಷ್ಟೆ

ದಿಙ್ಮಾತಂಗಬಲಗ್ರಹೇಂದುಸುಮಿತೇ ಸಂವತ್ಸರೇ ಕ್ರೋಧನೇ
ಮಾರ್ಗೇ ಮಾಸ್ಯಸಿತೇ ದಲೇ ಶನಿದಿನೇ ಚಾದ್ಯೇ ತಿಥೌ ದೇಶಿಕಃ
ಸಾರ್ಧಂ ಶಿಷ್ಯಜನೇನ ಸಂಭ್ರಮವತಾ ಪೇಜಾವರಸ್ವಾಮಿನಾ-
ಮಾಹ್ವಾನಂ ಬಹುಮಾನಯಂಸ್ತದುಡುಪಿಕ್ಷೇತ್ರಂ ಪ್ರತಸ್ಥೇ
ಮುದಾ ॥ ೪೮

ಶಾಲಿವಾಹನಶಕ ೧೯೦೮ನೆಯ ಕ್ರೋಧನ ಸಂವತ್ಸರದ ಮಾರ್ಗಶೀರ್ಷ ಮಾಸದ ಕೃಷ್ಣಪಕ್ಷದ ಪ್ರತಿಪದಿ ಶನಿವಾರ ತಾರೀಖು 28-2-1985ನಯಂದು ದಿನ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳು ಉತ್ಸಾಹಿ ಶಿಷ್ಯಜನರೊಂದಿಗೆ ಉಡುಪಿ ಪೇಜಾವರಮಠಾಧೀಶರಾದ ಶ್ರೀಮದ್ವಿಶ್ವೇಶತೀರ್ಥರ ಆಹ್ವಾನವನ್ನು ಪುರಸ್ಕರಿಸಿ ಉಡುಪಿ ಕ್ಷೇತ್ರಕ್ಕೆ ಸಂತೋಷದಿಂದ ಪ್ರಯಾಣಮಾಡಿದರು.

ವಿದ್ವಾಂಸೋ ವ್ಯವಹಾರಕರ್ಮಕುಶಲಾ ಆರಕ್ಷಕಾಃ ಶ್ರೋತ್ರಿಯಾಃ
ವಸೌಲಾಃ ಸೀಮಧುರಂಧರಾಃ ಪರಿಜನಾಃ ವಿದ್ಯಾರ್ಥಿನೋ
ಭಾವುಕಾಃ ।
ಯಾನೈಃ ಷೋಡಶಕೈಃ ಸತೈಲಶಕಟೈಶ್ಚೇತೋಹರೈಃ ಕೌತುಕಾ-
ದನ್ವೀಯುರ್ಗುರುರಾಜಮಾಹಿತರಸಾಸ್ತೀರ್ಥಾಧಿರಾಜಾತ್ಪುರಾತ್

ಲೌಕಿಕವಿದ್ಯಾಪರಿಣಿತರು, ವ್ಯವಹಾರ ಚತುರರು, ಆರಕ್ಷಕವರ್ಗದವರು, ವೈದಿಕರು ಆಪ್ತರು. ಆಯಾ ಸೀಮೆಯ ಮುಖ್ಯರು (ಮುಖಂಡರು) ಸೇವಕರು, ವಿದ್ಯಾರ್ಥಿಗಳು ಸಾಹಿತಿಗಳು ಮುಂತಾದ ಇವರು ಸುಪ್ರೀತರಾಗಿ. ಮನೋಹರ ವಾದ ಹದಿನಾರು ಮೋಟಾರುವಾಹನಗಳಲ್ಲಿ ಆರೂಢರಾಗಿ ಕುತೂಹಲದಿಂದ ಶ್ರೀ ಗುರುವರ್ಯರನ್ನು ಹಿಂಬಾಲಿಸಿ ತೀರ್ಥಹಳ್ಳಿ ನಗರದಿಂದ ಹೊರಟರು.

ಅಸ್ತಾದ್ರೇಃ ಶಿಖರಂ ಗತೇ ದಿನಕರೇ ತಾರಾಪಥೇ ಲೋಹಿತೇ
ಪೌರಾನ್ ಪ್ರೇರಯತಿ ಕ್ಷಣಾರ್ಥಮಟಿತುಂ ಸಾಯಂತನೇ
ಮಾರುತೇ ।
ಸಕ್ತೇ ಸ್ವಾಗತಮಾಗತಾಯ ಗುರವೇ ಕರ್ತುಂ ಚ ಸಾಮಾಜಿಕೇ
ಪ್ರಾಪತ್ ಕೃಷ್ಣನಿವಾಸಪೂತನಗರಂ ಶ್ರೀರಾಘವೇಂದ್ರೋ
ಗುರುಃ ॥ ೫೦

ಸೂರ್ಯನು ಪಡುವಣ ಬೆಟ್ಟದ ತುದಿಗೇರುತ್ತಿರಲು, ಆಕಾಶವು ಕಸುಗೆಂಪೇರಲು, ಸಂಜೆಯ ಗಾಳಿಯು ಕೊಂಚಕಾಲ ಹೊರಸಂಚಾರಕ್ಕಾಗಿ ಪಟ್ಟಣಿಗರನ್ನು ಪ್ರೇರಿಸುತ್ತಿರಲು, ಆಗಮಿಸುವ ಗುರುಗಳ ಸ್ವಾಗತಕ್ಕಾಗಿ ಸಾಮಾಜಿಕರು ಸಜ್ಜಾಗುತ್ತಿರಲಾಗಿ, ಸಕಲ ಶಿಷ್ಯ ಪರಿವಾರದೊಂದಿಗೆ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಶ್ರೀಕೃಷ್ಣನ ದಿವ್ಯ ಸನ್ನಿಧಿಯಿಂದ ಪವಿತ್ರವಾದ ಉಡುಪಿನಗರಕ್ಕೆ ತಲುಪಿದರು.

ತಸ್ಮಿನ್ ಕುಂಜರ ಪೂರ್ಣಕುಂಭಸಹಿತಸ್ತೌರ್ಯತ್ರಿಕಾನಂದಿತೋ
ವಿದ್ವದ್ವೈದಿಕವೇದಘೋಷಮಧುರೋ ವ್ಯಾಕೀರ್ಣಲಾಜಾಕ್ಷತಃ
ಮಾಧ್ವಾಚಾರ್ಯಪುರಸ್ಕೃತಃ ಸುಮನಸಾಂ ಕೌತೂಹಲೋತ್ಪಾದಕಃ
ಪ್ರೇಂಘೇ ಸ್ವಾಗತಿಕೋತ್ಸವಃ ಖಲು ಗುರೋಃ
ಶ್ರೀರಾಘವೇಂದ್ರಸ್ಯ ನಃ ॥ ೫೧

ಆ ಉಡುಪಿಯಲ್ಲಿ ನಮ್ಮ ಗುರುವರ್ಯರಾದ ಶ್ರೀರಾಘವೇಂದ್ರಭಾರತೀ ಸ್ವಾಮಿಗಳಿಗೆ ನೀಡಿದ ಸ್ವಾಗತೋತ್ಸವವು ವಿಶೇಷ ರೀತಿಯದಾಗಿ ಮೆರೆಯಿತು. ಅಂದು ಉಡುಪಿಯ ಮಾಧ್ವಮರೀಯರು ಆನೆ, ವಾದ್ಯಘೋಷ, ಮಕರತೋರಣ ಮುಂತಾದ ಮರ್ಯಾದೆಗಳೊಂದಿಗೆ ಗುರಗಳನ್ನು ಎದುರುಗೊಂಡರು. ಶ್ರೀಮದ್ವಿಶ್ವೇಶತೀರ್ಥಪಾದಂಗಳವರು ಸ್ವತಃ ಎದುಗೊಂಡು ಸ್ವಾಗತಿಸಿದರು ಆ ಉತ್ಸವದಲ್ಲಿ ವೈದಿಕರು ಸುಸ್ವರವಾಗಿ ವೇದಘೋಷಮಾಡಿದರು. ನೃತ್ಯ ಗೀತಸಹಿತವಾಗಿ ವಾದ್ಯಗಳು ಮೊಳಗಿದುವು. ಕುಮಾರಿಜನರು ಆರಳು ಚೆಲ್ಲಿದರು. ವಿದ್ವಾಂಸರು ಕುತೂಹಲಭರಿತರಾದರು ಹೆಚ್ಚೇನಂ! ದೇವಲೋಕದವರೂ ಬೆಕ್ಕಸಬೆರಗಾದರು.

ದ್ವೈತಾದ್ವೈತಮತೀಯಯೋಮುನಿನಾಮನ್ಯೋನ್ಯಸಂಮೇಲನಂ
ಚಿತ್ರೀಭೂತಮಭೂತಪೂರ್ವಮುಡುಪಿಕ್ಷೇತ್ರೇ ಪ್ರವೃತ್ತಂ
ಚಿರಾತ್ ।
ಯಸ್ಮಾದಾದಿಮಶಂಕರಾರ್ಯಸದೃಶಂ ಶ್ರೀರಾಘವೇಂದ್ರಂ ಗುರುಂ
ವಿಶ್ವೇಶಃ ಸ್ವಯಮಭ್ಯಯಾದ್ಯತಿರಸಾವಾನಂದತೀರ್ಥೋಪಮಃ॥

ಇದು ದ್ವೈತಾದ್ವೈತದರ್ಶನಗಳ ಸಿದ್ಧಾಂತಗಳನ್ನು ಬೋಧಿಸುವ ಉಭಯ ಮಠಗಳ ಆಚಾರ್ಯರು ಒಬ್ಬರಿಗೊಬ್ಬರು ಇಂದು ಇಲ್ಲಿ ಸೇರಿರುವರು. ಇಂತಹ ಸಂಮೇಳನ ಹಿಂದೆ ಇಲ್ಲಿ ಆಗಿರಲಿಲ್ಲ ಆಶ್ಚರ್ಯಕರವಾದ ಈ ಸಮ್ಮೇಳನ ಉಡುಪಿಯಲ್ಲಿ ಬಹುಕಾಲದಮೇಲೆ ಘಟಿಸಿತು. ಇದು ಆಶ್ಚರ್ಯ. ಏಕೆಂದರೆ, ಆದ್ಯ ಶ್ರೀಶಂಕರಾಚಾರ್ಯರಿಗೆ ಸದೃಶರಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳವರನ್ನು ಶ್ರೀಮದಾನಂದತೀರ್ಥರಿಗೆ ಸರಿಮಿಗಿಲಾದ ಉಡುಪಿ ಪೇಜಾವರ ಮಠಾಧೀಶರಾದ ಶ್ರೀವಿಶ್ವೇಶತೀರ್ಥಪಾದಂಗಳವರು ಖುದ್ದಾಗಿ ಎದುಗೊಂಡು ಸ್ವಾಗತಿಸಿದರು

ಸೋಽಯಂ ಕೃಷ್ಣಮಠಂ ಪ್ರದೋಷಸಮಯೇ ವಿದ್ಯುತ್ಪ್ರದೀಪಾಂಕುರೈ
ಸ್ತಾರಾಮೌಕ್ತಿಕಕುಡ್ಮಲೈರಿವ ತತಂ ಲಕ್ಷ್ಮೀವಿಲಾಸಾಸ್ಪದಮ್ ।
ಕೃಷ್ಣೋತ್ಕೃಷ್ಟಕಥಾನಿಪಾನಭವನಂ ಸಾಮಾಜಿಕೈರ್ಮೇದುರಂ
ಪ್ರಾವಿಕ್ಷದ್ಯತಿರಾಟ್ ತದೀಯಯತಿಭಿಃ ಸಾಕಂ ಸುಧರ್ಮೋ-
ಪಮಮ್ ॥ ೫೩

ಅಂದು ಮುಚ್ಚಂಜೆಯ ಹೊತ್ತಿಗೆ ಗುರುಗಳು ಆ ಮಠದ ಯತಿವರ್ಯರೊಡನೆ
ಸುಧರ್ಮಾವಸದೃಶವಾದ ಶ್ರೀಕೃಷ್ಣಮಠದ ಸಭಾಂಗಣದ ಒಳಹೊಕ್ಕರು, ಅದು
ನಕ್ಷತ್ರಗಳು, ಮುತ್ತಿನಮೊಗ್ಗುಗಳು ಇವುಗಳಂತಿರುವ ವಿದ್ಯುದ್ದೀಪಗಳಿಂದವ್ಯಾಪ್ತವಾ
ವಾಗಿದ್ದಿತ್ತು. ಲಕ್ಷ್ಮೀವಿಲಾಸಾಶ್ರಯವಾದ (ವೈಭವದ ಉಪಕರಣಗಳಿಂದ
ಶೋಭಿಸುವ, ಲಕ್ಷ್ಮೀದೇವಿಯ ವಿಲಾಸಭವನವೆನಿಸಿದ) ಆ ಸಭಾಂಗಣವು ಶ್ರೀಕೃಷ್ಣನ
ಉತ್ತಮೋತ್ತಮವೂ ಕರ್ಣಾನಂದಕರವೂ ಆದ ಜನ್ಮಕಥಾಮೃತಪಾನದ ಭವನ
ವಾಗಿ, ಸಾಮಾಜಿಕರಿಂದ ಕಿಕ್ಕಿರಿದು ತುಂಬಿತ್ತು.

**ಅನ್ಯೋನ್ಯೈಃ ಸವಿಶೇಷಗೌರವವಚಃ ಶ್ಲಾಘ್ಯೈಃ ಪ್ರಿಯಂ ಭಾವುಕೈಃ**
**ವ್ಯಾಪಾರೈರಿಹ ಪಂಡಿತಾನಧಿಸಭಂ ವಿಸ್ಮಾಪಯಂತೀ ಮುಹುಃ ।**
**ಭೇದಾಭೇದವಿರೋಧಿಶಾಸ್ತ್ರವಚಸಾಂ ತಾತ್ಪರ್ಯಮಾತ್ಯಂತಿಕಂ**
**ವ್ಯಾಖ್ಯಾಂತ್ಯೇಕಫಲಾಶ್ರಯಂ ವಿರುರುಚೇ ಪ್ರಾಚಾರ್ಯ**
**ಸಿಂಹದ್ವಯೀ ॥** ೫೪

ಆ ಸಭೆಯಲ್ಲಿ ವ್ಯಾಖ್ಯಾನ ಮಾಡಿದ ಉಭಯವೇದಾಂತಪೀಠಗಳ ಆಚಾರ್ಯ
ಸಿಂಹಗಳೆರಡೂ ಚೆನ್ನಾಗಿ ಕಂಗೊಳಿಸಿದುವು ಆಚಾರ್ಯರಿಬ್ಬರೂ ವ್ಯಾಖ್ಯಾನದ
ಉಪಕ್ರಮದಲ್ಲಿ ಒಬ್ಬರಿಗೊಬ್ಬರು ವಿಶೇಷರೀತಿಯ ಗೌರವಾಸ್ಪದವಾದ ಮಾತು
ಗಳಿಂದ ಹೊಗಳಿಕೆಗೆ ಅರ್ಹವಾಗಿರುವ, ಸ್ನೇಹಭಾವವನ್ನು ಹಿಂದೆಹೊಂದ
ದಿದ್ದವರಿಗೂ ಈಗ ಸ್ನೇಹವನ್ನು ಉಂಟುಮಾಡುವ ಒಕ್ಕಣೆಕೆಗಳುಳ್ಳ ನಡವಳಿಕೆ
ಗಳನ್ನು ಪ್ರದರ್ಶಿಸಿದರು ಇದರಿಂದ ಆ ಸಭೆಯಲ್ಲಿ ಹಾಜರಿದ್ದ ಪಂಡಿತರೂ ಬೆಕ್ಕಸ
ಬೆರಗಾದರು ಬಳಿಕ ಈ ಇಬ್ಬರೂ ತಮ್ಮ ತಮ್ಮ ದರ್ಶನಗಳ ಸಿದ್ಧಾಂತಗಳಿಗೆ
ವಿರೋಧಿಯಾದ ಅಂದರೆ ದ್ವೈತವಿರೋಧಿ, ಅದ್ವೈತವಿರೋಧಿಗಳಾದ ವಾಕ್ಯಗಳಿಗೆ
ತಮ್ಮ ತಮ್ಮ ದರ್ಶನಗಳ ಪ್ರಕ್ರಿಯೆಯ ಪ್ರಕಾರ ತಾತ್ಪರ್ಯವನ್ನು ಬೋಧಿಸುತ್ತಾ
ಎರಡು ದರ್ಶನಗಳಿಗೂ ಮೋಕ್ಷದಲ್ಲಿ ಮುಖ್ಯ ತಾತ್ಪರ್ಯವೆಂಬ ಏಕಾಭಿಪ್ರಾಯ
ವನ್ನು ಸ್ಫುಟಗೊಳಿಸಿದರು.

**ಶ್ರೀಕೃಷ್ಣಸ್ಯ ಮನೋಹರಾಂ ಪ್ರತಿಕೃತಿಂ ಭಾವಾಭಿರಾಮಾಂ ಕಲಾ-**
**ಪಾರೀಣೋಲ್ಲಿಖಿತಾಂ ಚ ಸೌರಭವತೀಂ ಶ್ರೀಚಂದನೋಟ್ಟಂ**
**ಕಿತಾಮ್ ।**
**ಕಂಸಾರಾತಿಪದಾರವಿಂದ ಮಕರಂದಾಸ್ವಾದಿನೇ ಯೋಗಿನೇ**
**ಶ್ರೀವಿಶ್ವೇಶಪದಾಂಕಿತಾಯ ಗುರುರಾಟ್ ಶ್ರೀರಾಘವೇಂದ್ರೋ**
**ದದೌ ॥** ೫೫

ಬಳಿಕ ಶ್ರೀಗುರುವರ್ಯರಾದ ರಾಘವೇಂದ್ರಭಾರತೀಸ್ವಾಮಿಗಳು ಕಲೆಯಲ್ಲಿ ಚೆನ್ನಾಗಿ ಪರಿಣಿತರಾದ ಗುಡಿಗಾರರು ಕೊರೆದು ತಯಾರಿಸಿರುವ ಶ್ರೀಗಂಧದ ಮರ–ದಲ್ಲಿ ಕೆತ್ತಲ್ಪಟ್ಟಿರುವ, ಪರಿಮಳಭರಿತವಾದ, ಆಯಾಯ ಚಿತ್ತವೃತ್ತಿಗಳನ್ನು ಅಭಿವ್ಯಕ್ತಗೊಳಿಸುವ ಅವಯವಗಳ ರಚನಾ ಸೌಷ್ಠವದಿಂದ ಸುಂದರವಾದ ಮನೋಮೋಹಕವಾದ ಶ್ರೀಕೃಷ್ಣನ ಪ್ರತಿಮೆಯನ್ನು ಶ್ರೀಕೃಷ್ಣನ ಅಡಿದಾವರೆಗಳ ಮಕರಂದದ ರಸಾನುಭವಿಗಳೂ,ಯೋಗಿಗಳೂ ಆದ ಶ್ರೀಪೇಜಾವರಮಠಾಧೀಶ ಶ್ರೀ ವಿಶ್ವೇಶತೀರ್ಥಪಾದಂಗಳವರಿಗೆ ಕೊಟ್ಟರು

**ಶ್ರೀರಾಮಪ್ರತಿಮಾಮತೀವರುಚಿರಾಂ ಶ್ರೀಗಂಧಸಾರೋದ್ಭವಾ–**
**ಮನ್ಯೋನ್ಯಾಶಯಸಾಮರಸ್ಯಪಿಶುನಾಂ ಸೌಜನ್ಯ**
**ಸಂಪಾದಿಕಾಮ್ ।**
**ಶ್ರೀರಾಮಸ್ಮರಣಾನುಭಾವವಿದುಷೇ ಶ್ರೀಕೃಷ್ಣಭಕ್ತಾಗ್ರಣೀಃ**
**ಸುಪ್ರೀತಃ ಖಲು ರಾಘವೇಂದ್ರಗುರವೇ ವಿಶ್ವೇಶ**
**ತೀರ್ಥೋsವ್ಯದಾತ್ ॥** ೫೬

ಅನಂತರ ಶ್ರೀಕೃಷ್ಣನ ಪರಮ ಭಕ್ತರಾದ ಶ್ರೀವಿಶ್ವೇಶತೀರ್ಥಸ್ವಾಮಿಗಳು ಶ್ರೀಗಂಧದಮರದಿಂದ ನಿರ್ಮಿಸಿದ, ಪರಸ್ಪರಮನೋಧರ್ಮದ ಸಮಾನತೆಗೆ ಸ್ಮಾರಕವಾದ, ಸೌಜನ್ಯ ಸಂಪಾದನಗೆ ಕಾರಣವಾದ ಕಲಾತ್ಮಕವಾಗಿ ಅತ್ಯಂತ ರಮ್ಯವಾಗಿರುವ ಶ್ರೀರಾಮನ ಪ್ರತಿಮೆಯನ್ನು ಶ್ರೀರಾಮನಾಮ ಸ್ಮರಣೆಯ ಮಹಿಮೆಯನ್ನು ತಿಳಿದಿರುವ ಶ್ರೀಮದ್ರಾಮಚಂದ್ರಾಪುರದ ಮಠಾಧೀಶರಾಗ ಶ್ರೀರಾಘವೇಂದ್ರಭಾರತೀಸ್ವಾಮಿಗಳಿಗೆ ಸಂತುಷ್ಟರಾಗಿ ಕೊಟ್ಟರು.

**ಕೌಶೇಯಂ ಪರಿಧಾನಯುಗ್ಮಮಪಿ ಚೋಭಾಭ್ಯಾಂ ಗುರುಭ್ಯಾಂ ಸಭಾ-**
**ಸಭ್ಯಾ ವಂದನಪೂರ್ವಕಂ ಸಹ ಸುಮಸ್ರಗ್ಭಿರ್ನಿವೇದ್ಯಾದರಾತ್।**
**ಮನ್ಯಂತೇ ಸ್ಮ ತದಾತ್ಮನಃ ಸಫಲತಾಮಾಧ್ಯಾತ್ಮಿಕಶ್ರೇಯಸೇ**
**ಸಾಧೂನಾಮಿಹ ಕಲ್ಪಿತೇ ಖಲು ಸತಾಂ ಸೌಹಾರ್ದ**
**ಸಂಮೇಲನೇ ॥** ೩೭

ತರುವಾಯ ಸಭಾಸದರಾದ ಉಭಯ ಮಠಗಳ ಶಿಷ್ಯ ಪ್ರಮುಖರು ಮಹಾಮೌಲ್ಯದ ರೇಶ್ಮೆಯ ಹೊದೆಯುವ ಮಗುಟದ ಜೋಡಿಯನ್ನು ಗುರುವರ್ಯರಿಬ್ಬರಿಗೂ, ಹೂವಿನಸರ ಗಂಧದಹಾರದೊಂದಿಗೆ ನಮಸ್ಕಾರ ಪೂರ್ವಕವಾಗಿ, ಭಕ್ತಿಯಿಂದ ಒಪ್ಪಿಸಿ. ತಾವು ಧನ್ಯರಾದೆವೆಂದು ಭಾವಿಸಿದರು. ಸಜ್ಜನರ ಸೌಹಾರ್ದ ಸೂಚಕವಾದ ಸಮಾಗಮವು ಲೋಕದಲ್ಲಿ ಏರ್ಪಡುವುದು ಆಧ್ಯಾತ್ಮಿಕ ಶ್ರೇಯಸ್ಸಿಗಾಗಿಯಲ್ಲವೇ?

**ಸ್ನಾತ್ವಾಽಽಯೋಜಿತತುರ್ಚನೋಪಕರಣೈಃ ಸಾಯಂತನಾರಾಧನಂ**
**ಕರ್ತುಂ ಪ್ರಾವಿಶದುತ್ತಮಾಪವರಕಂ ಪೇಜಾವರೀಯೇ ಪುರೇ।**
**ಅಭ್ಯರ್ಚ್ಯೇಂದುಕಲಾಧರಂ ಚ ಸಪರೀವಾರಂ ಸ ರಾಮಂ ತತೋ**
**ಮಾರ್ಗಾಯಾಸಮಪಾಕರಿಷ್ಣುರನಘೋ ವಿಶ್ರಾಂತಿಧಾಮಾ-**
**ಗಮತ್ ॥** ೫೮

ಆನಂತರ ಶ್ರೀಗುರುಗಳು ಸಾಯಂಕಾಲದ ಕರ್ತವ್ಯವಾದ ಸ್ನಾನವನ್ನು ವಿಧಿವತ್ತಾಗಿ ಮಾಡಿ ಮಡಿಯುಟ್ಟು ಪೇಜಾವರಪುರದಲ್ಲಿ ಅರ್ಚನೆಗೆ ಬೇಕಾದ ಸಾಮಗ್ರಿಗಳನ್ನು ಅಳವಡಿಸಿ, ಇಟ್ಟಿದ್ದ ಮಂಟಪವನ್ನು ಜೋಡಿಸಿ ಅದರಲ್ಲಿ ಆರಾಧ್ಯದೇವತಾಮೂರ್ತಿಗಳನ್ನು ಇಟ್ಟು ಅಲಂಕರಿಸಿದ್ದ ಪೂಜಾಗೃಹದ ಒಳಹೊಕ್ಕರು. ಅಲ್ಲಿ ಶ್ರೀಚಂದ್ರಮೌಳೀಶ್ವರ, ಶ್ರೀರಾಮಚಂದ್ರ ಮುಂತಾದ ಉಪಾಸ್ಯದೇವತೆಗಳನ್ನು ಪೂಜಿಸಿದರು. ತರುವಾಯ ಮಾರ್ಗಾಯಾಸದ ಪರಿಹಾರಕ್ಕಾಗಿ, ವಿಶ್ರಾಂತಿಯ ಕೋಣೆಯ ಒಳಹೊಕ್ಕರು.

**ಪ್ರಾಚ್ಯಾಃ ಕುಂಕುಮಬಿಂದುಸುಂದರಮುಖ ಶ್ರೀಸನ್ನಿಕಾಶೇ ರವೌ**
**ದೃಷ್ಟೇ ಚಾಕೃತ ರಾಘವೇಂದ್ರಯತಿರಾಡ್ವೈಭಾತಿಕಂ**
**ಸರ್ವತಃ ।**
**ಶ್ರೀವಿಶ್ವೇಶಯತೀಂದ್ರದರ್ಶಿತಪಥೇನಾಸಾದ್ಯ ತತ್ಪ್ರಾಂಗಣಂ**
**ಕೃಷ್ಣಸ್ಯಾಲಯಮಾವಿವೇಶ ಮಧುರಂ ವೃಂದಾವನಶ್ರೀ-**
**ಹರಮ್ ॥** ೫೯

ಹಣೆಯ ಕುಂಕುಮ ಬೊಟ್ಟಿನಿಂದ ಸುಂದರವಾದ ಮೂಡಲ ಹೆಣ್ಣಿನ ಮುಖಶ್ರೀಯಂತಿರುವ ಸೂರ್ಯನು ಗೋಚರವಾದೊಡನೆ ಆಚಾರ್ಯರು ಪ್ರಾತಃಕಾಲದ ಸ್ನಾನ ಧ್ಯಾನಾದಿಗಳೆಲ್ಲವನ್ನೂ ನಿರ್ವಹಿಸಿದರು ಅನಂತರ ಶ್ರೀವಿಶ್ವೇಶತೀರ್ಥಯತೀಂದ್ರರು ತೋರಿಸಿದ ಮಾರ್ಗದಿಂದ ಕೃಷ್ಣಮಠದ ಒಳಗಿನ ಅಂಗಳದ ಒಳಹೊಕ್ಕು ವೃಂದಾವನದ ಶ್ರೀಯನ್ನು ಹೊಂದಿರುವ ಮನೋಹರವಾದ ಶ್ರೀಕೃಷ್ಣದೇವಾಲಯವನ್ನು ಪ್ರವೇಶಿಸಿದರು,

**ಇಷ್ಟಂ ಚಾಷ್ಟಮಠೀಯಮಸ್ಕರಿಸರ್ವೈಸ್ತ್ರೈಷ್ಟ್ಯಮಾನಂ ವಿಭುಂ**
**ಶಿಷ್ಟಾಚಾರಪರಂಪರಾರ್ಜಿತಪದಂ ಮೃಷ್ಟಾನ್ನದಾನಪ್ರಿಯಮ್**
**ರಿಷ್ಟಾರಿಷ್ಟಫಲಪ್ರದಂ ಹಿ ಸದಸದ್ಭಾವೋಪಜುಷ್ಟಾತ್ಮನಾಂ**
**ಕೃಷ್ಣಂ ಭಕ್ತಿವಶಂವದಂ ಸ ಚ ದದರ್ಶಾರಿಷ್ಟದುಷ್ಟದ್ರುಹಮ್॥**

ಶ್ರೀ ಪೇಜಾವರ ಮಠಾಧೀಶರಾದ ಶ್ರೀವಿಶ್ವೇಶ ತೀರ್ಥಪಾದರೊಡನೆ ಕೃಷ್ಣ ದೇವಾಲಯವನ್ನು ಪ್ರವೇಶಿಸಿದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಯಜ್ಞ ಪೂಜಿತನೂ ಅಷ್ಟಮಠದ ಯತೀಶ್ವರರಿಂದ ಪ್ರತಿನಿತ್ಯವೂ ಸ್ತುತ್ಯನಾದವನೂ ಎಲ್ಲಕಡೆಯಲ್ಲಿಯೂ ವ್ಯಾಪಕನಾಗಿರುವ ಮೂರು ಲೋಕದ ಸ್ವಾಮಿಯೂ ಆಗಿರುವ, ಸನಾತನ ಧರ್ಮ ಸಂಪ್ರದಾಯದ ಅನುಸರಣೆಯುಳ್ಳ ಶಿಷ್ಟರಾದ ಗುರು ಪರಂಪರೆಯಿಂದ ಅರ್ಚಿಸಲ್ಪಟ್ಟಿರುವವನೂ ಪ್ರತಿದಿನವೂ ನಡೆಯುವ ವ್ಯಾಖ್ಯಾನ ಸಂತರ್ಪಣೆಯಿಂದ ಪ್ರೀತನಾಗುವವನೂ ಸದ್ಭಾವ ಹೊಂದಿದ ಸಜ್ಜನರಿಗೆ ಮಂಗಳ ಪ್ರದನೂ ದುರ್ಭಾವವನ್ನು ತಳೆದಿರುವ ದುಷ್ಟರಸಂಹಾರಿಯಾದ ಭಕ್ತಪರಾಧೀನ ನಾದ ಉಡುಪಿ ಕ್ಷೇತ್ರದ ಅಧಿಷ್ಠೈವತವಾದ ಶ್ರೀಕೃಷ್ಣನನ್ನು ಸಂದರ್ಶಿಸಿದರು.

**ಬಾಲಂ ಬಾಲಶಶಾಂಕಶೇಖರನುತಂ ಗೋಗೋಪಿಕಾವಲ್ಲಭಂ**
**ನಿರ್ವ್ಯಾಜಸ್ಮಿತಲಕ್ಷ್ಯದಂತಮುಕುಲಂ ಗೋವರ್ಧನೋ**
**ದ್ಧಾರಿಣಮ್ ||**
**ಲೀಲಾನಂದಿತನಂದಗೋಕುಲಜನಂ ಮೃದ್ಭಕ್ಷಣವ್ಯಾಜತೋ**
**ವ್ಯಾದತ್ತಾನನದರ್ಶಿತತ್ರಿಭುವನಂ ಕಂಸದ್ವಿಷಂ ದೃಷ್ಟವಾನ್ ||**

ಬಾಲನೂ ಬಾಲಚಂದ್ರನನ್ನು ಮುಡಿಯಲ್ಲಿ ಹೊತ್ತಿರುವ ಶಿವನಿಂದ ಸ್ತುತ್ಯನೂ ಗೋವುಗಳಿಗೂ ಗೋಪಾಲಕರಿಗೂ ನೆಚ್ಚಿನ ಇನಿಯನೂ ನೈಜವಾದ ನಸುನಗುವಿನಿಂದ ತೋರುವ ಮೊಗ್ಗಿನಂತಿರುವ ಪುಟ್ಟ ಹಲ್ಲುಳ್ಳವನೂ ಕಿರುಬೆರಳಿ ನಿಂದ ಗೋವರ್ಧನ ಪರ್ವತವನ್ನು ಎತ್ತಿ ಧರಿಸಿದವನೂ ಮಣ್ಣಿನ ಭಕ್ಷಣೆಯಿಂದ ತನ್ನ ಮೇಲೆ ಹೊರಿಸಿದ ತಪ್ಪನ್ನು ಹೋಗಲಾಡಿಸುವ ನೆಪದಲ್ಲಿ, ಬಾಯಿತೆರೆದು ತನ್ನ ತಾಯಿ ಯಶೋದೆಗೆ ತನ್ನ ಒಡಲಿನೊಳಗಿರುವ ಮೂರು ಲೋಕಗಳನ್ನು ತೋರಿಸಿದವನೂ ಕಂಸ ಶತ್ರುವೂ ಆದ ಶ್ರೀಕೃಷ್ಣನನ್ನು ಆ ಗುರುಗಳು ದರ್ಶನ ಮಾಡಿದರು.

**ಬಾಲಂ ಶ್ಯಾಮಲಕಾಂತಿಮಿಂದುವದನಂ ಶೋಣಾಧರಂ ಸುಂದರಂ**
**ಮಂಥಂ ಸವ್ಯಶಯೇ ದಧಾನಮನಘಂ ಹೈಯಂಗವೀನಂ ತಥಾ**
**ದಕ್ಷೇಣಾಪಿ ಕರೇಣ ಬಿಭ್ರತಮುಮುಂ ಗೋಪಾಲವೇಷಂ ಹರಿಂ**
**ಪ್ರಾಣಂಸೀಜ್ಜಗತೀಗುರುಂ ತಮುಡುಪಿಕ್ಷೇತ್ರೇ ಸ ನಃ**
**ಶ್ರೀಗುರುಃ ||** ೬೨

ಎಳೆಯನೂ ಕರಿಯ ಹೊಳಪಿನ ಮೈಯುಳ್ಳವನೂ ಚೆಂದುಟಿಯವನೂ ಚೆಲುವಿನವನೂ ಎಡಗೈಯಲ್ಲಿ ಕಡಗೋಲನ್ನು ಹಿಡಿದವನೂ ಹಾಗೆಯೇ ಬಲದ ಅಂಗೈಯಲ್ಲಿ ಹಸುವಿನ ಹೊಸ ಬೆಣ್ಣೆಯನ್ನು ಧರಿಸಿದವನೂ ದೋಷರಹಿತನೂ ಅತಿಶಯನೂ ಜಗದ್ಗುರುವೂ ಆಗಿರುವ ಈ ಗೋಪಾಲವೇಷಧಾರಿಯಾದ ಶ್ರೀ ಹರಿಯನ್ನು ನಮ್ಮ ಗುರುಗಳು ಉಡುಪಿ ಕ್ಷೇತ್ರದಲ್ಲಿ ಕಂಡರು.

**ದೃಷ್ಟ್ವಾ ನಂದಕಿಶೋರಮಾತ್ಮನಿ ಲಸತ್ಸಚ್ಚಿತ್‍ಸುಖಾಭೇದತಃ**
**ಪ್ರತ್ಯಂಚಂ ಪರಮಾರ್ಥತಃ ಸ ಬುಬುಧೇ ಸ್ವಾತ್ಮಾನಮೇವಾ-**
**ದ್ವಯಮ್ ।**
**ತುಷ್ಟ್ಯೈ ವೇಷ್ಟಜನಾವನಾಯ ಜಗತೀಮಾವಿಶ್ಯ ಧೃಷ್ಟಾತ್ಮನಾಂ**
**ಹಂತಾರಂ ಮುಚುಕುಂದಮೋಕ್ಷವರದಂ ವೇದಾರ್ಥಸಾರಾಕ್ಷರೈಃ**

ಶ್ರೀಕೃಷ್ಣದರ್ಶನ ಮಾಡಿದ ಶ್ರೀರಾಘವೇಂದ್ರಭಾರತೀಸ್ವಾಮಿಗಳಿಗೆ ತಮ್ಮ ಅಂತರಂಗದಲ್ಲಿ ಪ್ರಕಾಶಿಸುತ್ತಿರುವ ಸಚ್ಚಿದಾನಂದರೂಪನಾದ ಪರಮಾತ್ಮ ನಿಗೂ ತಮ್ಮ ಕಣ್ಣಮುಂದೆ ತೋರುತ್ತಿರುವ ನಂದಗೋಪ ಕುಮಾರನಾದ ಶ್ರೀಕೃಷ್ಣನಿಗೂ ಭೇದವು ತೋರಲಿಲ್ಲ. ಅವರು ಆ ಕೃಷ್ಣನ ಮೂರ್ತಿಯನ್ನು ಪ್ರತಿ ಜೀವಶರೀರದಲ್ಲಿ ಪ್ರಕಾಶಿಸುತ್ತಿರುವ ಅದ್ವಿತೀಯವೂ ನಿರಾಕಾರವೂ ಪರಮಾರ್ಥ ವೂ ಆದ ಸ್ವಸ್ವರೂಪವೆಂದು ತಿಳಿದರು. ವಿಲಕ್ಷಣ ಸಾಮರ್ಥ್ಯವುಳ್ಳ ಆ ಪರಮಾತ್ಮನು ಭಕ್ತಾನುಗ್ರಹಕ್ಕಾಗಿ ವಿವಿಧ ಅವತಾರಗಳನ್ನು ಎತ್ತುವುದರಿಂದ ಆತನು ಸದ್ರೂಪನೂ ಆಗಿರುವನು. ಬಳಿಕ, ಗುರುಗಳು ಲೋಕಾನುಗ್ರಹಕ್ಕಾಗಿ ಜಗತ್ತಿನಲ್ಲಿ ಅವತರಿಸಿ ದುಷ್ಟರನ್ನು ಸಂಹರಿಸುವವನೂ ಮುಚುಕುಂದ ಮೋಕ್ಷಪ್ರದನೂ ಕೃಷ್ಣಾವತಾರಿ-ಯೂ ಆದ ಭಗವಂತನ ಸದ್ರೂಪವನ್ನು ಕಂಡು ವೇದಾರ್ಥಸಾರಾಕ್ಷರಗಳಿಂದ ಅಂದರೆ, ಭಾಗವತದ ರಸಭರಿತವಾದ ಶ್ಲೋಕಗಳಿಂದ ಸ್ತುತಿಸಿದರು.

**ಮಧ್ಯಾಹ್ನೇ ಕೃತಮಜ್ಜನಃ ಕೃತಮತಿಃ ಕಾಷಾಯವಾಸಾಃ ಶುಚಿಃ**
**ಯುಕ್ತಂ ಚಾವಿಶದರ್ಚನೋಪಕರಣೈಃ ಪೂಜಾಗೃಹಂ**
**ಶೋಭನಮ್ ।**
**ಸೀತಾಲಕ್ಷ್ಮಣಸಂಯುತಂ ರಘುಪತಿಂ ರಾಜೋಪಚಾರೈರಲಂ**
**ಚಾನರ್ಚೇಂದುಕಲಾಧರಂ ಚ ಗುರುರಾಟ್ ಶ್ರೀರಾಘವೇಂದ್ರ-**
**ಸ್ತತಃ ॥ ೬೪**

ಹೀಗೆ ದೇವರ ದರ್ಶನ ಮುಗಿಸಿ ಬೆಳಗಿನ ವ್ಯಾವಹಾರಿಕ ನಡವಳಿಕಗಳನ್ನು ನೆರವೇರಿಸುವ ಹೊತ್ತಿಗೆ ಮಧ್ಯಾಹ್ನವಾಯಿತು. ಆಗ ಸ್ಥಿತಪ್ರಜ್ಞರಾದ ಶ್ರೀಗುರು

ಗಳು ಮಧ್ಯಾಹ್ನ ಮಾಡಬೇಕಾದ ಸ್ನಾನವನ್ನು ವಿಧಿವತ್ತಾಗಿ ಆಚರಿಸಿ, ಶುಚಿರ್ಭೂತ ರಾಗಿ, ಮಡಿಯಾದ ಕಾಷಾಯವಸ್ತ್ರವನ್ನೂ ಧರಿಸಿದರು. ಬಳಿಕ ಪೂಜೋಪಕರಣ ದ್ರವ್ಯಗಳಿಂದ ಕೂಡಿದ ಅಲಂಕೃತವಾದ ಸುಂದರವಾದ ದೆ ವರಕೋಣೆಯ ಒಳಹೊಕ್ಕ ರು.ಅಲ್ಲಿ ಸೀತೆ ಲಕ್ಷ್ಮಣರೊಡಗೂಡಿದ ಶ್ರೀರಾಮಚಂದ್ರನಿಗೂ ಚಂದ್ರಮೌಳೀ-ಶ್ವರನಿಗೂ ವೈಭವೋಪೇತವಾದ ರಾಜೋಪಚಾರಗಳಿಂದ ಪೂಜೆ ಸಲ್ಲಿಸಿದರು.

(ಯುಗ್ಮಕಮ್)

**ಚಾಂಪೇಯದ್ಯುತಿಹಾರಿದೀಪಕಲಿಕಾಮಾಲಾವೃತೇ ಮಂಟಪೇ**
**ಲೀಲೋತ್ಪಾದಿತಹಂಸತೂಲವಿಲಸಚ್ಛಯ್ಯೋಪಬರ್ಹಾನ್ವಿತೇ ।**
**ರಾಕಾಚಂದ್ರಸಮಾನಕಾಂತಿವಲಯೈರಾಭೂಷಿತೇ ಚಾಮರೈಃ**
**ಶ್ವೇತಚ್ಛತ್ರಪರಿಷ್ಕೃತೇ ಸುರುಚಿರೇ ಹೈಮೇ ಶುಭೇ ಸುಸ್ಥಿತಮ್॥**

**ತಾರಾನಾಯಕಶೇಖರಾದ್ಯಭಿನುತಂ ತಾರಾಧಿನಾಥಾನನಂ**
**ತಾರಾಹಾರವಿಭೂಷಯಾ ದಯಿತಯಾ ಯುಕ್ತಂ ಚ ಸೌಮಿತ್ರಿಣಾ ।**
**ರಾಮಂ ರಾವಣಜೀವಿತಾಪಹರಣಂ ಸೀತಾಮನೋಹಾರಿಣಂ**
**ಸಂತುಷ್ಟೋಽಥ ದದರ್ಶ ವೈಷ್ಣವಯತಿಃ ಸಂಸಾರಸಂತಾ-ರಕಮ್ ॥ ೬೬**

ಮೊಗ್ಗು ಸಂಪಿಗೆಯ ಹೊಳಪಿನಂತೆ ಚೆಲುವಾದ ವಿದ್ಯುದ್ದೀಪದ ಮೊಗ್ಗುಗಳ ಮಾಲೆಗಳಿಂದ ಸುತ್ತುವರೆದಿರುವ, ಹಂಸತೂಲಿಕೆಯಿಂದ ಚನ್ನಾಗಿ ತಯಾರಿಸಿದ ಹಾಸಿಗೆದಿಂಬುಗಳನ್ನು ಅಳವಡಿಸಿರುವ, ಹುಣ್ಣಿಮೆಯ ಚಂದಿರನಕಾಂತಿಗೆ ಸದೃಶವಾದ ಕಾಂತಿಯೇ ತವರಣವಾಗಿ ಉಳ್ಳ, ಚಮರೀಮೃಗದ ಬಾಲದ ಕೂದಲಿನಿಂದ ತಯಾರಿ ಸಿದ, ಚವರಿಗಳಿಂದ ಸಿಂಗರಿಸಲ್ಪಟ್ಟಿರುವ, ಬೆಳ್ಗೊಡೆಯಿಂದ ಅಲಂಕೃತವಾದ, ಸುಂದರವೂ ಮಂಗಳಕರವೂ ಆದ ಬಂಗಾರದ ಮಂಟಪದಲ್ಲಿ ಸುಖಾಸೀನರಾಗಿರುವ, ಚಂದ್ರಶೇಖರನಾದ ಪರಮೇಶ್ವರನೇ ಮುಂತಾದವರಿಂದ ಸ್ತುತ್ಯನೂ ಚಂದ್ರನನು ಹೋಲುವ ಮುಖವುಳ್ಳವನೂ ನಕ್ಷತ್ರದಂತಿರುವ ಚಿನ್ನದಗುಂಡುಗಳನ್ನು ಪೋಣಿಸಿ ತಯಾರಿಸಿದ ಏಕಾವಳಿಯೆಂಬ ಕೊರಳಸರವನ್ನು ಧರಿಸಿರುವ, ತನ್ನ ಪ್ರಿಯೆಯಾದ ಸೀತೆ ತಮ್ಮನಾದ ಲಕ್ಷ್ಮಣ ಇವರೊಡನೆ ಇರುವ, ಲಂಕೇಶನಾದ ರಾವಣನ ಸಂಹಾರಿಯೂ ಸೀತಾಮನೋಹಾರಿಯೂ ಆಗಿರುವ ಶ್ರೀರಾಮಚಂದ್ರಮೂರ್ತಿಯನ್ನು ಶ್ರೀಪೇಜಾವರ ಮಠಾಧೀಶರೂ ಮಾಧ್ವಯತಿವರ್ಯರೂ ಆಗಿರುವ ಶ್ರೀ ವಿಶ್ವೇಶ ತೀರ್ಥರು ಸಂದರ್ಶಿಸಿದರು. ಬಳಿಕ ಆನಂದಭರಿತರಾದರು.

**ಸರ್ವಾಭ್ಯಂತರವಾಸಿನೋ ಭಗವತೋ ರಾಮಸ್ಯ ನೀರಾಜನೇ**
**ಸಾಕ್ಷಾತ್ಕರ್ತುಮಿವಾಗತೋ ಹರಿಮಸೌ ವಿಶ್ವೇಶತೀರ್ಥಃ ಸುಧೀಃ**
**ಆರ್ತತ್ರಾಣಪರಾಯಣಂ ರವಿಕುಲೇ ಜಾತಂ ಚ ನಾರಾಯಣಂ**
**ನತ್ವಾ ದಾಶರಥೇಃ ಪದಾಬ್ಜತುಲಸೀಂ ಜಿಘ್ರನ್ ಯತಿಃ**
**ಪಿಪ್ರಿಯೇ ||** ೬೭

ಎಲ್ಲಾ ವಸ್ತುಗಳಲ್ಲಿಯೂ ಅಡಕವಾಗಿರುವ ಶ್ರೀರಾಮನ ನೀರಾಜನದ ಜ್ಯೋತಿಯಲ್ಲಿ ಶ್ರೀಹರಿಯನ್ನು ಸಾಕ್ಷಾತ್ಕರಿಸುವುದಕ್ಕಾಗಿ ಆಗಮಿಸಿರುವರೋ ಎನ್ನುವಂತಿರುವ ಆತ್ಮಜ್ಞಾನಿಗಳಾದ ಶ್ರೀವಿಶ್ವೇಶತೀರ್ಥರು ಆರ್ತರ ರಕ್ಷಣೆಯಲ್ಲಿ ನಿರತನೂ ಸೂರ್ಯವಂಶದಲ್ಲಿ ಅವತರಿಸಿದವನೂ ಆದ ನಾರಾಯಣನಿಗೆ ವಂದಿಸಿ ದಶರಥ ಪುತ್ರನಾದ ಶ್ರೀರಾಮನ ಅಡಿದಾವರೆಯ ತುಳಸಿಯನ್ನು ಆಘ್ರಾಣಿಸುತ್ತಾ ತೃಪ್ತಿಹೊಂದಿದರು

**ನಿಃಸಾರಕ್ಷಣಿಕರ್ಧಿಜೀವಿತಮಿದಂ ದುರ್ವಾಸನಾವಾಸಿತಂ**
**ಚಿತ್ತಂ ಚಂಚಲಚಂಚರೀಕಸದೃಶಂ ಶ್ರೀಕೃಷ್ಣಭಕ್ತ್ಯಾ ದೃಢಮ್ ।**
**ರಜ್ವಾ ತತ್ಪದಪಂಕಜೇ ನಿಯಮಯನ್ಮಾಧ್ವೀಕಸಾಂದ್ರೇ ಭೃಶಂ**
**ಬ್ರಹ್ಮಾನಂದರಸೋದಧಿಂ ನಿವಿಶತೇ ವಿಶ್ವೇಶತೀರ್ಥೋ ಯತಿಃ ||**

ಸಂನ್ಯಾಸಿಗಳಾದ ಶ್ರೀವಿಶ್ವೇಶತೀರ್ಥರು ನಿಸ್ಸಾರವೂ ನಶ್ವರವೂ ಆದ ಸಂಸಾರದ ವೈಭವ ಜೀವನದಲ್ಲಿ ಲೋಭಿಯಾದ, ದುಂಬಿಯಂತೆ ಅತೀವ ಚಂಚಲವಾದ ಪೂರ್ವಜನ್ಮದ ದುಸ್ಸಂಸ್ಕಾರಗಳಿಂದ ದೂಷಿತವೂ ಆದ ತಮ್ಮ ಚಿತ್ತವನ್ನು ಶ್ರೀಕೃಷ್ಣನ ಭಕ್ತಿಯೆಂಬ ಹಗ್ಗದಿಂದ ಮಕರಂದ ಭರಿತವಾದ ಆತನ ಪಾದಕಮಲದಲ್ಲಿ ದೃಢವಾಗಿ ಕಟ್ಟುತ್ತಾ ಬ್ರಹ್ಮಾನಂದರಸದ ಸಾಗರದಲ್ಲಿ ಮುಳುಗಿದ್ದಾರೆ

**ಸ್ವಾದಿಷ್ಠಾನ್ಯಶಿತಾನಿ ಷಡ್ರಸಯುತಾನ್ಯುಚ್ಚಾವಚಾನ್ಯಾಗತಾಃ**
**ಭುಕ್ತ್ವಾ ತೃಪ್ತಿಮವಾಪುರತ್ರ ನಿಖಿಲಾಃ ಪ್ರೀತಾಂತರಂಗಾ ಜನಾಃ**
**ತೇಽಮನ್ಯಂತ ನ ಯಾಮ ನೋ ಗೃಹಮಿತಃ ಕೃಷ್ಣಪ್ರಸಾದಾದ್ವಯಂ**
**ಸ್ಥಿತ್ವಾಽಶ್ನಾಮ ಸುಖೇನ ನಾತಿಸುಲಭಂ ದಿವ್ಯಾನ್ನಮಿತ್ಯಾತ್ಮನಿ ||**

ಆ ಉತ್ಸವಕ್ಕೆ ಬಂದಿರುವ ಮಹಾಜನರು ಕೃಷ್ಣಮಠದಲ್ಲಿ ಏರ್ಪಡಿಸಿದ, ಷಡ್ರಸಯುಕ್ತವಾದ ಬಗೆಬಗೆಯ ಭಕ್ಷಭೋಜ್ಯಗಳುಳ್ಳ ಅತ್ಯಂತ ಮಧುರವಾದ ಭೋಜನವನ್ನುಮಾಡಿ, ತೇಗಿ, ತೃಪ್ತಿ ಹೊಂದಿದರು. ಸಂತುಷ್ಟಮನಸ್ಕರಾದ ಅವರು ತಮ್ಮ ಮನಸ್ಸಿನಲ್ಲಿ "ಇಲ್ಲಿಂದ ನಾವು ಮನೆಗೆ ಹಿಂದಿರುಗುವುದು ಬೇಡ! ಇಲ್ಲಯೇ ಇದ್ದು ಶ್ರೀಕೃಷ್ಣನ ಕೃಪೆಯಿಂದ ಪ್ರತಿದಿನವೂ ದೇವತೆಗಳಿಗೆ ಲಭ್ಯವಾದ ಮೃಷ್ಟಾನ್ನ ಭೋಜನ ಮಾಡೋಣ!" ಎಂದು ಕೊಂಡರು.

ಮಧ್ಯಾಹ್ನಾತ್ಪರಮಾತ್ಮನೋ ನಿಯಮತೋ ನಿರ್ವೃತ್ತಭಿಕ್ಷಂ ಯತಿ–
ದ್ವಂದ್ವಂ ಪಂಡಿತಮಂಡಲೀಂ ಚ ಜನತಾಮನ್ವಗ್ರಹೀದಾಶಿಷಾ ।
ಆಪೃಚ್ಛ್ಯಾಽಥ ತಮೇನಮೇಷಗುರುರಾಡ್ವಿಶ್ವೇಶತೀರ್ಥಂ ತತಃ
ಸಾಕಂ ಶಿಷ್ಯಗಣೈರ್ಜಗಾಮ ಸಹಸಾ ಕೆಕ್ಕಾರುಧರ್ಮಾಲಯಮ್

ಮಧ್ಯಾಹ್ನದ ಅನುಷ್ಠಾನವಾದ ಬಳಿಕ ಆ ಇಬ್ಬರು ಯತಿಗಳೂ ಶಾಸ್ತ್ರನಿಯಮದ ಪ್ರಕಾರ ಭಿಕ್ಷೆಯನ್ನು ಸ್ವೀಕರಿಸಿದರು, ತರುವಾಯ ಅಪರಾಹ್ನದ ಸಭೆಯಲ್ಲಿ ನೇರಿದ ವೈದಿಕರು ಪಂಡಿತರು ಭಕ್ತರು ಮಹಾಜನರು ಮುಂತಾದವರಿಗೆ ಆಶೀರ್ವದಿಸಿ ಅವರಿಬ್ಬರೂ ಮಂತ್ರಾಕ್ಷತೆಕೊಟ್ಟು ಅನುಗ್ರಹಿಸಿದರು. ಅನಂತರ ಶ್ರೀಮದ್ ರಾಘವೇಂದ್ರಭಾರತೀಸ್ವಾಮಿಗಳು ಪೇಜಾವರ ಮಠಾಧೀಶರಾದ ಶ್ರೀವಿಶ್ವೇಶತೀರ್ಥರಿಂದ ಬೀಳ್ಕೊಡಲ್ಪಟ್ಟು ಕೂಡಲೇ ಶಿಷ್ಯವೃಂದಸಹಿತರಾಗಿ ತಮ್ಮ ಕೆಕ್ಕಾರಿನ ರಘೂತ್ತಮ ಮಠಕ್ಕೆ ಪ್ರಯಾಣ ಮಾಡಿದರು

ಯತ್ಕಲ್ಯಾಣಿ ಪುರಾತನಂ ತ್ರಿಪುರಭಿದ್ದಾರಾಸ್ಥಲಂ ಸುಸ್ಥಿರಂ
ಸಹ್ಯಾದ್ರೇಃ ಕಿಲ ದಕ್ಷಿಣಾಹಿ* ಕುಮಟೆದ್ವಾರಂ ಧ್ರುವಂ
ಶ್ರೇಯಸೇ ।
ದ್ವಾರಂ ಸಾಗರಗಾಮಿ ಪೋತವಣಿಜಾಂ ಧಾನ್ಯಾದಿಸಂಪತ್ತಯೇ
ತದ್ದೇವಾಯತನಂ ಜಯತ್ಯನುಪಮಂ 'ದೇವೀಮನೇ' ಕಾನನೇ

ಸಹ್ಯಾದ್ರಿ ಬೆಟ್ಟದ ಬಲದಿಕ್ಕಿಗೆ ಕುಮಟಾಕ್ಕೆ ಹೋಗುವ ದಾರಿಯ ಘಾಟಿ ಬಾಗಿಲಿನಲ್ಲಿ ಯಾವ ಕಲ್ಯಾಣಕರವೂ, ಪುರಾತನವೂ ಆದ ಮಹಿಷಾಸುರ ಮರ್ದಿನಿ ದೇವಿಯ ದೇವಸ್ಥಾನವು ಎಲ್ಲರ ಶ್ರೇಯಸ್ಸಿಗಾಗಿ ಸುಸ್ಥಿರವಾಗಿರುವುದು ನಿಶ್ಚಿತವಾಗಿದೆಯೋ ಆ ಸ್ಥಳವು ಮಾರಾಟದ ಧಾನ್ಯಾದಿ ಸಂಗ್ರಹಕ್ಕಾಗಿ ದೋಣಿಯ ಮೇಲೆ ವ್ಯಾಪಾರಮಾಡುವ ಬೆಸ್ತರೇ ಮುಂತಾದ ವರ್ತಕರಿಗೆ ಸಮುದ್ರದ ದಡದ ಕಡೆಗೆ ಹೋಗುವ ದಾರಿಯೂ ಆಗಿದೆ. ಮತ್ತು ಸಮುದ್ರದ ದಡದಿಂದ ಘಟ್ಟದ ಮೇಲಣ ಸಿರಸಿ ಮಾರ್ಗವಾಗಿ ಸಾಗರಕ್ಕೆ ಬರುವದಾರಿಯೂ ಹೌದು. ಆ ಕಾಡಿನಪ್ರದೇಶ 'ದೇವಿಮನೆ ಎಂಬ ಅನ್ವರ್ಥವಾದ ಹೆಸರು ಪಡೆದಿದೆ. ಅಲ್ಲಿರುವ ಆ ದೇವಸ್ಥಾನವು ಅನವ್ಯಶವಾಗಿ, ಸರ್ವೋತ್ಕರ್ಷವಡೆದು ಶೋಭಿಸುತ್ತಿದೆ.

* ದಕ್ಷಿಣಾಹಿ–ಬಲದಿಕ್ಕು

ಧೃತ್ವಾ ವಾಮಕರೇಣ ಪುಚ್ಛಮಸುರಸ್ಯಾಹತ್ಯ ಪೃಷ್ಠೇ ಪದಾ
ಭಿತ್ವಾ ಶೂಲತಲೇನ ವಕ್ಷಸಿ ರಿಪುಂ ಘೋರಂ ನಿಹತ್ಯಾಂಬಿಕಾ ।
ಶೂಲಂ ಖಡ್ಗಮಿಷುಂ ಶರಾಸನಮರಿಂ ಶಂಖಂ ಸುಧಾಲಂ ಭುಜೈಃ
ಬಿಭ್ರಾಣಾ ಮಹಿಷಾಸುರಪ್ರಮಥಿನೀ ಸಾ ತತ್ರ ವಿದ್ಯೋತತೇ ॥

ಅಲ್ಲಿ ಜಗದಂಬೆಯಾದ ಮಹಿಷಾಸುರ ಮರ್ದಿನಿಯಾದ ದುರ್ಗಾದೇವಿಯು ತನ್ನ ಎಡಗೈಯೊಂದರಲ್ಲಿ ರಾಕ್ಷಸನ ಬಾಲಹಿಡಿದು, ಕಾಲಿನಿಂದ ಅವನ ಬೆನ್ನುತುಳಿದು, ಅದುಮಿ ಹಿಡಿದು ಶೂಲದಿಂದ ಅವನ ಎದೆಗೆ ಇರಿದು ಘೋರಾಕಾರದ ಮಹಿಷಾಸುರನನ್ನು ಕೊಂದು, ಲೋಕವನ್ನು ರಕ್ಷಿಸುತ್ತಾ ಕಂಗೊಳಿಸುತ್ತಿರುವಳು. ಅವಳು ತನ್ನ ಎಣ್ತೋಳುಗಳಿಂದ ತ್ರಿಶೂಲ, ಕತ್ತಿ ಬಾಣ, ಬಿಲ್ಲು, ಚಕ್ರ, ಶಂಖ, ಗುರಾಣಿ ಮಹಿಷಾಸುರನಬಾಲ ಇವುಗಳನ್ನು ಹಿಡಿದಿರುವಳು. (ಸುಧಾಲಂ–ಗುರಾಣಿ)

ತದ್ದೇವಾಲಯಸನ್ನಿಕೃಷ್ಟವಿಪಿನೇಷ್ವೌತ್ತಾನಪಾದೇಃ ಸಮಃ
ಪೂರ್ವಂಕೋऽಪಿ ತಪೋಧನೋ ಧ್ರುವ ಇತಿ ಖ್ಯಾತೋऽವಸ -
ಚ್ಚಾಶ್ರಮೇ ।
ಪ್ರತ್ಯಸ್ಥಾಪಯದೇಷ ಲೋಕಹಿತಕೃದ್ದುರ್ಗಾಂ ಗಣೇಶಂ ಶಿವಂ
ಹೇತುಶ್ಚಾತ್ರ ಜನಶ್ರುತಿಃ ಪುನರಿದಂ ಲಿಂಗಂ ಧ್ರುವೇಶಾ
ಭಿದಮ್ ॥ ೭೩

ಆ ದೇವಾಲಯದ ಸಮೀಪದ ಕಾಡುಗಳಲ್ಲಿ ಉತ್ತಾನಪಾದರಾಜನ ಪುತ್ರನಾದ ಧ್ರುವಕುಮಾರನಂತೆ ತಪಸ್ವಿಯಾಗಿದ್ದ ಧ್ರುವನೆಂಬ ಮುನಿಯೊಬ್ಬನು ಆಶ್ರಮ ಮಾಡಿಕೊಂಡು ವಾಸಿಸುತ್ತಿದ್ದನಂತೆ. ಲೋಕಹಿತಕರನಾದ ಆ ಮಹರ್ಷಿಯು ಈಗಿರುವ ದುರ್ಗಾ ಗಣಪತಿ ಶಿವ ಮೂರ್ತಿಗಳನ್ನು ಆ ಸಮಯದಲ್ಲಿಯೇ ಪ್ರತಿಷ್ಠಾಪಿಸಿದ್ದನಂತೆ. ಧ್ರುವಮುನಿಯು ಪ್ರತಿಷ್ಠೆಮಾಡಿದ ಈಶ್ವರ ಲಿಂಗಕ್ಕೆ ಅನಂತರ ಧ್ರುವೇಶ್ವರನೆಂದು ಜನರು ಹೇಳುತ್ತಾ ಬಂದದ್ದರಿಂದ ಧ್ರುವೇಶ್ವರನೆಂಬ ಹೆಸರು ಖಾಯಂ ಆಯಿತಂತೆ. ಎಂದು ಅಲ್ಲಿ ಸುತ್ತ ಮುತ್ತಲು ವಾಸಿಸುತ್ತಿದ್ದ ಹಳ್ಳಿಯ ಮುದುಕರು ತಾವು ಹಿಂದಿನವರ ಬಾಯಿಂದ ಕೇಳಿದುದನ್ನು ಹೇಳುತ್ತಿದ್ದರಂತೆ.

ಭೂತಂ ಭಾವಿ ಚ ದೇಶಕಾಲಕಲನಾವೈಚಿತ್ರ್ಯ ಸಂವಾದಕಂ
ದೈವಸ್ಥಾನಿಕಮಷ್ಟಮಂಗಲವಿಧಾನೇನಾತ್ರ ದೇವೀಮನೇ ।
ಪ್ರಾಶಸ್ತ್ಯಂ ಕಿಲ ಕೇರಲೀಯಗಣಕೈರಾವೇದಿತಂ ಪ್ರಾಶ್ನಿಕಾ
ಭಕ್ತಾಃ ಕೇಚನ ರಾಘವೇಂದ್ರಗುರವೇ ವ್ಯಜ್ಞಾಪಯನ್ನಾಗತಾಃ ॥

ಒಂದಾನೊಂದು ದಿವಸ ದೇವಿ ಭಕ್ತರಾದ ದೇವೀಮನೆ ಪರಿಸರಗ್ರಾಮದಲ್ಲಿ ವಾಸಿಸುತ್ತಿರುವ ಕೆಲವು ಪ್ರಾಶ್ನಿಕರು ಶ್ರೀರಾಮಚಂದ್ರಾಪುರದಮಠಕ್ಕೆ ಬಂದರು , ಅವರು ಶ್ರೀರಾಘವೇಂದ್ರಭಾರತೀಸ್ವಾಮಿಗಳ ಸನ್ನಿಧಿಯಲ್ಲಿ ತಾವು ಕೇರಳ ದೇಶದ ಜ್ಯೋತಿಷ್ಕರಿಂದ ಅಷ್ಟಮಂಗಲ ಪ್ರಶ್ನವಿಧಾನದ ಮೂಲಕ ತಿಳಿದು ಕೊಂಡಿದ್ದ ಹಿಂದೆ ನೆಡೆದ ಮುಂದ ನಡೆಯುವ ಆಯಾ ದೇಶಕಾಲನಿಮಿತ್ತವಾದ ವಿಚಿತ್ರ ಘಟನೆಗಳನ್ನು ಬೋಧಿಸುವ, ದೇವೀಮನೆ ಕ್ಷೇತ್ರದ ಪ್ರಾಶಸ್ತ್ಯವನ್ನು ಬಿನ್ನೈಸಿದರು,

**ಸ್ವಾಮಿನ್ನತ್ರಭವಾನ್ ಕರೋತು ಕೃಪಯಾ ದೇವೀಮನೇ ಸಂಸ್ಥಿತಾಂ**
**ದುರ್ಗಾಂ ಪೂರ್ಣಕಲಾಂ ಯಥಾವಿಧಿ ವಿಧಾಯಾಸ್ಯಾಃ**
**ಪ್ರತಿಷ್ಠಾಪನಮ್ ।**
**ವಿಘ್ನೇಶಂ ಧ್ರುವಮೀಶ್ವರಂ ಚ ದಯಯಾ ಪೂರ್ಣಂ ಕಲಾಭಿಸ್ತಥಾ**
**ಕೃತ್ವಾ ದುಃಖನಿವಾರಣಾಯ ಭಗವನ್ನಾಶೀರ್ಭಿರಾಸಿಂಚತು ॥**

ಪೂಜ್ಯರೇ! ತಾವು ದಯವಿಟ್ಟು ದೇವೀಮನೆ ಕ್ಷೇತ್ರದಲ್ಲಿ ನೆಲಸಿರುವ ದುರ್ಗಾ ದೇವಿಗೆ ಕಲಾವೃದ್ಧಿ ಗೊಳಿಸಬೇಕು ವಿಧಿವತ್ತಾಗಿ ಆ ದುರ್ಗಾಮೂರ್ತಿಯ ಪ್ರತಿಷ್ಠೆ ಮಾಡಬೇಕು, ಮತ್ತು ಸಂಕಷ್ಟ ನಿವಾರಣೆಗಾಗಿ ಗಣಪತಿ ಧ್ರುವೇಶ್ವರಲಿಂಗ ಇವುಗ-ಳಿಗೂ ವಿಧಿವತ್ತಾಗಿ ಕಲಾವೃದ್ಧಿ ಮಾಡಿ ಪುನಃ ಪ್ರತಿಷ್ಠೆಮಾಡಬೇಕು. ತಾವು ನಮ್ಮ ಮೇಲಣ ದಯೆಯಿಂದ ಈ ಕಾರ್ಯಗಳನ್ನು ತಮ್ಮ ಸನ್ನಿಧಿಯಲ್ಲಿ ನಿರ್ವಹಿಸಲು ಸಮ್ಮತಿ ನೀಡಿ, ತಮ್ಮ ಆಶೀರ್ವಾದದ ವಚನಾಮೃತದಿಂದ ನಮ್ಮನ್ನು ಪ್ರೋಕ್ಷಿಸ ಬೇಕು, ಎಂದು.

**ಇತ್ಥಂ ಭಕ್ತಜನೋದಿತಂ ಶ್ರುತಿಹಿತಂ ಸಂಮಾನ್ಯ ದೇವೀಮನೇ-**
**ಸ್ಥಾನಂ ಪ್ರತ್ಯಭಿಗಮ್ಯ ಶಾಸ್ತ್ರವಿಧಿವತ್ತದ್ದೇವತಾರಾಧನಮ್।**
**ಕೃತ್ವಾ ಧಾರ್ಮಿಕವಲ್ಲಭೋ ಮತಿಮತಾ ಧರ್ಮಸ್ಥಲಾಧೀಶ್ವರ-**
**ಶ್ರೀವೀರೇಂದ್ರಮಹಾಶಯೇನ ವಿನುತಃ ಶ್ರೀರಾಘವೇಂದ್ರೋ**
**ಬಭೌ ॥** ೨೩

ಹೀಗೆ ದೇವೀಮನೆ ಕ್ಷೇತ್ರದಿಂದ ಬಂದ ಭಕ್ತರು ಬಿನ್ನವಿಸಿದ ಶಾಸ್ತ್ರ ಸಂಮತವಾದ ಬಿನ್ನಪವನ್ನುಆಲೈಸಿ ಮನ್ನಿಸಿದ ಶ್ರೀಗುರುಗಳು ದೇವೀಮನೆ ಕ್ಷೇತ್ರಕ್ಕೆ ಪ್ರಯಾಣ ಮಾಡಿದರು. ಅಲ್ಲಿ ವಿಧಿವತ್ತಾಗಿ ಎಲ್ಲಾ ದೇವತಾಕಾರ್ಯಗಳನ್ನೂ ನಿರ್ವಹಿಸಿದರು. ಧರ್ಮಸ್ಥಳದ ಕ್ಷೇತ್ರದ ಮುಖ್ಯರೂ ಧೀಮಂತರೂ ಧಾರ್ಮಿಕ

ಪ್ರಿಯರೂ ಆದ ಶ್ರೀ ವೀರೇಂದ್ರಹೆಗಡೆಯವರು ಸಭೆಯಲ್ಲಿ ಶ್ರೀಗುರುಗಳನ್ನು ಸ್ವಾಗತಿಸಿ, ದೇವೀಮನೆಗೆ ಶ್ರೀಗಳವರು ದಯಮಾಡಿಸಿರುವ ಮಹತ್ವದ ಸಂಗತಿಯ ಹಿನ್ನೆಲೆಯನ್ನು ಶ್ರೀಗಳ ಕಾರ್ಯಗಳನ್ನು ಹೊಗಳಿದರು ಹೀಗೆ ಭಕ್ತಮಹಾಶಯ ರಿಂದ ಸ್ತುತ್ಯರಾದ ಶ್ರೀರಾಘವೇಂದ್ರಭಾರತೀಗಳು ಅಂದಿನ ಸಭೆಯಲ್ಲಿ ಕಂಗೊಳಿಸಿ ದರು.

**ಏವಂ ಚ ಕ್ಷಯವತ್ಸರಸ್ಯ ಬಹುಲೇ ಚೈತ್ರೇ ನವಮ್ಯಾಂ ತಿಥೌ**
**ಪ್ರಾತಶ್ಚಾಕೃತ ರಾಘವೇಂದ್ರಗುರುರಾಟ್ ದೇವ**
**ಪ್ರತಿಷ್ಠಾಪನಮ್ ।**
**ಭಕ್ತೈರ್ಭಕ್ತಿಪುರಃಸ್ಸೃತಾಂ ಸುವಿಹಿತಾಂ ಭಿಕ್ಷಾಂ ಗೃಹೀತ್ವಾ ಪ್ರಜಾಃ**
**ಮಧ್ಯಾಹ್ನಾತ್ಪರಮಾಶಿಷಾಽನು ಜಗೃಹೇ 'ಗುಂಗೋಡು'**
**ಮಭ್ಯಾಯಯೌ ॥ ೭೭**

ಶಾಲಿವಾಹನ ಶಕ ೧೯೨೯ನೆಯ ಕ್ಷಯ ಸಂವತ್ಸರದ ಚೈತ್ರಬಹುಳ ನವಮೀ ತಿಥಿಯಲ್ಲಿ ಜಗದ್ಗುರು ಶಂಕರಾಚಾರ್ಯ ಶ್ರೀರಾಘವೇಂದ್ರಭಾರತೀ ಸ್ವಾಮಿಗಳು ಬೆಳಿಗ್ಗೆ ದೇವತಾ ಪ್ರತಿಷ್ಠಾಪನೆಯನ್ನು ನೆರವೇರಿಸಿದರು ಭಕ್ತಿ ಶ್ರದ್ಧೆಯಿಂದ ವಿಧಿವತ್ತಾಗಿ ಭಕ್ತರು ಏರ್ಪಡಿಸಿದ್ದ ಭಿಕ್ಷೆಯನ್ನು ಸ್ವೀಕರಿಸಿ, ಆಸ್ತಿಕ ಮಹಾಜನರಿಗೆ ಮಂತ್ರಾಕ್ಷತೆಯನ್ನು ನೀಡಿ ಹರಸಿದರು, ಅಪರಾಹ್ಣದಲ್ಲಿ ಶ್ರೀಗುರುಗಳು ಕರೂರು ಸೀಮೆಯಲ್ಲಿರುವ "ಗುಂಗೋಡು" ಗ್ರಾಮಕ್ಕೆ ಪ್ರಯಾಣ ಮಾಡಿದರು.

**ಅನ್ಯೇದ್ಯುಶ್ಚ ಕರೂರುಸೀಮವಲಯಗ್ರಾಮಸ್ಥಿತಾಃ ಸಜ್ಜನಾಃ**
**ಪ್ರಾಚಾರ್ಯಂ ಪ್ರಣಿಪತ್ಯ ಸಾಂಜಲಿ ಯತಿಂ ವ್ಯಜ್ಞಾ-**
**ಪಯನ್ನಂಜಸಾ ।**
**ಸ್ವಾಮಿನ್ನಸ್ಮದುಪಾಸ್ಯದೈವತಮಿದಂ ಗೋಪಾಲಕೃಷ್ಣಾಭಿಧಂ**
**ಸ್ಥಾನಭ್ರಂಶಮವಾಪ್ಯ ತಿಷ್ಠತಿ ಶಿಲಾರೂಪೇಣ ಭವ್ಯಾಕೃತಿ ॥**

ಇನ್ನೊಂದು ದಿವಸ, ಸಾಗರತಾಲ್ಲೂಕು ಕರೂರು ಹೋಬಳಿಗ ಸೇರಿದ ಕರೂರು ಸೀಮೆಯ ಸುತ್ತಮುತ್ತಲಿನ ಸಜ್ಜನರಾದ ಗೃಹಸ್ಥರು ಶ್ರೀರಾಘವೇಂದ್ರ ಭಾರತೀ ಗುರುವರ್ಯರನ್ನು ಸಂದರ್ಶಿಸಿ, ನಮಸ್ಕರಿಸಿ ಕೈಜೋಡಿಸಿ ಬಿನ್ನವಿಸಿದರು, ಪೂಜ್ಯ ಗುರುಗಳೇ, ನಮ್ಮ ಸೀಮೆಯ ಭಕ್ತರ ಉಪಾಸ್ಯ ದೇವತೆಯಾದ ಶ್ರೀ ಗೋಪಾಲಕೃಷ್ಣನ ಶಿಲಾಮಯವಾದ ಕಲಾತ್ಮಕವಾದ ಭವ್ಯ ಮೂರ್ತಿಯು ಸ್ಥಾನ ಭ್ರಷ್ಟವಾಗಿದೆ.

ವಿತಸ್ಯಾಗಮಶಾಸ್ತ್ರದೃಷ್ಟವಿಧಿನಾ ಭೂಯಃ ಪ್ರತಿಷ್ಠಾಪನಂ
ಕರ್ತುಂ ನಿಶ್ಚಿನಮಾಮ ತತ್ರಭವತಾಂ ಸತ್ಸನ್ನಿಧಾನೇ ಗುರೋಃ ।
ತಸ್ಮಾತ್ಸತ್ರಭವಾನ್ ಕರೋತು ಸಫಲಾಮಸ್ಮಾಕಮಭ್ಯರ್ಥನಾಂ
ಪ್ರಾಯಃ ಪ್ರಾರ್ಥಿತದುರ್ಲಭಾ ನ ಹಿ ಭವಂತ್ಯಜ್ಞೇಷು ಹಿ
ಜ್ಞಾನಿನಃ ॥ ೭೯

ಗುರುಗಳೇ! ಪೂಜ್ಯರಾದ ತಮ್ಮ ಸನ್ನಿಧಾನದಲ್ಲಿ ಈ ಗೋಪಾಲಕೃಷ್ಣ ವಿಗ್ರಹಕ್ಕೆ ಆಗಮಶಾಸ್ತ್ರಪ್ರಕಾರ ತಿರುಗಿ ಪ್ರತಿಷ್ಠೆಮಾಡಿಸಬೇಕೆಂದು ನಾವು ಸಂಕಲ್ಪಿಸಿದ್ದೇವೆ. ಆದುದರಿಂದ ತಾವು ನಮ್ಮ ಪ್ರಾರ್ಥನೆಯನ್ನು ಸಾರ್ಥಕಗೊಳಿಸಬೇಕು ಜ್ಞಾನಿಗಳಾದ ದೊಡ್ಡವರು ಮೂಢಾತ್ಮರ ವಿಷಯದಲ್ಲಿ ಬಹುಶಃ ಅವರ ಬೇಡಿಕೆಗೆ ಅನಧೀನರಾಗಿ ಆಗುವುದಿಲ್ಲವಷ್ಟೆ.

ಶಿಷ್ಟಪ್ರಾರ್ಥನಯಾ ಸಮಾಗತವತೋ ದೇವಪ್ರತಿಷ್ಠಾಪನಂ
ಕರ್ತುಂ ಸರ್ವಪರಿಚ್ಛದೈಃ ಸಹ ಗುರೋರ್ಗುಂಗೋಡುವಲ್ಲೀಂ
ಪ್ರತಿ ।
ಚೈತ್ರೇ ನಾಪಮಿಕೇ ತಿಥೌ ಕವಿದಿನೇ ಮಾಸೇ ಕ್ಷಯಾಬ್ದೇ ಽಸಿತೇ
ಸಾಯಂ ಸ್ವಾಗತಿಕೋತ್ಸವಸ್ತು ಸುಮಹಾನಾಸೀತ್ಪ್ರಿಯಂ
ಭಾವುಕಃ ॥ ೮೦

ಶಾಲಿವಾಹನ ಶಕ ೧೯೦೯ನೆಯ ಕ್ಷಯಸಂವತ್ಸರದ ಚೈತ್ರಮಾಸದ ಬಹುಳ ನವಮೀ ತಿಥಿ ಶುಕ್ರವಾರದ ದಿವಸ ದೇವತಾಪ್ರತಿಷ್ಠೆಮಾಡಲು ಸರ್ವಪರಿವಾರ ದೊಡನೆ "ಗುಂಪುಗೋಡು" ಎಂಬ ಗ್ರಾಮಕ್ಕೆ ದಯಮಾಡಿ ಆಗಮಿಸಿರುವ ಶ್ರೀ ಮದ್ ರಾಘವೇಂದ್ರ ಭಾರತೀ ಸ್ವಾಮಿಗಳಿಗೆ ಸಂಜೆ ಪ್ರದೋಷಕಾಲದಲ್ಲಿ ಎಲ್ಲರಿಗೂ ಪ್ರೀತಿಯನ್ನುಂಟುಮಾಡುವ ಮಹತ್ತರವಾದ ಸ್ವಾಗತೋತ್ಸವವು ಏರ್ಪಟ್ಟಿತು.

ಆಗತ್ಯೈಷ ಸ ರಾಘವೇಂದ್ರಗುರುರಾಟ್ ಸತ್ಸಂಪ್ರದಾಯಾನುಗೋ
ಶಿಷ್ಯೈಃ ಸ್ವಾಗತಪೂರ್ವಕಂ ಹ್ಯಭಿನುತಃ ಸಾಮಾಜಿಕೈರ್ವಂದಿತಃ ।
ಸೀತಾರಾಮಶಶಾಂಕಮೌಲಿಚರಣಾಭ್ಯರ್ಚಾಂ ಚ ಸಾಯಂತನೀಂ–
ಕೃತ್ವಾ ಶ್ವಸ್ತನಕಾರ್ಯಮಪ್ಯುಪದಿಶನ್ ಧುರ್ಯಾಂಸ್ತದೋ
ತ್ಸೃಷ್ಟವಾನ್ ॥ ೮೧

ಸನಾತನ ಸಂಪ್ರದಾಯವನ್ನು ಅನುಸರಿಸಿ ಪೀಠಕ್ಕೆ ಬಂದಿರುವ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಪರಿವಾರಸಹಿತರಾಗಿ ಗುಂಗೋಡು ಗ್ರಾಮದ ಉತ್ಸವಕ್ಕೆ ಬಂದಕೂಡಲೇ ಪ್ರಮುಖರು ಸ್ವಾಗತಿಸಿ, ವಾದ್ಯದೊಡನೆ ವೇದಘೋಷದೊಡನೆ ಕರೆತಂದು ದೇವಾಲಯದ ಹೊರಗಣ ಚಪ್ಪರದಲ್ಲಿ ಬಿಜಯಗೈಸಿದರು ಬಳಿಕ ಸಾಮಾಜಿಕರೂ ಶಿಷ್ಯರೂ ಪೂರ್ಣಕುಂಭ ಸ್ವಾಗತಮಾಡಿ ವಂದಿಸಿದರು ಧೂಳಿಪಾದ ಪೂಜೆಯಾದೊಡನೆ ಶ್ರೀಗುರುಗಳು ಔಪಚಾರಿಕವಾಗಿ ನಾಲ್ಕು ಮಾತನಾಡಿ, ಮೊಕ್ಕಾಮಿಗೆ ತೆರಳಿದರು ಸಂಜೆಯ ಕರ್ತವ್ಯವಾದ ಸ್ನಾನವಮಾಡಿ ಮಡಿಯಾದ ಕಾಷಾಯವಸ್ತ್ರ ಧರಿಸಿ ಅವರು ಶ್ರೀಚಂದ್ರಮೌಳೀಶ್ವರ ಶ್ರೀ ಸೀತಾರಾಮಾದಿ ದೇವತೆಗಳಿಗೆ ಅರ್ಚನೆ ಮಾಡಿ, ಸಾಯಂಕಾಲದ ಅನುಷ್ಠಾನವನ್ನು ನಿರ್ವಹಿಸಿದರು ಬಳಿಕ ಸೀಮೆಯ ವೈದಿಕ ಗೃಹಸ್ಥಪ್ರಮುಖರೊಡನೆ ಪ್ರತಿಷ್ಠಾಸಂಬಂಧವಾದ ಕಾರ್ಯಕಲಾಪದ ಬಗ್ಗೆ ಮಾತನಾಡಿ. ಆ ಪ್ರಮುಖರನ್ನು ವಿಶ್ರಾಂತಿಗಾಗಿ ಬಿಟ್ಟುಕೊಟ್ಟರು

ಮಾತೃಸ್ಥಾನಯುತೇ ಕರೂರುವಲಯೇ ಮೂರ್ತೇಃ ಪ್ರತಿಷ್ಠಾಪನಂ
ಗುಂಗೋಡೌ ಹರಿತಾವನೀಧ್ರಶಿಖರೇ ಗೋವರ್ಧನಶ್ರೀಕರೇ ।
ಚೈತ್ರೇ ಮಾಸ್ಯಸಿತೇ ದಲೇ ಶನಿದಿನೇ ಪ್ರಾತರ್ದಶಮ್ಯಾಂ ತಿಥೌ
ಧರ್ಮಜ್ಞೋಽಕೃತ ರಾಘವೇಂದ್ರಗುರುರಾಡ್ ಗೋಪಾಲ-
ಕೃಷ್ಣಸ್ಯ ಸಃ ॥ ೮೨

ಶ್ರೀ ಗುರುವರ್ಯರಾದ ಶ್ರೀರಾಘವೇಂದ್ರಭಾರತೀಗಳ ಮಾತೃಸ್ಥಾನವಾದ ಮಾಗಲೂ ಗ್ರಾಮ ಸಾಗರ ತಾಲ್ಲೂಕಿನ ಕರೂರು ಸೀಮೆಯ ಗ್ರಾಮ ಸಮುದಾಯದೊಳಗೆ ಸೇರಿದೆ. ಈ ಕರೂರು ಸೀಮೆಯ ಮಾಗಲೂ ಗ್ರಾಮಕ್ಕೆ ಹತ್ತಿರವಾಗಿರುವ ಗುಂಗೋಡುಗ್ರಾಮ ಪರ್ವತ ಶ್ರೇಣಿಯ ನಡುವೆ ಇದೆ. ಗೋವರ್ಧನ ಪರ್ವತದ ಕಾಂತಿಯನ್ನು ಹೋಲುವ ಹಚ್ಚ ಹಸುರಿನ ಗುಡ್ಡದ ತಪ್ಪಲಿನಲ್ಲಿರುವ ಈ ಗುಂಗೋಡು ಗ್ರಾಮದಲ್ಲಿ ಶಾಲಿವಾಹನ ಶಕ ೧೯೦೯ನೆಯ ಕ್ಷಯ ಸಂವತ್ಸರದ ಚೈತ್ರ ಬಹುಳ ದಶಮಿ ಶನಿವಾರ ಬೆಳಿಗ್ಗೆ ಧರ್ಮಜ್ಞರಾದ ಶ್ರೀಮದ್ರಾಮಚಂದ್ರಾಪುರ ಮಠಾಧೀಶರಾದ ಶ್ರೀಮದ್‌ರಾಘವೇಂದ್ರಭಾರತೀಸ್ವಾಮಿಗಳವರು ತಮ್ಮ ದಿವ್ಯ ಹಸ್ತದಿಂದ ಶ್ರೀಗೋಪಾಲಕೃಷ್ಣ ದೇವರ ಮೂರ್ತಿಯ ಪ್ರತಿಷ್ಠಾಪನೆಯನ್ನು ಯಥಾಶಾಸ್ತ್ರವಾಗಿ ನೆರವೇರಿಸಿದರು

ಭಟ್ಟೈರ್ವೈದಿಕಪುಂಗವೈಃ ಕುಲಭವೈಃ ಪೌರಾಣಿಕೈಃ ಶಾಸ್ತ್ರಿಭಿಃ
ಗ್ರಾಮೀಣೈರ್ಹರಿಭಕ್ತಿಪೂರ್ಣ ಹೃದಯೈಃ ಸಾಕಂ
ಪುರಂಧ್ರೀಜನೈಃ ।
ನಾಂದೀಪೂರ್ವಕಮಾಗಮೋಕ್ತವಿಧಿವತ್ಪಾರಾಯಣಾದ್ಯಂಗಕೈಃ
ಯುಕ್ತಂ ಘಸ್ರಚತುಷ್ಟಯಾತ್ಮಕಮಭೂತ್ತದ್ದೇವತಾ-
ರಾಧನಮ್ ॥ ೮೩

ಸತ್ಕುಲ ಪ್ರಸೂತರೂ ಸಂಪ್ರದಾಯ ಸದಾಚಾರ ನಿಷ್ಠರೂ ಆದ ಭಟ್ಟರು, ಶಾಸ್ತ್ರಿಗಳು, ಪೌರಾಣಿಕರು, ಪುರೋಹಿತರು, ಶ್ರೋತ್ರಿಯಶ್ರೇಷ್ಠರು, ಋತ್ವಿಜರಾದ ಬ್ರಾಹ್ಮಣರು ಈ ದೇವತಾಪ್ರತಿಷ್ಠೆಯಲ್ಲಿ ಭಾಗವಹಿಸಿದ್ದರು ಮತ್ತು ಗ್ರಾಮಸ್ಥರಾದ ಅನೇಕ ಸ್ವಯಂಸೇವಕರೂ ಶ್ರೀಕೃಷ್ಣನ ಭಕ್ತಿರಸಪೂರ್ಣಮನಸ್ಕರಾದ ಮಹಿಳೆಯರೂ ಸಹ ನಾಲ್ಕು ದಿವಸದ ಈ ಉತ್ಸವದಲ್ಲಿ ಸಹಕರಿಸಿದರು. ಶ್ರೀಗೋಪಾಲಕೃಷ್ಣ ಪ್ರತಿಷ್ಠಾಪನೆಯ ಅನುಷ್ಠಾನವು ಶ್ರೀಗುರುಗಳ ಅನುಜ್ಞೆಯಂತೆ ಆಗಮಶಾಸ್ತ್ರದ ವಿಧಿಯಂತೆ ನಡೆಯಿತು. ನಾಂದೀ ಪುಣ್ಯಾಹ ಋತ್ವಿಗ್ವರಣ ಹೋಮ ಹವನಗಳು ವೇದಪಾರಾಯಣ ಭಾಗವತಪಾರಾಯಣ ಮುಂತಾದ ಅಂಗೋಪಾಂಗ ಸಹಿತವಾಗಿ ವಿಧಿವತ್ತಾಗಿ ಗುರುಗಳ ಸನ್ನಿಧಿಯಲ್ಲಿ ನಿರ್ವಿಘ್ನವಾಗಿ ನಡೆದು, ಬ್ರಾಹ್ಮಣ ಸುವಾಸಿನೀಸಂತರ್ಪಣಗಳಿಂದ ಪರಿಪೂರ್ಣವಾಯಿತು. ಶ್ರೀ ಗೋಪಾಲಕೃಷ್ಣನು ಈ ಅನುಷ್ಠಾನದಿಂದ ಸುಪ್ರೀತನಾದನು

**ತಸ್ಮಾತ್ ಅದ್ಯ ಹದುನ್ಮದಃ ಸ ಹರಯೋ ಶಕ್ರೋಽತಿವೃಷ್ಟ್ಯಾ ಪುರಾ**
**ಗೋಗೋಪಾನ್ವಿತ ಗೋಕುಲಂ ಜಲಮಯಂ ಕೃತ್ವಾ**
**ವಿಷಣ್ಣೋಽಧುನಾ ।**
**"ಗುಮ್‌ಗೋಡ್" ಕೃತಸನ್ನಿಧಿಂ ತ್ವಘಹರಂ ಕೃಷ್ಣಂ ಪ್ರಸಾದ್ಯಾತ್ಮನೋ**
**ನುಂತುಂ ಮೂರ್ಷ್ಣಾವಿಂವಾದ್ಯ ಭೂತಹಿತಕೃತ್ತ್ರಾಯಂ**
**ಪವರ್ಷಾದೃತಃ ॥ ೮೪**

ಹಿಂದೆ, ನಂದಗೋಕುಲವಾಸಿಗಳಾದ ಗೊಲ್ಲರು ಪ್ರತಿವರ್ಷವೂ ತನಗೆ ಸಲ್ಲಿಸುತ್ತಿದ್ದ ಕಾರುಹಬ್ಬದ ಪೂಜೆಯನ್ನು ತಪ್ಪಿಸಿ, ಆ ಪೂಜೆಯನ್ನು ಗೋವರ್ಧನ ಗಿರಿಗೆ ಸಲ್ಲಿಸುವಂತೆ ಗೊಲ್ಲರನ್ನು ಎತ್ತಿಕಟ್ಟಿ ತನಗೆ ಕೃಷ್ಣನು ಪೂಜೆ ತಪ್ಪಿಸಿದುದಕ್ಕಾಗಿ ಆಗ ಇಂದ್ರನು ಕೋಪಗೊಂಡು ಭಯಂಕರವಾಗಿ ಮಳೆಗರೆದು ಗೋಕುಲ. ಗೋವು ಗೊಲ್ಲರು ಎಲ್ಲರೂ ನೀರಿನಲ್ಲಿ ಮುಳುಗುವಂತೆ ಮಾಡಿ ಕೃಷ್ಣನ ಮೇಲೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಿದನಷ್ಟೆ, ಆದರೆ, ಲೀಲಾಮಾನುಷವಿಗ್ರಹನಾದ ಶ್ರೀ ಕೃಷ್ಣನು ಕಿರು ಬೆರಳಿನಿಂದ ಗೋವರ್ಧನಗಿರಿಯನ್ನು ಎತ್ತಿ ಗೋಪರನ್ನು ರಕ್ಷಿಸಿದ ಸುದ್ದಿ ಕೇಳಿದಮೇಲೆ ಇಂದ್ರನಿಗೆ ಶ್ರೀಕೃಷ್ಣನ ಅದ್ಭುತ ಸಾಮರ್ಥ್ಯದ ಅರಿವಾಗಿರಬೇಕು ದೊಡ್ಡವರಿಗೆ ಮಾಡಿದ ಅಪಚಾರ ಅತ್ಯಂತ ಶಿಕ್ಷಾರ್ಹ ಅಪರಾಧವಷ್ಟೆ. ಇನ್ನು ಇಂದ್ರನಿಗೆ ಕೃಷ್ಣನಲ್ಲಿ ಕ್ಷಮೆಯಾಚಿಸದ ಹೊರತು ಬೇರೆ ಮಾರ್ಗವಿಲ್ಲವಾಯಿತು. ಈಗ ಕಲಿಯುಗದಲ್ಲಿ ಆ ಶ್ರೀಗೋಪಾಲಕೃಷ್ಣನು "ಗುಂಗೋಡು" ಗ್ರಾಮದಲ್ಲಿ ಪ್ರತಿಷ್ಠಿತನಾದದ್ದನ್ನು ತಿಳಿದನು, ಅವನು ಈಗ ತಾನು ಹಿಂದ ಮಾಡಿದ ಅತಿವೃಷ್ಟಿ

ಯಿಂದ ತನ್ನ ಮೇಲೆ ಅನಮಾಧಾನವನ್ನು ಹೋಗಲಾಡಿಸಿಕೊಂಡು ತನ್ನ ತಪ್ಪನ್ನು ತೊಳೆದುಕೊಳ್ಳುವುದಕ್ಕೋ ಎಂಬಂತೆ ಆದಿನ ಸಂಜೆ "ಗುಂಗೋಡು" ಗ್ರಾಮದಲ್ಲಿ ಸುವೃಷ್ಟಿ ಗರೆದನು

**ಆಕಲ್ಪೈಃ ಪರಿಧಾನಹಾರಮುಕುಟೈರಾಭೂಷಿತಂ ದೇಶಿಕಂ**
**ರಾಜಾರ್ಹೇ ರಜತಾಸನೇ ಪರಿಗತಂ ರಾಜಾಧಿರಾಜೋಪಮಮ್**
**ತಸ್ಮಿನ್ ದೇವಮಹೋತ್ಸವಸ್ಯ ಸಮಯೇ ದ್ರಷ್ಟುಂ ಸಮುತ್ಕಂಠಿತಾ**
**ಶಿಷ್ಯಾಲಿಸ್ತನುಯಾಚತ ಹ್ಯನುಮತಿಂ ಲೇಭೇ ಗುರೋರುತ್ಸವೇ॥**

ಆ ಗೋಪಾಲಕೃಷ್ಣದೇವರ ಪ್ರತಿಷ್ಠಾಮಹೋತ್ಸವದ ಸಮಯದಲ್ಲಿ ಅಲ್ಲಿ ನೆರೆದಿದ್ದ ಭಕ್ತರಾದ ಶಿಷ್ಯ ಸಮೂಹವು ವಿಶೇಷ ಮೌಲ್ಯವುಳ್ಳ ಉಡಿಗೆ ತೊಡಿಗೆ ಹಾರ. ವಜ್ರಖಚಿತವಾದ ರತ್ನಕಿರೀಟ ಮೊದಲಾದ ವೇಷ ಭೂಷಣಗಳಿಂದ ಅಲಂಕೃತರಾದ, ಶ್ವೇತಚ್ಛತ್ರ ಚಾಮರಾದಿ ಸಮಸ್ತ ಸಾರ್ವಭೌಮ ಮರ್ಯಾದಾ ವಿಶೇಷಕ್ಕೆ ಅರ್ಹವಾದ ಬೆಳ್ಳಿಯ ಸಿಂಹಾಸನದ ಮೇಲೆ ಮಂಡಿಸಿರುವ ಮರ್ಯಾದೆಯ ಬಿರುದು ಬಾವಲಿಗಳಿಂದ ಶೋಭಿಸುವ ಶ್ರೀಗುರುವರ್ಯರನ್ನು ಉತ್ಸವದಲ್ಲಿ ನೋಡ ಬೇಕೆಂದು ಉತ್ಕಂಠಿತವಾಯಿತು ತಮ್ಮ ಇಚ್ಛೆಯನ್ನು ಪೂರ್ಣಗೊಳಿಸಬೇಕೆಂದು ಅವರನ್ನು ಬೇಡಿಕೊಂಡಿತು ಬಳಿಕ ಶಿಷ್ಯವತ್ಸಲರಾದ ಗುರುಗಳ ಅನುಮತಿಯನ್ನು ಶಿಷ್ಯ ಸಮೂಹವು ಪಡೆಯಿತು

**ದ್ವಾದಶ್ಯಾಂ ವಿಧುವಾಸರೇಽಸಿತದಲೇ ಚೈತ್ರೇ ಕ್ಷಯಾಬ್ದೇ ನಿಶಿ**
**ಪ್ರಾಚಾರ್ಯಸ್ಯ ಕಿರೀಟಧಾರಣಸಮಾರೋಹಃ ಕಿಲಾಯೋಜಿತಃ**
**ಸ್ಥಾನೇ ಚೈತದಶೇಷ ಶಿಷ್ಯಜನತಾ ಪ್ರಾಪ ಸ್ವಚಕ್ಷುಃ ಫಲಂ**
**ಮತ್ವಾ ಪಿಂಗಜಟಾಕಿರೀಟಕಲಿತಂ ಬಾಲೇಂದುಮೌಲಿಂ**
**ಗುರುಮ್ ॥** **೮೫**

ಶಾಲಿವಾಹನ ಶಕ೧೮೦೯ನೆಯ ಕ್ಷಯ ಸಂವತ್ಸರದ ಚೈತ್ರ ಬಹುಳ ದ್ವಾದಶೀ ಸೋಮವಾರ ರಾತ್ರಿ ಗುರುಗಳಿಗೆ ಕಿರೀಟಧಾರಣಾ ಮಹೋತ್ಸವವು ಏರ್ಪಟ್ಟಿತ್ತು. ಇದು ಅತ್ಯಂತ ಸಮಂಜಸ. ಏಕೆಂದರೆ. ಸಮಸ್ತ ಶಿಷ್ಯಸ್ತೋಮವೂ ಕಂದು ಹಳದಿ ಬಣ್ಣದ ಜಟಾಕಿರೀಟ ಧಾರಿಯಾದ ಬಾಲೇಂದುಶೇಖರನಾದ ಶಂಕರನೇ ಆಗಿರುವ ಶ್ರೀ ರಾಘವೇಂದ್ರಭಾರತೀಸ್ವಾಮಿಗುರುವರ್ಯರನ್ನು ಕಂಡು ತನ್ನ ಕಣ್ಣುಗಳ ಸಾರ್ಥಕ್ಯವನ್ನು ಪಡೆಯಿತು.

ಶಿಷ್ಯಾ ಭಕ್ತಿಪುರಸ್ಕೃತೇನ ಮನಸಾ ಸಂಪ್ರೀಯಮಾಣಾ ಭೃಶಂ
ಪೀಠೇ ರಾಜತ ಸತ್ಪರಿಚ್ಛದ ಸಿತಚ್ಛತ್ರಾನ್ವಿತೇ ತಸ್ಥುಷಃ ।
ವಿದ್ವದ್ವೈದಿಕಪಾರಿಷದ್ಯ ವಿಲಸದ್ವೇದ್ಯಾಂ ದ್ಯುಲೋಕದ್ಯುತಾ-
ಪಾಸ್ಥಾನ್ಯಾಮುಪಚಾರಪೂರ್ವಕಮುಪಗ್ರಾಹ್ಯಂ
ಗುರೋರರ್ಪಯನ್ ॥ ೮೭

ಅಂದಿನ ಸಭೆಯು ರಾಜಸಭೆಯಂತಿತ್ತು. ಅಂದಿನ ಆಸ್ಥಾನದ ನಡುವ ಪರಿಷ್ಕೃತವಾದ ವೇದಿಕೆ ಕಂಗೊಳಿಸುತ್ತಿತ್ತು. ವಿದ್ವಾಂಸರು, ವೈದಿಕರು ಲೌಕಿಕರು, ಸಭಾಸಭ್ಯರು ಮೊದಲಾದವರು ಸಭೆಯಲ್ಲಿ ಉಪಸ್ಥಿತರಿದ್ದರು. ವೇದಿಕೆಯ ನಡುವೆ ಬೆಳ್ಳಿಯ ಸಿಂಹಾಸನವಿತ್ತು ಅದನ್ನು ಬೆಳ್ಳಿ ಬಂಗಾರದ ಉಪಕರಣಗಳಿಂದ ಸಿಂಗರಿಸಿದ್ದರು ಸಿಂಹಾಸನಕ್ಕೆ ಬಿಳಿಕೊಡೆಯನ್ನು ಅಳವಡಿಸಲಾಗಿತ್ತು, ದೇವಲೋಕದ ಸಭಾಮಂದಿರದ ಶೋಭೆ ಆ ಸಭೆಗೆ ಉಂಟಾಗಿತ್ತು ಹೀಗಿರುವ ಆ ಸಭೆಯಲ್ಲಿ ಶ್ರೀ ಗುರುವರ್ಯರು ಬೆಳ್ಳಿಯ ಭದ್ರಾಸನದಲ್ಲಿ ಮಂಡಿಸಿದ್ದರು ವಾದ್ಯಗಳು ಮೊಳಗುತ್ತಿದ್ದುವು ವಿದ್ಯುದ್ದೀಪಗಳು ಬೆಳಗುತ್ತಿದ್ದವು ಆಗ ಶಿಷ್ಯಶ್ರೇಣಿಯು ಭಕ್ತಿಭರಿತವಾದ ಮನಸ್ಸಿನಿಂದ ಗುರುಗಳಿಗೆ ಪೂಜೆ ಸಲ್ಲಿಸಿ ಗುರುಕಾಣಿಕೆ ಅರ್ಪಿಸಿತು

ತಸ್ಯಾಂ ರಾಷ್ಟ್ರಿಯಶಾಸಕೌ ಜನಹಿತಾಸಕ್ತೌ ಗುರೋಸ್ಸಮ್ಮತೌ
ನಶ್ಯಜ್ಜೀವನಹೇತುಭೂತವನಭೂಮ್ಯಾದಿಪ್ರಜೋದ್ಧಾರಕೌ ।
ತಿಮ್ಮಪ್ಪಾಭಿಧಹೆಗ್ಗಡೇಬುಧವರಶ್ರೀಶ್ರೀನಿವಾಸಾವುಭಾ-
ವುಷ್ಣೀಷಾದಿ ವಿತೀರ್ಯ ಚಾರ್ಯಮತಿನಾ ಸಮ್ಮಾನಿತೌ
ಯೋಗಿನಾ ॥ ೮೮

ಆ ದಿನದ ಆಸ್ಥಾನದಲ್ಲಿ ಸದ್ಬುದ್ಧಿಯುಳ್ಳ ಶ್ರೀರಾಘವೇಂದ್ರಭಾರತೀಸ್ವಾಮಿಂಗಳು ಪ್ರಜಾಶಾಸಕರಾಗಿದ್ದ ಶ್ರೀಲಿಂಗದ ಹಳ್ಳಿ ತಿಮ್ಮಪ್ಪ ಹೆಗ್ಗಡೆಯವರಿಗೂ, ಮಾಜಿ ಮಂತ್ರಿಗಳಾಗಿದ್ದ ಧೀಮಂತ ಕಾನಗೋಡು ಶ್ರೀನಿವಾಸ ಅವರಿಗೂ, ರೇಶ್ಮೆಯ ಮುಂಗುಟ ಹೊದೆಯಿಸಿ ಉಷ್ಣೀಷಕೊಟ್ಟು ಮಂತ್ರಾಕ್ಷತೆಯಿತ್ತು ಸಮ್ಮಾನಿಸಿದರು. ಸಮ್ಮಾನಿತರಾದ ಈ ಇಬ್ಬರೂ ಜನಹಿತ ಕಾರ್ಯದಲ್ಲಿ ಆಸಕ್ತರಾಗಿದ್ದಾರೆ ಇವರು ಶರಾವತೀ ಹೊಳೆಯ ಕಟ್ಟೆಯಿಂದ ನೀರುತುಂಬಿ ತಮ್ಮ ತಮ್ಮ ಅರಣ್ಯ, ಅಡಿಕೆ ತೋಟ ಗದ್ದೆಗಳು ಮುಳುಗಿ ಹೋದಾಗ ಕಂಗೆಟ್ಟ ಈ ಸೀಮೆಯ ಜನರಿಗೆ ವಿವಿಧ ಬಗೆಯಿಂದ ಸಹಕಾರನೀಡಿ ಪ್ರಜೋಪಕಾರಮಾಡಿ ಜನಪ್ರಿಯರಾಗಿದ್ದಾರೆ.

**ಪೌರೋಹಿತ್ಯವಿಚಕ್ಷಣಾಯ ಸುಮನಃ ಶ್ಲಾಘ್ಯಾಯ ನಾರಾಯಣ-**
**ಪ್ರಖ್ಯಾಯಾಭಿಜನಾಯ ಕಿಡುಂಬೇವಾಸಿನೇ ಶ್ರೀಮತೇ ।**
**ದತ್ವಾ ವೈದಿಕಧಾರ್ಯಮಾರ್ಯವಿನುತಂ ಸೂಕ್ಷ್ಮೋಷವಸ್ತ್ರಾದಿ ತಂ**
**ಸೋಽಯಂ ಮಾಂಗಲಿಕೀಮಥಾಶಿಷಮುದೀರ್ಯಾನ್ವಗ್ರಹೀ-**
**ದ್ದೇಶಿಕಃ ॥ ೮೯**

ಅಂದಿನ ಆಸ್ಥಾನದಲ್ಲಿ ಶ್ರೀರಾಘವೇಂದ್ರಭಾರತೀಗುರುವರ್ಯರು ವೈದಿಕ ಶ್ರೇಷ್ಠರಾದ ಕಿಡುಂಬೆ ಗ್ರಾಮವಾಸಿ ಶ್ರೀ ನಾರಾಯಣ ಭಟ್ಟರಿಗೆ ವೈದಿಕರು ಧರಿಸುವ ಧೋತ್ರ ರುಮಾಲುಗಳನ್ನು ಕೊಟ್ಟು ಮಂಗಳಾಶಂಸನ ಕೋರಿ ಆಶೀರ್ವದಿಸಿ, ಮಂತ್ರಾಕ್ಷತೆಯಿತ್ತು ಅವರನ್ನು ಅನುಗ್ರಹಿಸಿದರು. ಸಮ್ಮಾನಿತರಾದ ಶ್ರೀ ಕಿಡುಂಬೆ ನಾರಾಯಣ ಭಟ್ಟರು ಸದಾಚಾರ ಸಂಪನ್ನರೂ ಒಳ್ಳೆಯ ಮನೆತನದಲ್ಲಿ ಹುಟ್ಟಿದವರೂ ಆಗಿದ್ದಾರೆ ಇವರು ಕರೂರು ಸೀಮೆಯಲ್ಲಿ ಪ್ರಸಿದ್ಧಪುರೋಹಿತರು ಪೌರೋಹಿತ್ಯದಲ್ಲಿ ಇವರಿಗೆ ಚೆನ್ನಾದ ಅನುಭವವಿದೆ. ವಿದ್ವಾಂಸರು ಇವರ ಆಚಾರ್ಯತ್ವವನ್ನು ಮೆಚ್ಚಿದ್ದಾರೆ

**ಮಾಹಾತ್ಮ್ಯಶ್ರವಣೇನ ಗೋಕುಲಪತೇಃ ಕೃಷ್ಣಸ್ಯ ಭಕ್ತಾಃ ಸಮೇ**
**ಶಿಷ್ಯಾಸ್ತಸ್ಯ ಚ ರಾಘವೇಂದ್ರಯತಿನಃ ಸೂಕ್ತ್ಯಾ ಚ**
**ಮೃದ್ವೀಕಯಾ ।**
**ಸನ್ಮಾನೇನ ಸದಕ್ಷಿಣೇನ ಸುಧಿಯೋ ಭವ್ಯೋತ್ಸವೇನಾಂಗನಾಃ**
**ಮೃಷ್ಟಾನ್ನೇನ ಮಹಾಜನಾಸ್ಸಮಭವಂಸ್ತುಷ್ಟಾಶ್ಚ**
**ಕೃಷ್ಣೋತ್ಸವೇ ॥ ೯೦**

ಹೀಗೆ 'ಗುಂಗೋಡು' ಗ್ರಾಮದಲ್ಲಿ ನಡೆದ ಶ್ರೀ ಗೋಪಾಲಕೃಷ್ಣನ ಪ್ರತಿಷ್ಠಾ ಮಹೋತ್ಸವದಲ್ಲಿ ಸೇರಿದವರಲ್ಲಿ ಶ್ರೀಕೃಷ್ಣಭಕ್ತರು ಬಾಲ ಗೋಪಾಲನಾದ ಕೃಷ್ಣನ ಬಾಲಲೀಲಾ ಮಹಿಮೆಯ ಶ್ರವಣದಿಂದ ಸಂತುಷ್ಟರಾದರು ಗುರುಭಕ್ತರಾದ ಶಿಷ್ಯರು ಶ್ರೀರಾಘವೇಂದ್ರ ಭಾರತೀ ಗುರುಗಳ ದ್ರಾಕ್ಷಾಮಧುರವಾದ ಪ್ರವಚನದಿಂದ ಸಂತುಷ್ಟರಾದರು ಋತ್ವಿಜರಾದ ವೇದಪಂಡಿತರು ಸಮ್ಮಾನ ಮತ್ತು ದಕ್ಷಿಣೆಗಳಿಂದ ತೃಪ್ತಿಗೊಂಡರು. ಉತ್ಸವಪ್ರಿಯರಾದ ನಾರಿಯರು ಭವ್ಯವಾದ ಕೃಷ್ಣೋತ್ಸವ ಮತ್ತು ಗುರುಗಳ ಕಿರೀಟೋತ್ಸವಗಳ ವೀಕ್ಷಣದಿಂದ ತುಷ್ಟಿ ಪಡೆದರು. ಎಲ್ಲಾ ಮಹಾಜನರೂ ಮೃಷ್ಟಾನ್ನ ಭೋಜನದಿಂದ ತೃಪ್ತಿ ಪಡೆದರು

ನಿರ್ವರ್ತ್ಯಾತ್ರಿತವಲ್ಲಭೋ ಯತಿಪತಿಃ ಕೃಷ್ಣಪ್ರತಿಷ್ಠಾಪನಂ
ತದ್ದೇವಾಲಯಕೃದ್ಧಯೇ ಬಹುಧನಾನ್ಯಾಶೀರ್ಭಿರಾರ್ಯೋ
ದದೌ ।
ತಸ್ಮಾದ್ಗ್ರಾಮತಃ ಸಮಾಗತೈಸ್ಸುಜನೈಃ ಸ್ನೇಹೋತ್ಥಬಾಷ್ಪಾಂಬುನಾ
ಕೃಚ್ಛ್ರಾನ್ಮುಕ್ತ ಇವಾಜಗಾಮ ನಗರಂ ತೀರ್ಥಹಳ್ಳಿ
ನಾಮಾಂಕಿತಮ್ ॥ ೯೧

ಶಿಷ್ಯ ಪ್ರಿಯರಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳು ಶ್ರೀಗೋಪಾಲ ಕೃಷ್ಣದೇವತಾ ಮೂರ್ತಿಪ್ರತಿಷ್ಠಾಪನಾ ಮಹೋತ್ಸವವನ್ನು ನೆರವೇರಿಸಿ, ಆ ದೇವಾಲಯದ ಕಟ್ಟಡ ನಿರ್ಮಾಣದ ಬಗ್ಗೆ ಬಹು ಧನವುಳ್ಳ ಸವರ್ಣ ಮಂತ್ರಾಕ್ಷತೆ ಯನ್ನು ದೇವಾಲಯದ ಸಮಿತಿಗೆ ಕೊಟ್ಟು ಆಶೀರ್ವದಿಸಿದರು. ಅನಂತರ ಆ ಗುಂಗೋಡು ಗ್ರಾಮದ ಅಕ್ಕಪಕ್ಕದಲ್ಲಿ ವಾಸಿಸುವವರೂ ಉತ್ಸವಕ್ಕೆ ಬಂದಿರುವವ ರೂ ಗುರುಭಕ್ತರೂ ಆದ ಸಜ್ಜನರಾದ ಏಷ್ಯರ ಕಂಬನಿಯಿಂದ ಬಹು ಪ್ರಯಾಸ ದಿಂದ ಬಿಡುಗಡೆ ಹೊಂದಿದರೋ ಎಂಬಂತೆ ಶ್ರೀಮದಾಚಾರ್ಯರು ಗುಂಗೋಡು ಗ್ರಾಮದಿಂದ ತೀರ್ಥಹಳ್ಳಿಗೆ ಬಂದರು.

ಆಚಾರ್ಯಃ ಕಿಲ ಷಷ್ಟಿಹಾಯನವಯಸ್ಯದ್ಯ ಸ್ಥಿತೋಽಕುಂಠಯಾ
ಬುದ್ಧ್ಯಾ ಧಾರಣಯಾ ಕಿಲ ಪ್ರತಿಭಯಾ ಯುಕ್ತೋ
ದೃಢೈರಂಗಕೈಃ ।
ತೇಜಸ್ವೀ ಸ್ಮೃತಿಮಾನ್ ಸ್ವಭಾವಮಧುರೋ ಬ್ರಹ್ಮೈಕನಿಷ್ಠಃ ಸುಧೀಃ
ಭಾರತ್ಯುತ್ತರಶಬ್ದಭಾಗ್ ವಿಲಸತಿ ಶ್ರೀರಾಘವೇಂದ್ರೋ ಯತಿಃ ॥

ಪರಿವ್ರಾಜಕಾಚಾರ್ಯರಾದ ಶ್ರೀರಾಘವೇಂದ್ರಭಾರತೀಸ್ವಾಮಿಗಳಿಗೆ ಈಗ ಅರವತ್ತು ವಯಸ್ಸು ತುಂಬಿದೆ. ಆದರೂ ಅವರ ಬುದ್ಧಿ ಚುರುಕಾಗಿದೆ ನೆನಪು ಕುಸಿಯಲಿಲ್ಲ. ಅವರಿಗೆ ಹೊಸ ಹೊಸ ವಿಷಯಗಳ ಹೊಳಹಿನ ಪ್ರಜ್ಞೆ ಮಂಕಾಗ ಲ್ಲಿಲ್ಲ. ಅವರ ಕಾಲು ಕೈ ಮುಂತಾದ ಅವಯವಗಳು ದೃಢವಾಗಿವೆ ಧೀಮಂತರೂ ಬ್ರಹ್ಮೈಕನಿಷ್ಠರೂ ಆದ ಅವರ ಗುಣ ಎಲ್ಲರಿಗೂ ಪ್ರಿಯವಾಗಿದೆ. ಇಂತಹ ಗುರು ಗಳಾದ ಅವರು ಸ್ಮೃತಿವಂತರೂ ತೇಜಸ್ವಿಗಳೂ ಆಗಿರುತ್ತಾರೆ.

ಶ್ರೀಮಚ್ಛಂಕರದೇಶಿಕಸ್ಯ ಭಗವತ್ಪಾದಸ್ಯ ಶಿಷ್ಯಾವಲೌ
ಜ್ಯೇಷ್ಠಸ್ಯಾರ್ಯಸುರೇಶ್ವರಸ್ಯ ವಿನಯಿಷ್ವಾದ್ಯಸ್ಯ ಸಂನ್ಯಾಸಿನಃ ।
ವಿದ್ಯಾನಂದಗುರೋರಖಂಡಕೃಪಯಾ ಹ್ಯಚ್ಛಿನ್ನಪಾರಂಪರೀ
ವ್ಯಾಖ್ಯಾಪೀಠಮಧಿಷ್ಠಿತೋ ವಿಜಯತಾಂ
ಶ್ರೀರಾಘವೇಂದ್ರಶ್ಚಿರಮ್ ॥

ಶ್ರೀಮದಾದ್ಯಶಂಕರಭಗವತ್ಪಾದರ ಶಿಷ್ಯರಲ್ಲಿ ಹಿರಿಯರಾದ ಸುರೇಶ್ವರಾಚಾರ್ಯರ ಶಿಷ್ಯರೊಳಗೆ ಜ್ಯೇಷ್ಠರಾದ ವಿದ್ಯಾನಂದಾಚಾರ್ಯರ ಕೃಪೆಯಿಂದ ಹರಿದು ಬಂದಿರುವ ಅವಿಚ್ಛಿನ್ನ ಶಿಷ್ಯಪರಂಪರೆಯು ವ್ಯಾಖ್ಯಾನಪೀಠದಲ್ಲಿ ಮಂಡಿಸಿರುವ ಶ್ರೀಮದ್ರಾಮಚಂದ್ರಾಪುರದ ಮಠಾಧೀಶರಾದ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳು ಚಿರಕಾಲ ಸರ್ವೋತ್ಕರ್ಷದಿಂದ ವಿರಾಜಿಸಲಿ,

### ಯುಗ್ಮಕಮ್ (ವಸಂತ ತಿಲಕಾವೃತ್ತಮ್)

**ಕೋ ವಾ ತಪೋಧನಕುಲಾಭಿಜನೋ ಮನೀಷೀ**
**ವೈರಾಗ್ಯಭಾಗಪಗತಾಖಿಲಶೋಕಮೋಹಃ ।**
**ಶಿಷ್ಯೇಷ್ವವತಾಪ ಪರಿಹಾರ ಸಮಾಹಿತಾತ್ಮಾ**
**ಬ್ರಹ್ಮಾನಬೋಧ ಸಮುದೃಷ್ಟಸಮಸ್ತಲೋಕಃ ॥** ೯೪

**ಈದೃಗ್ಯತೀಶ್ವರ ಮಹಾಶಯ ಸತ್ತ್ವಶಾಲೀ**
**ಪೀಠೇ ಕದಾ ಭವತೀ ಚಾತ್ರ ಮಹಾನುಭಾವಃ।**
**ಶ್ರೀರಾಘವೇಂದ್ರ ಯತಿರಾಜಕರಾರವಿಂದ-**
**ಜನ್ಮಾ ಯತೀಂದ್ರಪದಲಕ್ಷಣ ಲಕ್ಷಿತಾತ್ಮಾ ॥** ೯೫

ತಪೋಧನರಾದ ಮಹರ್ಷಿಗಳವಂಶದಲ್ಲಿ ಭೂತನೂ ಪ್ರಾಜ್ಞನೂ ವೈರಾಗ್ಯಶಾಲಿಯೂ ಶೋಕಮೋಹಗಳನ್ನು ತೊರೆದಿರುವವನೂ ಶಿಷ್ಯರ ಹೃದಯ ತಾಪವನ್ನು ಹೋಗಲಾಡಿಸುವಲ್ಲಿ ಏಕಾಗ್ರಬುದ್ಧಿಯುಳ್ಳವನೂ ಸಾಕ್ಷಾದಪರೋಕ್ಷಬ್ರಹ್ಮವನ್ನು ತಿಳಿದವನೂ ಬ್ರಹ್ಮನಿಂದ ಹುಲ್ಲು ಕಡ್ಡಿಯವರೆಗೆ ಇರುವ ಸಕಲ ವಸ್ತುಗಳಲ್ಲಿಯೂ ಪರಿಪೂರ್ಣವಾದ ಚೈತನ್ಯವಸ್ತುವನ್ನೇ ಕಾಣಬಲ್ಲ ಮಹಿಮೆಯುಳ್ಳವನೂ ಇಂತಹ ಯತೀಶ್ವರ ಮಹಾಶಯರ ಸತ್ತ್ವವನ್ನು ಹೊಂದಿರುವವನೂ ಆಗಿ ಶ್ರೀರಾಘವೇಂದ್ರಭಾರತೀಸ್ವಾಮಿಗಳ ಕರಾರವಿಂದಸಂಜಾತನೂ ಯತೀಂದ್ರಸ್ಥಾನಕ್ಕೆ ಅರ್ಹವಾದ ಲಕ್ಷಣವುಳ್ಳವನೂ ಆದ ಯಾವ ಮಹಾನುಭಾವನು ಮುಂದೆ ಈ ಶ್ರೀರಾಮಚಂದ್ರಾಪುರದ ವ್ಯಾಖ್ಯಾನ ಪೀಠದಲ್ಲಿ ಮಂಡಿಸಲಿರುವನೋ ಏನೋ!

### (ಮಂದಾಕ್ರಾಂತಾವೃತ್ತಂ)

**ಸೀತಾಜಾನಿರ್ದಿಶತು ಕುಶಲಂ ರಾಘವೋ ನಃ ಪ್ರಸನ್ನೋ**
**ಗೌರೀನಾಥೋ ಮೃಡಯತು ವಿಪಶ್ಚಿನ್ಮಯಶ್ಚಂದ್ರಮೌಲಿಃ ।**
**ಶ್ರದ್ಧಾಂ ಭಕ್ತಿಂ ನಿಜಪದಯುಗೇ ಸರ್ವದಾ ನಃ ಕೃಪಾಲುಃ**
**ದತ್ವಾ ಶ್ರೇಯೋ ವಿತರತು ಗುರುಃ ಶಿಷ್ಯಹೃತ್ತಾಪಚಂದ್ರಃ ॥**

ಸೀತಾಪತಿಯೂ ಪ್ರಸನ್ನನೂ ಆದ ಶ್ರೀರಾಮನು ನಮಗೆ ನೆಮ್ಮದಿಯನ್ನು ನೀಡಲಿ. ಉಮಾಪತಿಯೂ ಚಿನ್ಮಯನೂ ಮಂಗಳಮಯನೂ ಆದ ಚಂದ್ರಮೌಳಿಯು ನಮ್ಮನ್ನು ಸುಖಪಡಿಸಲಿ. ಶಿಷ್ಯರ ಮಾನಸಿಕ ತಾಪವನ್ನಿಂಗಿಸುವ ತಂಗದಿರನೂ ಕೃಪಾಳುವೂ ಆದ ಗುರುವು ತನ್ನ ಅಂಘ್ರಿಯುಗಳವೇಲೆ ಯಾವಾಗಲೂ ಶ್ರದ್ಧೆಯನ್ನೂ ಭಕ್ತಿಯನ್ನೂ ನಮಗೆ ಕೊಟ್ಟು ಶ್ರೇಯಸ್ಸನ್ನು ನೀಡಲಿ

(ಅನುಷ್ಟುಪ್ ವೃತ್ತಮ್)

ಕಿಂಚ,

**ಅಧುನಾತನವರ್ಷೇಷು ಚಾತುರ್ಮಾಸ್ಯವ್ರತೇ ಸ್ಥಿತಃ ।**
**ಸದ್ಗುರೂ ರಾಘವೇಂದ್ರೋಽಸೌ ಧ್ಯಾನ ನಿಷ್ಠೋಽತ್ಯಶೋಭತ ॥** ೯೭

ಮತ್ತು, ಸದ್ಗುರು ಶ್ರೀರಾಘವೇಂದ್ರಭಾರತೀಸ್ವಾಮಿಗಳವರು ಈಚಿನ ವರ್ಷಗಳಲ್ಲಿ ತಮ್ಮ ಸಂಪ್ರದಾಯದಂತೆ ಚಾತುರ್ಮಾಸ್ಯವ್ರತದ ದೀಕ್ಷೆಯನ್ನು ಕೈಗೊಂಡು ಸಂಕಲ್ಪಮಾಡಿ ಏಕಾಂತವಾಗಿ ಧ್ಯಾನದಲ್ಲಿರುತ್ತಿದ್ದರು ಆಗ ಅವರು ಅತಿಶಯವಾಗಿ ಶೋಭಿಸುತ್ತಿದ್ದರು

**ಸಂಕ್ಷಿಪ್ತಪದವಿನ್ಯಾಸಾ ಬಹ್ವರ್ಥಾ ಧ್ಯಾನಗೋಚರಾ ।**
**ಆತ್ಮವಿದ್ಯಾಽಽಖ್ಯಾಯಿಕಾಖ್ಯಾ ಛಂದೋಬದ್ಧಾ ಹಿ ವಾಙ್ಮಯೀ ॥** ೯೮

**ಕಾರುಣ್ಯವಾಹಿನೀ ಪುಣ್ಯಾ ವರ್ಧಿನೀ ಶಿಷ್ಯಸಂಪದಾಮ್ ।**
**ಯಾ ಗುರೋ ರಾಘವೇಂದ್ರಸ್ಯ ಮುಖಪದ್ಮಾದ್ವಿನಿಃಸೃತಾ ॥** ೯೯

**ಕವಿತಾಂ ತಾಂ ತತಃ ಶಿಷ್ಯಮಂಡಲೀ ಹೃಷ್ಟಮಾನಸಾ ।**
**ಸಂಜಗ್ರಾಹ ವಿದಿತ್ವೈನಾಂ ಮುದ್ರಾಪಿತವತೀ ಚ ಸಾ ॥** ೧೦೦
**ತಸ್ಯಾಃ ಪುಸ್ತಕರೂಪಿಣ್ಯಾ ಉದ್ಘಾಟನಮಹೋಚಿತಮ್ ।**
**ನಿರೀಕ್ಷತೇ ಸ್ಮ ಸಾ ಕಾಲಂ ಪ್ರಾಚ್ಯಾಂ ಸೂರ್ಯೋದಯಂ ಯಥಾ ॥**

ಆಗ, ಧ್ಯಾನದಲ್ಲಿರುವ ಶ್ರೀ ರಾಘವೇಂದ್ರಭಾರತೀಸ್ವಾಮಿಗಳ ಮೊಗದಾವರೆಯಿಂದ ಸಂಕ್ಷಿಪ್ತಪದಗಳುಳ್ಳ, ಬಹ್ವರ್ಥಗರ್ಭಿತವೂ ಆದ ಕಾವ್ಯವಾಣಿಯಂ ತನ್ನಷ್ಟಕೆ ತಾನೇ ಹೊರಹೊಮ್ಮಿತು. ಶಿಷ್ಯ ಸಮುದಾಯದಲ್ಲಿರುವ ವಿದ್ಯಾಧನ, ಗೋಧನ, ಭೂಧನ, ಪ್ರಜಾಧನ, ಐಶ್ವರ್ಯ ಮುಂತಾದ ಬಗೆ ಬಗೆಯ ಧನಗಳನ್ನು ಹೆಚ್ಚಿಸುವ ಮಹಿಮೆಯುಳ್ಳ ಆ ಕವಿತೆಯು ಗುರುಗಳ ಕರುಣೆಯ ಹೊಳೆಯೂ ಪುಣ್ಯಪ್ರದವೂ ವೇದಾಂತತತ್ತ್ವಗಳನ್ನು ಒಳಗೊಂಡಿರುವುದೂ ಆಗಿದ್ದಿತು. ಆದುದರಿಂದ ಅದಕ್ಕೆ

ಆತ್ಮವಿದ್ಯಾ ಆಖ್ಯಾಯಿಕಾ ಎಂಬ ಹೆಸರು ಬಂದಿತು. ಬಳಿಕ ಅವರ ಮುದ್ರಣಪ್ರಕಾಶನದ ಬಗ್ಗೆ ರೂಪಗೊಂಡ ಸಮಿತಿಯು ಆತ್ಮವಿದ್ಯಾಖ್ಯಾಯಿಕಾಕವಿತೆಯನ್ನು ಅಚ್ಚು ಹಾಕಿಸಿ ಪುಸ್ತಕ ರೂಪಕ್ಕೆ ತಂದಿತು. ಈಗ ಮುದ್ರಣಗೊಂಡಿರುವ ಪುಸ್ತಕದ ಉದ್ಘಾಟನೋತ್ಸವಕ್ಕೆ ಉಚಿತವಾದ ವೇಳೆಯನ್ನು ಪೂರ್ವದಿಗಂತದಲ್ಲಿ ಸೂರ್ಯನ ಉದಯವನ್ನು ನಿರೀಕ್ಷಿಸುವಂತೆ ಆ ಸಮಿತಿಯು ಎದುರು ನೋಡುತ್ತಿದ್ದಿತು.

(ಮಾಲಿನೀ ವೃತ್ತಮ್)

ಗಿರಿನಗರ ವಿಭಾಗೇ ಬೆಂಗಳೂರೌ ನಗರ್ಯಾಂ
ಜಯತಿ ಕಿಲ ವಿವೇಕಾನಂದಸೇವಾದಿಸಂಸ್ಥಾ ।
ಗುರುಚರಣವಿನೇಯಃ ಕೃಷ್ಣಭಟ್ಟೋ ಗೃಹಸ್ಥಃ
ಯ ಇಹ ಪರಿಷದೋಽಸ್ಯಾಃ ಕಾರ್ಯದರ್ಶೀ ಮನೀಷೀ ॥ ೧೦೨

(ವಿವೇಕಾನಂದ ನಿಕ್ಷೇಪಸಂಸ್ಥಾ)

ಬೆಂಗಳೂರಿನ ಗಿರಿನಗರಬಡಾವಣೆಯಲ್ಲಿ ಶ್ರೀ ವಿವೇಕಾನಂದರ ಸೇವಾದಿ ಕಾರ್ಯಗಳ ನಿರ್ವಹಣೆಯ ಸಂಸ್ಥೆಯೊಂದು ಸರ್ವೋತ್ಕರ್ಷದಿಂದ ಶೋಭಿಸುತ್ತಿರುವುದಷ್ಟೆ. ಆ ಗಿರಿನಗರದಲ್ಲಿ ವಾಸವಾಗಿರುವ, ಮೇಧಾವಿಗಳೂ, ಗುರುಭಕ್ತರೂ ಆದ ಶ್ರೀಮಾನ್ ಕೃಷ್ಣಭಟ್ಟರು ಆ ಸಂಸ್ಥೆಯ ಕಾರ್ಯದರ್ಶಿಗಳಾಗಿರುವರು.

ಸ ಖಲು ಸಹೃದಯಾನಾಂ ಮಾನಸೇಯೋ ನವಾಸ್ಯೋ
ಬೃಹದುಪಲತಲೇ, ಸೂಟ್ಟಂಕಿತಾಂ ಕಾರುವರ್ಯೈಃ ।
ದ್ರವಿಣನಿಚಯಸಾಧ್ಯಾಂ ಕಾರಯಾಮಾಸ ಭಕ್ತ-
ಪ್ರವರ ಇಹ ವಿವೇಕಾನಂದ ಸೌಂದರ್ಯಮೂರ್ತಿಮ್ ॥ ೧೦೩

ಗುರುಭಕ್ತರೂ, ಸಜ್ಜನರ ಮನ್ನಣೆಗೆ ಪಾತ್ರರೂ ಉದಾರಿಗಳೂ ಆದ ಶ್ರೀಮಾನ್ ಕೃಷ್ಣಭಟ್ಟರು ಕಲಾನಿಪುಣರಾದ ಶಿಲ್ಪಿಗಳಿಂದ ದೊಡ್ಡ ಬಂಡೆಯನ್ನು ಕೊರೆದು ತಯಾರಿಸಿದ ಹದಿನೈದು ಅಡಿ ಎತ್ತರವುಳ್ಳ, ಬಹುಬೆಲೆ ಬಾಳುವ, ಮನೋಹರವಾದ ಸ್ವಾಮಿ ವಿವೇಕಾನಂದರ ಸುಂದರ ವಿಗ್ರಹವನ್ನು ಬೆಂಗಳೂರಿನ ಗಿರಿನಗರದ ಬಡಾವಣೆಯಲ್ಲಿ ಮಾಡಿಸಿದರು

(ಅನುಷ್ಟುಪ್ ವೃತ್ತಮ್)

ಪ್ರತಿಸ್ಮೃತ್ಯಾದಿಭಿರ್ಗ್ರಂಥೈರ್ದೀಪಿತಾಂ ಜ್ಞಾನದೀಪಿಕಾಮ್ ।
ಅರ್ಥಗಂಭೀರಯಾ ವಾಣ್ಯಾ ವರ್ತ್ಯೇವ ಸ್ನೇಹಸಿಕ್ತಯಾ ॥ ೧೦೪

ಜ್ಞಾಲಯೋಸ್ಮಿಂತರಂಗೇಷು ವೈದೇಶ್ಯಾನಾಂ ವಿನಿಸ್ಸೃತಾನ್ ।
ಯೋಽನಾಶುರ್ವಂಸ್ತಮೋಽಭೇದ್ಯಂ ವಿಸ್ಮಯಾವಿಷ್ಟ -
ಚೇತಸಾನ್ ॥ ೧೦೫

ಮನಾಂಸ್ಯಾಕರ್ಷಯಾಮಾಸ ಪಂಕಜಾನೀವ ಭಾಸ್ಕರಃ ।
ಸೋಽರ್ವಾಚೀನೋ ಭಾರತೀಯಸ್ತತ್ತ್ವಜ್ಞಾನಸುಧಾನಿಧಿಃ ॥ ೧೦೬
ವಿವೇಕಾನಂದನಾಮಾಸೌ ಸುಧೀಂದ್ರಃ ಪುರುಷರ್ಷಭಃ
ರತ್ನಾಗ್ರಿಯೋ ಭಾರತಸ್ಯ ಯಶಸಾ ಸಂಪ್ರಕಾಶತೇ ॥ ೧೦೭

ಯಾವ ಮಹನೀಯರು ಶ್ರುತಿಸ್ಮೃತ್ಯಾದಿ ಗ್ರಂಥಗಳಿಂದ ಹೊತ್ತಿಸಿರುವ, ಅಧ್ಯಾತ್ಮಜ್ಞಾನವೆಂಬ ದೀಪವನ್ನು ಎಣ್ಣೆಯಿಂದ ತೋಯ್ದ ಬತ್ತಿಯಂತಿರುವ, ಸ್ನೇಹವನ್ನು ಹೊರಸೂಸುವ, ಅರ್ಥಗಂಭೀರವೂ ಆದ ತಮ್ಮ ವಾಣಿಯಿಂದ ಬೆಳಕು ಚೆಲ್ಲುವಂತೆ ಮಾಡುತ್ತಾ ವಿದೇಶದ ವಿದ್ವಾಂಸರ ಹೃದಯದಲ್ಲಿ ದೃಢವಾಗಿದ್ದ ಅಜ್ಞಾನದ ಕತ್ತಲೆಯನ್ನು ಹೋಗಲಾಡಿಸಿದರೋ.

ಯಾವ ಮಹನೀಯರು ತನ್ನ ಉಪನ್ಯಾಸದ ವಾಗ್ವೈಖರಿಯಿಂದ ಬೆಕ್ಕಸಬೆರಗಾಗಿರುವ ಆ ವಿದೇಶೀಯ ಪಂಡಿತರ ಮನಸ್ಸುಗಳನ್ನು, ಸೂರ್ಯನು ತನ್ನ ಕಿರಣಗಳಿಂದ ಕಮಲಗಳನ್ನು ತನ್ನ ಕಡೆಗೆ ಸೆಳೆದುಕೊಳ್ಳುವಂತೆ ಆಕರ್ಷಿಸಿದರೋ ಅವರೇ ಭಾರತದ ಅರ್ವಾಚೀನ ಮಹಾಪುರುಷರೊಳಗೆ ಅಗ್ರೇಸರರಾದ ಸ್ವಾಮಿವಿವೇಕಾನಂದರು.

ಸ್ವಾಮಿ ವಿವೇಕಾನಂದರು ಅಧ್ಯಾತ್ಮಜ್ಞಾನದ ಸುಧೆಯ ನಿಧಿ ಧೀರ ಸಂನ್ಯಾಸಿಗಳೂ ಭಾರತರತ್ನರೂ ಪುರುಷಶ್ರೇಷ್ಠರೂ ಆದ ಸ್ವಾಮಿ ವಿವೇಕಾನಂದರು ತಮ್ಮ ನಿರ್ಮಲ ಯಶಸ್ಸಿನಿಂದ ಯಾವಾಗಲೂ ಕಂಗೊಳಿಸುತ್ತಿದ್ದಾರೆ,

(ಶಾರ್ದೂಲ ವಿಕ್ರೀಡಿತ ವೃತ್ತಮ್)

ಉದ್ಯಾನೇಽಭಿನವೇಽತ್ರ ನಂದನವನೀ–ಶೋಭಾಮುಷಿ ಶ್ರೀಗುರೋ –
ರ್ವಿದ್ಯಾಮಂದಿರಸನ್ನಿಕೃಷ್ಣವಲಯೇ ಶ್ರೀ ರಾಮಕೃಷ್ಣಾಂಕಿತೇ ।
ಶಿಷ್ಯಾಗ್ರೇಸರಕೃಷ್ಣಭಟ್ಟಸುಧಿಯಾ ಸಂಪ್ರಾರ್ಥಿತಸ್ಸದ್ಗುರು–
ಸ್ತುಷ್ಟಃ ಸ್ಥಾಪಿತವಾನ್ ಯತಿಃ ಕಿಲ ವಿವೇಕಾನಂದದಿವ್ಯಾ–
ಕೃತಿಮ್ ॥ ೧೦೮

ಒಮ್ಮೆ ಶಿಷ್ಯ ಪ್ರಮುಖರಾದ ಶ್ರೀಕೃಷ್ಣಭಟ್ಟರು ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳ ಸನ್ನಿಧಿಯಲ್ಲಿ ವಿವೇಕಾನಂದರ ಪ್ರತಿಮೆಯನ್ನು ಸ್ಥಾಪಿಸಬೇಕೆಂದು ಪ್ರಾರ್ಥಿಸಿ ಕೊಂಡರು. ಶ್ರೀಮದಾಚಾರ್ಯರು ಅವರ ಕೋರಿಕೆಯನ್ನು ಕೈಗೊಂಡು ಪ್ರಸನ್ನ ಚಿತ್ತರಾದರು. ಬಳಿಕ ಅವರು ತಮ್ಮ ವಿದ್ಯಾಮಂದಿರದ ಹತ್ತಿರದಲ್ಲಿರುವ

ದೇವೇಂದ್ರನ ನಂದನವನದ ಶೋಭೆಯನ್ನೂ ಮೀರಿಸುವ, ಶ್ರೀರಾಮಕೃಷ್ಣ ಎಂದು ಹೆಸರುಳ್ಳ ಹೊಸದಾದ ಈ ಗಿರಿನಗರದ ಉಪವನದಲ್ಲಿ ಎತ್ತರವಾದ ವೇದಿಕೆಯ ಮೇಲೆ ಶ್ರೀವಿವೇಕಾನಂದರ ಮನೋಹರವಾದ ಮೂರ್ತಿಯನ್ನು ದಿನಾಂಕ ೧೪-೭-೧೯೮೯ ರ ಅಭಿಜಿನ್ ಮುಹೂರ್ತದಲ್ಲಿ ಸ್ಥಾಪಿಸಿದರು,

ಅಥ ವ್ಯತೀತೇಷು ಕತಿಪಯದಿವಸೇಷು–
ಆತ್ಮವಿದ್ಯಾಖ್ಯಾಯಿಕಾಯಾಃ ಪುಸ್ತಕಸ್ಯ ಪ್ರಕಾಶಿಕಾ ।
ಸಮಿತಿಃ ಶಾಲಿವಾಹಸ್ಯ* ನೇತ್ರೇಂದು ಗ್ರಹಚಂದಿರೇ ॥ ೧೦೯

ಶಕೇ ವರ್ಷೇಽಥ ಶುಕ್ಲಾಖ್ಯೇ ಕಾರ್ತಿಕೇ ಮಾಸಿ ಶುಕ್ಲಗೇ ।
ತ್ರಯೋದಶ್ಯಾಂ ಮಂದವಾರೇ ಬೆಂಗಳೂರೌ ಗಿರೇಃ ಪುರೇ ॥ ೧೧೦

ಶುಭೇಯೋಗೇ ಸಮಾರೋಹೇ ಗುರೋರಧ್ಯಾತ್ಮಪುಸ್ತಿಕಾಮ್ ।
ಸಮುದ್ಘಾಟಯಿತುಂ ಯೋಗ್ಯಾ ವ್ಯವಸ್ಥಾಮಕರೋತ್ತದಾ ॥ ೧೧೧

ವಿವೇಕಾನಂದ ಯೋಗೀಂದ್ರ ಪ್ರತಿಮಾಯಾಃ ಸಮರ್ಪಣೇ ।
ತತ್ಸಮಿತ್ಯಾ ವ್ಯವಸ್ಥಾ ಚ ರಾಷ್ಟ್ರಸ್ಯಾಪಿ ತಧಾಹ್ಯಭೂತ್ ॥ ೧೧೨

ಗುರುವರ್ಯರು ಬರೆದಿರುವ ಆತ್ಮವಿದ್ಯಾಆಖ್ಯಾಯಿಕಾ ಪುಸ್ತಕದ ಪ್ರಕಾಶನ ಸಮಿತಿಯು ಶಾಲೀವಾಹನಶಕ ೧೯೧೨ ನೆಯ ಶುಕ್ಲ ಸಂವತ್ಸರದ ಕಾರ್ತೀಕ ಶುಕ್ಲ ತ್ರಯೋದಶೀ ಶನಿವಾರ (ದಿನಾಂಕ 11–11–1989) ಆತ್ಮವಿದ್ಯಾಖ್ಯಾಯಿಕೆಯ ಪುಸ್ತಕದ ಉದ್ಘಾಟನೆಗೆ ಯೋಗ್ಯವಾದ ಏರ್ಪಾಡು ಮಾಡಿತು ಮತ್ತು ವಿವೇಕಾನಂದಸೇವಾ ಟ್ರಸ್ಟಿನ ಕಾರ್ಯದರ್ಶಿಗಳಾದ ಶ್ರೀಕೃಷ್ಣಭಟ್ಟರ ಪತಿಯಿಂದ ರಾಷ್ಟ್ರಕ್ಕೆ ವಿವೇಕಾನಂದರ ನೂತನ ಶಿಲಾಪ್ರತಿಮೆಯ ಸಮರ್ಪಣೆ ವ್ಯವಸ್ಥೆಯೂ ಆಯಿತು.

ವಿದ್ಯಾಮಂದಿರತಃ ಪಶ್ಚಾತ್ಪರಿಮೃಷ್ಟಭುವಸ್ತಲೇ ।
ಮಹಾಪಟಗೃಹಾಕೀರ್ಣೇ ವೇದಿಕಾದ್ಯೈರ್ವಿಭೂಷಿತೇ ॥ ೧೧೩

ಆಯೋಜಿತಾಸನೇ ರಮ್ಯೇ ವಿಶಾಲೇ ಸಪರಿಚ್ಛದೇ ।
ವಿದ್ಯುತಾಂ ದೀಪಮಾಲಾಭಿರ್ವಿರಾಜಿತಸಭಾಗೃಹೇ ॥ ೧೧೪

ಆಹೂತೈರ್ವಿವಿಧಾಭೂಷೈಃ ಪೌರಲೋಕೈರಧಿಷ್ಠಿತೇ ।
ಸಭಾ ಪ್ರಾಚಲದತ್ಯಂತಕೌತೂಹಲಜನಾನ್ವಿತೇ ॥ ೧೧೫

(*ಶಾಲೀವಾಹನ ಶಕ ೧೯೧೨ ನೆಯ ವರ್ಷ)

ಬಳಿಕ ವಿದ್ಯಾಮಂದಿರದ ಹಿಂದುಗಡೆಯಿರುವ ಚೊಕ್ಕಟಗೊಳಿಸಿದ ವಿಶಾಲವಾದ ಅಂಗಳದ ಮೇಲೆ ದೊಡ್ಡ ಡೇರೆ (ಶಾಮಿಯಾನ) ಯನ್ನು ಹಾಕಿಸಲಾಯಿತು ಸಭಾವೇದಿಕೆಯು ನಿರ್ಮಿಸಲ್ಪಟ್ಟಿತು ಪೀಠೋಪಕರಣಗಳಿಂದ ಸಭೆಯು ಒಳಭಾಗವು ಶೋಭಿಸಿತು ಅಳವಡಿಸಿರುವ ವಿದ್ಯುದ್ದೀಪಮಾಲೆಗಳು ಸಭೆಯ ಒಳಗೂಹೊರಗೂ ಬೆಳಕು ಚೆಲ್ಲಿದವು ವಿವಿಧ ವೇಷಭೂಷಣವನ್ನು ಧರಿಸಿದ್ದ, ಆಹ್ವಾನಿತರಾದ ನಗರದ ಗಣ್ಯ ಸ್ತ್ರೀ ಪುರುಷರು ಆಗಮಿಸಿ ಆಸನದಲ್ಲಿ ಮಂಡಿಸಿದರು. ಕುತೂಹಲಭರಿತವಾದ ಜನಸಾಮಾನ್ಯವು ಸಭೆಯ ಸುತ್ತಲೂ ನೇರಿತ್ತು. ಹೀಗಿರುವಾಗ,

**ಅಭ್ಯಾಗತಾ ಮಹಾಮಾನ್ಯಾಃ ಪ್ರಾಡ್ವಿವಾಕಾದಯಸ್ತತಃ ।**
**ಮಾನ್ಯಾ ನ್ಯಾಯಾಧಿಪತಯೋ ಹ್ಯಧ್ಯಕ್ಷಾಃ ಕಾರ್ಯದರ್ಶಿನಃ ॥ ೧೧೬**
**ದರ್ಶನಂ ಗುರುವರ್ಯಾಣಾಂ ಕೃತ್ವಾಲಬ್ಧಾಶಿಷಸ್ತತಃ**
**ಗುರುವರ್ಯೈ ರಾಘವೇಂದ್ರಭಾರತೀಸ್ವಾಮಿಭಿಃ ಸಮಂ ।**
**ಸಭಾಂ ವಿವಿಶುರಾಸೀನಾ ವೇದ್ಯಾಂ ದಿವ್ಯಾಸನೇಷ್ವಥೋ ॥ ೧೧೭**

ಅನಂತರ ದಹಲೀನಗರದಿಂದ ಆಗಮಿಸಿರುವ ಭಾರತದ ಸರ್ವೋಚ್ಚನ್ಯಾಯಾಧೀಶರೂ ಕರ್ನಾಟಕ ರಾಜ್ಯದ ಹೈಕೋರ್ಟಿನ ಮುಖ್ಯ ನ್ಯಾಯಾಧಿಪತಿಗಳೂ ಅಂದಿನ ಸಭಾಧ್ಯಕ್ಷರಾದ ಕರ್ನಾಟಕದ ಹೈಕೋರ್ಟಿನ ನ್ಯಾಯಾಧೀಶರೂ ಸಮಿತಿಯ ಅಧ್ಯಕ್ಷರೂ ಕಾರ್ಯದರ್ಶಿಗಳೂ ಮುಂತಾದವರು ಗುರುವರ್ಯರ ದರ್ಶನಾಶೀರ್ವಾದವನ್ನು ಪಡೆದ ಮೇಲೆ ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳೊಂದಿಗೆ ಸಭೆಯನ್ನು ಪ್ರವೇಶಿಸಿದರು. ವೇದಿಕೆಯ ಮೇಲೆ ಅವರೆಲ್ಲರೂ ಅವರವರ ಸ್ಥಾನಮಾನಗಳಿಗೆ ತಕ್ಕಂತೆ ಬೇರೆಬೇರೆಯಾಗಿ ಜೋಡಿಸಿದ ಆಸನಗಳನ್ನು ಅಲಂಕರಿಸಿದರು.

**ಯತೀಂದ್ರಶ್ರೀರಾಘವೇಂದ್ರಭಾರತೀದಿವ್ಯಸನ್ನಿಧೌ ।**
**ಭಾರತಸ್ಯಾಸ್ಯ ಸರ್ವೋಚ್ಚನ್ಯಾಯಾಧಿಪಪದೇ ಸ್ಥಿತಃ ॥ ೧೧೮**
**ಶ್ರೀಮಾನ್ ವೆಂಕಟರಾಮಾಯ್ಯೋ ಮಾನನೀಯೋ ಮನೀಷಿಣಾಮ್**
**ವಿವೇಕಾನಂದಯೋಗೀಂದ್ರಪ್ರತಿಮಾಂ ತಾಂ ಕಲಾಮಯೀಂ ।**
**ಅರ್ಪಯಾಮಾಸ ರಾಷ್ಟ್ರಾಯ ಪಾರಿಷದ್ಯೈರಭಿಷ್ಟುತಃ ॥ ೧೧೯**
**ತತೋಽಸೌ ವಿಬುಧಶ್ರೇಷ್ಠೋ ಗುರುಭಕ್ತಃ ಪ್ರಸನ್ನಧೀಃ**
**ಆತ್ಮವಿದ್ಯಾಖ್ಯಾಯಿಕಾಂ ತಾಮುದಘಾಟಯದಂಜಸಾ ॥ ೧೨೦**
**ಕರ್ನಾಟಪ್ರಾಜ್ಯರಾಜ್ಯಸ್ಯ ಜ್ಯೇಷ್ಠಾಧಿಕರಣಃ ಸುಧೀಃ ।**
**ಅಭ್ಯನಂದದ್ಯಥಾವೃತ್ತಂ ನಾಮ್ನಾ ಷಣ್ಮುಖಮೋಹನಃ ॥ ೧೨೧**

ಪ್ರೌಢನ್ಯಾಯಾಲಯಸ್ಯಾಸ್ಯ ನ್ಯಾಯಾಧಿಪಪದೇ ಸ್ಥಿತಃ |
ರಾಮಾಜೋಯಿಸ ಇತ್ಯಾಖ್ಯಃ ಸಭಾಪರಿಹಾಸ್ಥಿತಃ || ೧೨೨
ಶ್ಲಾಘಯಾಮಾಸ ಧೀರಸ್ಯ ವಿವೇಕಾನಂದಯೋಗಿನಃ |
ಅಧ್ಯಾತ್ಮ ಗ್ರಂಥರೂಪಾಣಿ ಕವನಾನಿ ವಿವಿಧಾನಿ ಚ || ೧೨೩

ವಿದ್ಯಾವಂತರ ಮನ್ನಣೆಗೆ ಅರ್ಹರಾದ ಭಾರತದ ಸರ್ವೋಚ್ಚ ನ್ಯಾಯಾಧಿಪತಿಗಳಾದ ಶ್ರೀ ಇ. ಎಸ್. ವೆಂಕಟರಾಮಯ್ಯನವರು ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳ ದಿವ್ಯಸನ್ನಿಧಿಯಲ್ಲಿ ಶ್ರೀವಿವೇಕಾನಂದರ ಕಲಾಮಯವಾದ ಶಿಲಾಪ್ರತಿಮೆಯನ್ನು ರಾಷ್ಟ್ರಕ್ಕೆ ಅರ್ಪಿಸಿದರು. ಬಳಿಕ ಸಭಾಸದರಿಂದ ಪ್ರಶಂಸಿತರಾದ ಗುರುಭಕ್ತ ಶ್ರೀ ವೆಂಕಟರಾಮಯ್ಯನವರು ಪ್ರಸನ್ನಚಿತ್ತರಾಗಿ ಆತ್ಮವಿದ್ಯಾಖ್ಯಾಯಿಕಾ ಪುಸ್ತಕದ ಬಿಡುಗಡೆ ಮಾಡಿದರು. ಅನಂತರ ಕರ್ನಾಟಕದ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾದ ಶ್ರೀ ಷಣ್ಮುಗ ಮೋಹನ್ ರವರು ಮುಖ್ಯ ಅತಿಥಿಯಾಗಿ ಶ್ರೀ ವಿವೇಕಾನಂದರ ಮಹತ್ವದ ಮತ್ತು ಆಖ್ಯಾಯಿಕಾ ಗ್ರಂಥದ ವೈಶಿಷ್ಟ್ಯದ ಬಗ್ಗೆ ಮಾತನಾಡಿದರು ತರುವಾಯ ಅಂದಿನ ಸಭಾಧ್ಯಕ್ಷರಾದ ಕರ್ನಾಟಕ ರಾಜ್ಯದ ಹೈಕೋರ್ಟಿನ ನ್ಯಾಯಾಧೀಶರಾದ ಶ್ರೀರಾಮಾಜೋಯಿಸರು ಧೀರ ಸಂನ್ಯಾಸಿಗಳಾದ ಶ್ರೀವಿವೇಕಾನಂದರ ಬಗೆಬಗೆಯ ಅಧ್ಯಾತ್ಮ ಗ್ರಂಥಗಳನ್ನು ಕೊಂಡಾಡಿದರು.

ಆತ್ಮವಿದ್ಯಾಖ್ಯಾಯಿಕಾಯಾಃ ಸಾರಮಾಚಾರ್ಯಹೃದ್ಗತಮ್ |
ವ್ಯಾಚಖ್ಯೌ ಪರಿತುಷ್ಟಾತ್ಮಾ ಧರ್ಮಕೂತಂ ಸಯುಕ್ತಿಕಮ್ || ೧೨೪
ವೈದಿಕಾ ಲೌಕಿಕಾಃ ಸಭ್ಯಾಃ ಪ್ರೀತಿವಿಸ್ಫಾರಿತೇಕ್ಷಣಾಃ
ಅಭ್ಯಾಗತಾಸ್ತುಷ್ಟಿಮಾಪುರ್ವ್ಯಾಖ್ಯಾನೈರ್ಹೃದಯಪ್ರಿಯೈಃ || ೧೨೫
ಅಂತೇ ಶ್ರೀರಘವೇಂದ್ರಸ್ಯ ಭಾರತೀಪದಯೋಗಿನಃ |
ಆಶೀರ್ವಾದಾನುಗ್ರಹೇಣ ಸಭಾ ಸೈಷಾ ವಿಸರ್ಜಿತಾ || ೧೨೬

ಅನಂತರ ಶ್ರೀ ರಾಮಾಜೋಯಿಸರು ಆತ್ಮವಿದ್ಯಾ ಆಖ್ಯಾಯಿಕೆಯ ಸಾರಾಂಶವನ್ನೂ, ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳ ಅಂತರಂಗದ ಆಶಯವನ್ನೂ ಧರ್ಮರಹಸ್ಯವನ್ನೂ ಸಹ ಯುಕ್ತಿ ಯುಕ್ತವಾಗಿ ವಿವರಿಸಿದರು. ಶ್ರೀ ರಾಮಾಜೋಯಿಸರು ಮಾಡಿದ ಮೆಚ್ಚಿಗೆಯ ವ್ಯಾಖ್ಯಾನದಿಂದ ವೈದಿಕರೂ ಲೌಕಿಕರೂ ಆದ ಎಲ್ಲಾ ಸಭಾಸದರೂ ಪ್ರೀತಿಯಿಂದ ಕಣ್ಣರಳಿಸಿದರು. ಸಭೆಗ ಬಂದಿದ್ದ ಎಲ್ಲರೂ ಸಂತಸಗೊಂಡರು ಗುರುವರ್ಯರ ಆಶೀರ್ವಾದದೊಂದಿಗೆ ಸಭೆಯು ಮುಕ್ತಾಯಗೊಂಡಿತು,

ಆತ್ಮವಿದ್ಯಾಖ್ಯಾಯಿಕಾಯಾಃ ಸಮಿತ್ಯಾಃ ಕಾರ್ಯಕಾರಿಣಃ |
ಆಚಾರ್ಯೈಃ ಶ್ಲಾಘಯಾಮಾಸ ತತಃ ಸರ್ವಾನ್ ಸಭಾಸದಃ || ೧೨೭

ವಾಕ್ಯಜ್ಞಾಃ ಸ ಗುಣಜ್ಞೋಽಥಾವಧ್ಯಕ್ಷಾನ್ ಕಾರ್ಯದರ್ಶಿನಃ ।
ಸದಸ್ಯಾನ್ ಸಮರೀತೋಷಂ ರಾಂಕವಾಚ್ಛಾದನಾದಿಭಿಃ ॥ ೧೨೮
ಸಂಮಾನ್ಯ ಶ್ರೀಗುರುಃ ಪ್ರಾಜ್ಞಸ್ತೇಭ್ಯೋ ಮಂತ್ರಾಕ್ಷತಾನ್ ದದತ್
ಅನುಜಗ್ರಾಹ ಶಿಷ್ಯಾನ್ ಸ್ವಾನ್ ರಾಘವೇಂದ್ರಃ ಕೃಪಾನಿಧಿಃ ॥ ೧೨೯

ಶ್ರೀಮದಾಚಾರ್ಯರು ಸಭೆಯಿಂದ ವಿದ್ಯಾಮಂದಿರಕ್ಕೆ ಹಿಂದಿರುಗಿದ ಬಳಿಕ ಆತ್ಮವಿದ್ಯಾಖ್ಯಾಯಿಕಾ ಗ್ರಂಥ ಪ್ರಕಾಶನಸಮಿತಿಯ ಎಲ್ಲಾ ಕಾರ್ಯಕಾರೀ ಸದಸ್ಯರನ್ನು ಹೊಗಳಿದರು ಮಾತುಬಲ್ಲವರೂ, ಗುಣಜ್ಞರೂ, ಪ್ರಾಜ್ಞರೂ ಆದ ಶ್ರೀ ಗುರುಗಳು ಆತ್ಮವಿದ್ಯಾಖ್ಯಾಯಿಕಾ ಗ್ರಂಥ ಪ್ರಕಾಶನಕ್ಕೆ ನೆರವಾದ ಪಂಡಿತರು ಸಮಿತಿಯ ಅಧ್ಯಕ್ಷರು, ಕಾರ್ಯದರ್ಶಿಗಳು, ಸದಸ್ಯರು ಈ ಎಲ್ಲರಿಗೂ ಶಾಲು ಹೊದೆಯಿಸಿ ಸಮ್ಮಾನಿಸಿದರು, ಬಳಿಕ ಕರುಣಾಳುಗಳಾದ ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರು ಎಲ್ಲರಿಗೂ ಮಂತ್ರಾಕ್ಷತೆಯನ್ನು ಕೊಡುತ್ತಾ ತಮ್ಮ ಎಲ್ಲಾ ಶಿಷ್ಯರನ್ನೂ ಅನುಗ್ರಹಿಸಿದರು.

(ಶಾರ್ದೂಲ ವಿಕ್ರೀಡಿತ ವೃತ್ತಂ)

ಆಚಾರ್ಯಸ್ಯ ರಘೂತ್ತಮಸ್ಯ ಯತಿನೋ ರಾಮಸ್ಯ ಧರ್ಮಾತ್ಮನೋ
ಲೀಲಾಮಾನುಷವಿಗ್ರಹಸ್ಯ ವಶಿನಃ ಕಾರುಣ್ಯಶೀಲಸ್ಯ ಚ ।
ಸರ್ವಾಭೀಷ್ಟಫಲೇಷು ನೋ ಗಣಪತಿಃ ಕೃತ್ಯೇಷು ನಿಕ್ತಾತ್ಮನಾಮ್
ಕುರ್ಯಾದ್ವಿಘ್ನಮದೋತ್ಕಟೇಭ ಕರಟೇ ಶಾರ್ದೂಲ
ವಿಕ್ರೀಡಿತಮ್ ॥ ೧೩೦

ಪರಿವ್ರಾಜಕರೂ ಧರ್ಮಾತ್ಮರೂ ಜಿತೇಂದ್ರಿಯರೂ. ಆಚಾರ್ಯರೂ ಆದವರ ಸೇವಾ ಕಾರ್ಯಗಳಲ್ಲಿ, ಮತ್ತು ರಘುಕುಲೋತ್ತಮನೂ ಲೀಲಾಮಾನುಷ ವಿಗ್ರಹನೂ, ಕರುಣಾಳವೂ ಆದ ಶ್ರೀರಾಮಚಂದ್ರನ ಸೇವಾಕಾರ್ಯಗಳಲ್ಲಿ ನಿರತರಾದ ಭಕ್ತಜನರ ಎಲ್ಲ ವಿಧವಾದ ಇಷ್ಟ ಸಿದ್ಧಿಗೆ ಅಡ್ಡಿಯಾಗಿರುವ ಎಡರುತೊಡರುಗಳೆಂಬ ಮದ್ದಾನೆಗಳ ಕುಂಭಸ್ಥಳದಲ್ಲಿ ಶ್ರೀ ಸಿದ್ಧಿವಿನಾಯಕನು ಶರಭಮೃಗದ ವಿಹಾರ ವನ್ನು ಆಚರಿಸಲಿ (ಎಡರು ತೊಡರುಗಳನ್ನು ನೀಗಲಿ)

ಇತ್ಥಂ ಸಂಪ್ರತಿ ರಾಮಚಂದ್ರಪುರಸಂಸ್ಥಾನಾಧಿಪಾನಾಂ ಸತಾಂ
ದೃಷ್ಟ್ವಾ ದರ್ಪಣದರ್ಶಮಾರ್ಯಚರಿತಂ ಮಾತಂಗ–
ಗಾತ್ರಾಯಿತಮ್ ।
ಗುಂಫಿತ್ವಾ ಪದಪುಷ್ಪಮಾಲ್ಯಮುಪದೀಕೃತ್ಯಾಂಜಸಾ ಸದ್ಗುರೋಃ
ಶಂಭೋಃ ಪಾದಯುಗೇಽರ್ಪಯಾಮಿ ಕವಯೋ ಹೃಷ್ಯಂತು
ಮೃಷ್ಯಂತು ಮಾಮ್ ॥ ೧೩೧

ಹೀಗೆ ಶ್ರೀರಾಮಚಂದ್ರಾಪುರದ ಮಠಾಧೀಶರಾದ ಗುರುವರ್ಯರ ಆನೆಯ ಶರೀರದಂತೆ ದೊಡ್ಡದಾಗಿರುವ ಸಚ್ಚರಿತ್ರೆಯನ್ನು ಕೈಗನ್ನಡಿಯಲ್ಲಿ ಕಾಣುವಂತೆ ಚಿಕ್ಕದಾಗಿ ಕಂಡು ಪದಗಳೆಂಬ ಹೂಕಟ್ಟಿ ತಯಾರಿಸಿದ ಮಾಲೆಯನ್ನು ಜಗದೀಶ್ವರನಾದ ಪರಮೇಶ್ವರನ ಅಡಿಜೋಡಿಗೆ ಒಪ್ಪಿಸುತ್ತಿದ್ದೇನೆ ಜಾಣರಾದ ಕಬ್ಬಿಗರು ಇದರಲ್ಲಿ ಗುಣಗಳಿದ್ದರೆ. ಸಂತಸಗೊಳ್ಳಲಿ, ಅಥವಾ ಇದರಲ್ಲಿ ದೋಷಗಳಿದ್ದರೆ ನನ್ನನ್ನು ಕ್ಷಮಿಸಲಿ.

**ಇತಿ ಭೀಮನಕೋಣಾಭಿ ಜನೇನ ಕಲ್ಲುಮನೇಸುಬ್ಬಾಭಟ್ಟ ತನುಜನುಷಾ ಭಾಸ್ಕರಭಟ್ಟೇನಕವಿನಾ ವಿರಚಿತಾಯಾಂ ಗುರುಕೃಪಾ ತರಂಗಿಣ್ಯಾಂ ವಿದ್ವತ್ಸಮ್ಮಾನ ದೇವತಾ ಪ್ರತಿಷ್ಠಾದಿ ವಿವಿಧ ಮಾಂಗಲಿಕ ಮಹೋತ್ಸವವರ್ಣನಂ ನಾಮ ಷಷ್ಠಸ್ತರಂಗಃ.**

ಹೀಗೆ ಭೀಮನಕೋಣೆವಾಸಿ ದಿವಗಂತ ಕಲ್ಲುಮನೆ ಸುಬ್ಬಾಭಟ್ಟರ ಮಗ ಭಾಸ್ಕರ ಭಟ್ಟನೆಂಬ ಕವಿಯಿಂದ ರಚಿತವಾದ ಗುರುಕೃಪಾತರಂಗಿಣಿಯಲ್ಲಿ ವಿದ್ವಾಂಸರ ಸಮ್ಮಾನ, ದೇವಪ್ರತಿಷ್ಠೆಯೇ ಮುಂತಾದ ಮಂಗಳ ಮಹೋತ್ಸವ ವರ್ಣನವೆಂಬ ಆರನೇ ತರಂಗದ ಕನ್ನಡದ ಅನುವಾದವು ಮುಗಿಯಿತು.

ಪರಿಸಮಾಪ್ತೋಽಯಂ ಗ್ರಂಥಃ

ಶಾಲಿವಾಹನ ಶಕ ೧೯೧೨ನೆಯ ಶುಕ್ಲನಾಮ ಸಂವತ್ಸರದ ಕಾರ್ತಿಕ ಶುದ್ಧ ತ್ರಯೋದಶೀ ತಿಥಿ ಶನಿವಾರ (ತಾ **11–11–1989**) ಗುರುಕೃಪಾ ತರಂಗಿಣಿಯ ಕನ್ನಡ ಗದ್ಯಾನುವಾದವು ಮುಗಿಯಿತು.

**ಶುಭಂ ಮಂಗಲಮ್**

# ಅನುಬಂಧಗಳು

## ಪುಟ 64

ಗಂಧರ್ವಾದಿಶಾಸ್ತ್ರಶ್ರವಣಸ್ಯ ಷಡ್ಜಾದಿಸಾಕ್ಷಾತ್ಕಾರತ್ವೇ ಹೇತುತ್ವಾಭ್ಯುಪಗಮೇಽಪಿ______ __ ಆಹುಃ-ಇತ್ಯಸ್ಯ ಸಿದ್ಧಾಂತಲೇಶಸಂಗ್ರಹಸ್ಥಿತವಾಕ್ಯಸ್ಯ ವ್ಯಾಖ್ಯಾಯಾಮ್ "ಗಂಧರ್ವಾದಿ ಇತ್ಯಾದಿಪದೇನ ಹಿರಣ್ಯಗರ್ಭಾದಿ ದೇವತಾಪ್ರತಿಪಾದನ ವಾಕ್ಯಜಾತಂ ಗೃಹ್ಯತೇ" ಇತಿ ಅಚ್ಯುತ ಕೃಷ್ಣಾನಂದೈಃ ಉಕ್ತತ್ವಾತ್ ಮಂತ್ರವರ್ಣಾನಾಂ ದೇವತಾಪ್ರತಿ ಪಾದಕತ್ವಮವಗಮ್ಯತೇ.

## ಪುಟ 70

ಭಾರತೀಯ ಸನಾತನಧರ್ಮಗಳಿಗೆ ವೇದ ಶಾಸ್ತ್ರಗಳೇ ಮೂಲ ಹಿಂದೆ ಅನೇಕ ಅರಸರು ವೇದ ಶಾಸ್ತ್ರಗಳ ರಕ್ಷಣೆ ಮತ್ತು ಪ್ರಚಾರದ ಸಲುವಾಗಿ ತಮ್ಮ ತಮ್ಮ ರಾಜ್ಯಗಳಲ್ಲಿ ವೇದ, ಶಾಸ್ತ್ರ ಪಾಠಶಾಲೆಗಳನ್ನು ಸ್ಥಾಪಿಸಿ ಪಂಡಿತರನ್ನು ನೇಮಿಸಿ ಮಕ್ಕಳಿಗೆ ವೇದ, ಶಾಸ್ತ್ರಗಳಲ್ಲಿ ಶಿಕ್ಷಣ ಕೊಡಿಸಲು ತಕ್ಕ ವ್ಯವಸ್ಥೆ ಮಾಡಿದ್ದರು, ಅಂತಯೇ ಮೈಸೂರು ರಾಜ್ಯದಲ್ಲಿ ಆಳಿದ ಮೈಸೂರು ಅರಸುಗಳಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು, ಶ್ರೀಚಾಮರಾಜ ಒಡೆಯರು ಮತ್ತು ನಾಲ್ಮಡಿ ಕೃಷ್ಣರಾಜ ಒಡೆಯರು ವೇದ ಶಾಸ್ತ್ರಗಳ ಪೋಷಕರಾಗಿದ್ದರು. ಶ್ರೀಚಾಮರಾಜ ಒಡೆಯರು ಮೈಸೂರಿನಲ್ಲಿ "ಸರಸ್ವತೀ ಪ್ರಾಸಾದ" ಎಂಬ ಸಂಸ್ಕೃತ ಮಹಾಪಾಠಶಾಲೆಯನ್ನು ಸ್ಥಾಪಿಸಿ, ಪಂಡಿತರನ್ನು ನೇಮಿಸಿ, ಸಂಪ್ರದಾಯದಂತೆ ವಿದ್ಯಾರ್ಥಿಗಳಿಗೆ ವಸತಿ ಮತ್ತು ಭೋಜನಕ್ಕೆ ಸೌಕರ್ಯ ಕಲ್ಪಿಸಿ ಉಚಿತವಾಗಿ ವೇದ, ಶಾಸ್ತ್ರಗಳ ಶಿಕ್ಷಣಕ್ಕೆ ತಮ್ಮ ಅರಮನೆಯ ವೆಚ್ಚದಿಂದಲೇ ತಕ್ಕವ್ಯವಸ್ಥೆ ಮಾಡಿಸಿದ್ದರು, ಅವರ ಬಳಿಕ ನಾಲ್ಮಡಿ ಕೃಷ್ಣರಾಜ ಒಡೆಯರೂ ಅನಂತರ ಶ್ರೀಜಯಚಾಮರಾಜ ಒಡೆಯರೂ ತಮ್ಮ ಹಿರಿಯರು ನಡೆಸಿದಂತೆ ಅತ್ಯುತ್ತಮವಾಗಿ "ಮಹಾರಾಜಾ ಸಂಸ್ಕೃತ ಮಹಾಪಾಠಶಾಲಾ"ಎಂಬ ವಿದ್ಯಾಸಂಸ್ಥೆಯನ್ನು ಬೆಳೆಸಿದರು. ಸಹಸ್ರಾರು ವಿದ್ಯಾರ್ಥಿಗಳಿಗೆ ವಿದ್ವತ್ ಪರೀಕ್ಷೆಯ ತನಕ ಶಿಕ್ಷಣವಿತ್ತು ವೇದ, ಶಾಸ್ತ್ರ ಪಂಡಿತರನ್ನು ಗೌರವಿಸಿ ಪೋಷಿಸುತ್ತಿದ್ದರು, ಭಾರತಕ್ಕೆ ಸ್ವಾತಂತ್ರ್ಯ ಬಂದ ಬಳಿಕ ಭಾಷಾವಾರು ರಾಜ್ಯಗಳ ವ್ಯವಸ್ಥೆಯಾದ ಮೇಲೆ ಮೇಲ್ಕಂಡ ಸಂಸ್ಥೆಯು ಸರ್ಕಾರದ ಆಡಳಿತಕ್ಕೆ ಸೇರಿರುವುದು ವಿದಿತವೇ ಸರಿ.

ಕೃತ ತೀರ್ಥಃ :— ಪುಟ 115

**ಸತ್ಯಂ ತೀರ್ಥಂ ಕ್ಷಮಾ ತೀರ್ಥಂ ತೀರ್ಥಮಿಂದ್ರಿಯ ನಿಗ್ರಹಃ ।**<br>
**ಸರ್ವಭೂತದಯಾ ತೀರ್ಥಂ ಸರ್ವತ್ರಾರ್ಜವಮೇವ ಚ ॥**<br>
**ದಾನಂ ತೀರ್ಥಂ ದಮಸ್ತೀರ್ಥಂ ಸಂತೋಷಸ್ತೀರ್ಥಮುಚ್ಯತೇ ।**<br>
**ಬ್ರಹ್ಮಚರ್ಯಂ ಪರಂ ತೀರ್ಥಂ ತೀರ್ಥಂ ಚ ಪ್ರಿಯವಾದಿತಾ ॥**

ಜ್ಞಾನಂ ತೀರ್ಥಂ ಧೃತಿಸ್ತೀರ್ಥಂ ಪುಣ್ಯಂ ತೀರ್ಥಮುದಾಹೃತಮ್

(ಬ್ರಹ್ಮಪುರಾಣಮ್)

ತೀರ್ಥಂ ಶಾಸ್ತ್ರೇ ಗುರೌ ಯಜ್ಞೇ ಪುಣ್ಯಕ್ಷೇತ್ರಾವತಾರಯೋಃ |
ಮಂತ್ರಿಜುಷ್ಟಜಲೇ ಸತ್ರಿಣ್ಯುಪಾಯೋ ಸ್ತ್ರೀರಜಸ್ಯಪಿ ||
(ಹೇಮಚಂದ್ರನ ಅನೇಕಾರ್ಥಸಂಗ್ರಹಕೋಶ)

ಪುಟ 132

**ನ್ಯಾಯಶಾಸ್ತ್ರ** – ಆಸ್ತಿಕದರ್ಶನಗಳಲ್ಲಿ ಅಕ್ಷಪಾದದರ್ಶನ, ಕಣಾದ ದರ್ಶನಗಳು ಪ್ರಸಿದ್ಧವಾಗಿವೆ. ಅಕ್ಷಪಾದ ದರ್ಶನಕ್ಕೆ ನ್ಯಾಯಶಾಸ್ತ್ರವೆಂದು ಹೇಳುವರು ಕಣಾದ ಮುನಿಗಳು ರಚಿಸಿರುವ ಶಾಸ್ತ್ರಕ್ಕೆ ವೈಶೇಷಿಕ ಶಾಸ್ತ್ರವೆಂದು ಹೆಸರು. ಇವರು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ ಎಂಬ ಸಪ್ತ ಪದಾರ್ಥಗಳನ್ನು ಅಂಗೀಕರಿಸಿ, ಈ ಸಪ್ತ ಪದಾರ್ಥಗಳ ತತ್ತ್ವಜ್ಞಾನವೇ ನಿಃಶ್ರೇಯಸ್ಸಿಗೆ ಕಾರಣವೆಂದು ಪ್ರತಿಪಾದಿಸುವರು.

ಪುಟ 133

**ಸಾಂಖ್ಯ ಶಾಸ್ತ್ರ** – ಈ ಶಾಸ್ತ್ರದ ಪ್ರವರ್ತಕರು ಪರಮಪೂಜ್ಯರಾದ ಕಪಿಲ ಮಹರ್ಷಿಗಳು ಇವರು ಕರ್ದಮ ಮಹರ್ಷಿಯಿಂದ ದೇವಹೂತಿಯಲ್ಲಿ ಜನ್ಮ ತಾಳಿದರು. ಸಾಂಖ್ಯದರ್ಶನವು ಕಪಿಲ, ಆಸುರಿ, ಪಂಚಶಿಖಾಚಾರ್ಯ, ಈಶ್ವರಕೃಷ್ಣಮುನಿ ಇವರೇ ಮುಂತಾದ ಶಿಷ್ಯಪರಂಪರೆಯಿಂದ ಸಾಂಪ್ರದಾಯಿಕವಾಗಿ ಅಧ್ಯಯನ, ಅಧ್ಯಾಪನ ಮಾರ್ಗದಲ್ಲಿ ಸನಾತನ ಧರ್ಮದ ಅಂಗವಾಗಿ ಪ್ರಸಿದ್ಧಿಗೆ ಬಂದಿತು. ಈ ದರ್ಶನದಲ್ಲಿ ಪಂಚವಿಂಶತಿ ತತ್ತ್ವಗಳು ಅಂಗೀಕೃತವಾಗಿವೆ ತತ್ತ್ವವೆಂದರೆ ಪದಾರ್ಥವೆಂದರ್ಥ ಅವು ಯಾವುವೆಂದರೆ – ಮೂಲಪ್ರಕೃತಿ, ಮಹತ್ತತ್ತ್ವ (ಬುದ್ಧಿ) ಅಹಂಕಾರ, ಪಂಚತನ್ಮಾತ್ರ (ಶಬ್ದ. ಸ್ಪರ್ಶ, ರೂಪ. ರಸ) ಗಂಧ) ಪಂಚಮಹಾಭೂತಗಳು (ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ. ಪಂಚಜ್ಞಾನೇಂದ್ರಿಯಗಳು (ತ್ವಕ್, ಚಕ್ಷುಸ್ಸು ಶ್ರೋತ್ರ, ಜಿಹ್ವಾ, ಘ್ರಾಣ) ಪಂಚಕರ್ಮೇಂದ್ರಿಯಗಳು (ವಾಕ್, ಪಾಣಿ, ಪಾದ. ಪಾಯು, ಉಪಸ್ಥ) ಮನಸ್ಸು, ಪುರುಷ – ಹೀಗೆ ಒಟ್ಟು ೨೫ ಪದಾರ್ಥಗಳು.

**ಯೋಗ ಶಾಸ್ತ್ರ**– ಯೋಗ ದರ್ಶನಕ್ಕೆ ಪತಂಜಲಿ ಮಹರ್ಷಿಗಳು ಸೂತ್ರಕಾರರಾದುದರಿಂದ ಪಾತಂಜಲ ದರ್ಶನವೆಂದು ಇದಕ್ಕೆ ಹೆಸರು ಬಂದಿದೆ. ಯೋಗ ಶಾಸ್ತ್ರದ ಮೂಲಪ್ರವರ್ತಕರು, ಹಿರಣ್ಯಗರ್ಭ ಮಹರ್ಷಿಗಳು. ಅವರ ಸಂಪ್ರದಾಯ ಪರಂಪರೆಯಿಂದ ಬಂದ ಪತಂಜಲಿಮಹರ್ಷಿಗಳೂ ಯೋಗಶಾಸ್ತ್ರಪ್ರವರ್ತಕ

ರಾದರು ಹಿರಣ್ಯಗರ್ಭನೇ ಯೋಗಶಾಸ್ತ್ರಕ್ಕೆ ಪ್ರಥಮ ಪ್ರವರ್ತಕನೆಂದು ಯಾಜ್ಞವಲ್ಕ್ಯರು ಹೇಳುವರು. ಜೀವಾತ್ಮ ಪರಮಾತ್ಮರ ಸಂಯೋಗವೇ ಯೋಗವೆಂದೂ ಜೀವಾತ್ಮ ಪರಮಾತ್ಮರ ಸಾಮ್ಯ ದರ್ಶನವೇ ಸಮಾಧಿಯೆಂದೂ ಯೋಗಸಮಾಧಿಗಳ ಅರ್ಥವನ್ನು ನಿರೂಪಿಸಿರುವರು ಜೀವಾತ್ಮನು ಸರ್ವಪ್ರಪಂಚ ಸಂಬಂಧವನ್ನು ನಿವೃತ್ತಿಮಾಡಿ ಕೊಂಡು ತನ್ನ ಸ್ವರೂಪದಲ್ಲಿ ಶಾಶ್ವತವಾಗಿ ನಿಲ್ಲುವುದೇ ಕೈವಲ್ಯವೆಂದೂ ಇದಕ್ಕೆ ಮೋಕ್ಷವೆಂದೂ ಪ್ರಪಂಚ ಸಂಬಂಧ ನಿವೃತ್ತಿಯನ್ನು ಸಾಧಿಸುವುದೇ ಯೋಗವೆಂದೂ ಇದಕ್ಕೆ ಈಶ್ವರನು ಸಹಾಯನಾಗಿರುವನೆಂದೂ ಪತಂಜಲಿಗಳ ಅಭಿಪ್ರಾಯ.

**ಪಾಣಿನೀಯ ತಂತ್ರ** – ವ್ಯಾಕರಣ ಶಾಸ್ತ್ರ ವೇದಾಂಗಗಳಲ್ಲಿ ಒಂದು. ಇದು ಸಮುದ್ರದಂತೆ ಅಪಾರ. ಪ್ರಾಚೀನ ವೈಯಾಕರಣರು ಹೇಳಿದ ಪ್ರಮೇಯವನ್ನು ನುಸರಿಸಿ, ಪಾಣಿನಿಮಹರ್ಷಿಗಳು ಸುಕುಮಾರ ಮತಿಗಳಿಗಾಗಿ "ಅಷ್ಟಾಧ್ಯಾಯೀ" ಎಂಬ ಸೂತ್ರಗ್ರಂಥವನ್ನು ರಚಿಸಿದರು ದುರೂಹವಾದ ಈ ಸೂತ್ರಗಳಿಗೆ ಕಾತ್ಯಾಯನಮುನಿಗಳು ವೃತ್ತಿಗ್ರಂಥವನ್ನು ಬರೆದರು ಭಗವಾನ್ ಪತಂಜಲಿ ಮಹರ್ಷಿಗಳು ಅಷ್ಟಾಧ್ಯಾಯೀ ಸೂತ್ರಗಳಿಗೆ ಭಾಷ್ಯವನ್ನು ಬರೆದರು ಪತಂಜಲಿ ಮುನಿಗಳು ಆದಿಶೇಷನ ಅಂಶಾವತಾರವೆಂದು ಪ್ರಸಿದ್ಧಿಯಿದೆ.

ಪುಟ 133

**ಪೂರ್ವಮೀಮಾಂಸಾ ಶಾಸ್ತ್ರ** – ಆಸ್ತಿಕ ದರ್ಶನಗಳಲ್ಲಿ ಪೂರ್ವಮೀಮಾಂಸಾ ಶಾಸ್ತ್ರವು ಒಂದು. ಇದರ ಪ್ರವರ್ತಕರು ವ್ಯಾಸಶಿಷ್ಯರಾದ ಭಗವಾನ್ ಜೈಮಿನಿ ಮಹರ್ಷಿಗಳು. ಇವರು ಪ್ರಾಚೀನ ಮುನಿಗಳಿಂದ ರಚಿತವಾದ ಮೀಮಾಂಸಾ ಸೂತ್ರಗಳನ್ನು ವಿಚಾರಮಾಡಿ, ಅಲ್ಲಿ ಹೇಳಿರುವ ನ್ಯಾಯಗಳನ್ನೂ ಯುಕ್ತಿಗಳನ್ನೂ ತೆಗೆದುಕೊಂಡು ಮಂತ್ರ ಬ್ರಾಹ್ಮಣ ರೂಪವಾದ ವೇದವಾಙ್ಮಯವನ್ನು ಚೆನ್ನಾಗಿ ವಿಮರ್ಶಿಸಿದ್ದಾರೆ ವೇದದ ಕರ್ಮ ಕಾಂಡದ ವಿಧಿವಿಧಾನಗಳನ್ನು ಚರ್ಚಿಸಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳ ಸಾಧನೆಗೆ ಧರ್ಮವೇ ಪ್ರಧಾನಕಾರಣವೆಂದೂ ನಿಃಶ್ರೇಯಸ್ಸು ವೇದವಿಹಿತ ಯಾಗಾದ್ಯನುಷ್ಠಾನದಿಂದ ಉಂಟಾಗುವುದೆಂದೂ ನಿರ್ಣಯಿಸಿದ್ದಾರೆ ಈ ಶಾಸ್ತ್ರದಲ್ಲಿ ವೇದ ಪ್ರಾಮಾಣ್ಯವನ್ನು ಎತ್ತಿಹಿಡಿದು ವೇದವು ಅಪೌರುಷೇಯವೆಂದು ನಿರ್ಧರಿಸಿ. ವೇದಗಳಿಗೆ ಯಾಗಾದ್ಯನುಷ್ಠಾನದಲ್ಲಿ ಮುಖ್ಯತಾತ್ಪರ್ಯ ವೆಂದು ವಿವರಿಸಲಾಗಿದೆ.

**ಉತ್ತರಮೀಮಾಂಸಾ ಶಾಸ್ತ್ರ**– ಬ್ರಹ್ಮ ಜಿಜ್ಞಾಸೆಗೆ "ಉತ್ತರಮೀಮಾಂಸಾ" ಎಂದು ಹೇಳುವರು, ಬ್ರಹ್ಮವಿಷಯಕವಾದ ವಿಚಾರ ಉಪನಿಷತ್ತುಗಳಲ್ಲಿ ವಿಶೇಷವಾಗಿ ಹೇಳಲ್ಪಟ್ಟಿದೆ ಉಪನಿಷತ್ತುಗಳಿಗೆ ವೇದಾಂತವೆಂದು ನಾಮಧೇಯ. ಉಪನಿಷತ್ತು ಪರಬ್ರಹ್ಮದ ವಿಷಯವನ್ನು ಸ್ಪಷ್ಟವಾಗಿ ತಿಳಿಸುವ ಗ್ರಂಥ.

## ಪುಟ 134

**ನೀತಿ ಶಾಸ್ತ್ರ** – ನೀತಿಯನ್ನು ಬೋಧಿಸುವ ಶಾಸ್ತ್ರ. ಇದರಲ್ಲಿ ಶುಕ್ರನೀತಿ, ಬೃಹಸ್ಪತಿ ನೀತಿ. ಚಾಣಕ್ಯ ನೀತಿ, ಕಾಮಂದಕೀ ನೀತಿ ಮುಂತಾದುವುಗಳು ಇವೆ. ನೀತಿ ಬೋಧಿಸುವ ಗ್ರಂಥಗಳಿಂದ ಮನುಷ್ಯನು ಧರ್ಮಾಧರ್ಮ ವಿವೇಕ, ಕಾರ್ಯನಿರ್ವಹಣ ಚಾತುರ್ಯ, ರಾಜ್ಯಾಡಳಿತ ನೈಪುಣ್ಯ ಮುಂತಾದ ಅನೇಕ ವಿಷಯಗಳಲ್ಲಿ ಪ್ರಾವೀಣ್ಯ ಪಡೆದು ಸಮಾಜದಲ್ಲಿ ಆದರ್ಶಪ್ರಾಯನಾಗುವನು. ನೀತಿಯನ್ನು ತನ್ನ ಜೀವನ ದಲ್ಲಿ ಅಳವಡಿಸಿಕೊಂಡು ಲೋಕಕ್ಕೆ ಮಾರ್ಗದರ್ಶನ ಮಾಡಿ ಜನತೆಯ ಜೀವನವನ್ನು ಸುಖಮಯವನ್ನಾಗಿ ಮಾಡಬಲ್ಲನು

## ಪುಟ 138

**ಅಹಿಚ್ಛತ್ರ** – ಉತ್ತರ ಪಾಂಚಾಲದಲ್ಲಿರುವ ದೇಶ ರಾಜಧಾನಿ ಅಹಿಚ್ಛತ್ರ. ಅರ್ಜುನನು ದ್ರುಪದನನ್ನು ಯುದ್ಧದಲ್ಲಿ ಸೋಲಿಸಿ ಅಹಿಚ್ಛತ್ರವನ್ನು ಧನುರಾಚಾರ್ಯ ರಾದ ದ್ರೋಣರಿಗೆ ಗುರುದಕ್ಷಿಣೆಯಾಗಿ ಕೊಟ್ಟಿರುವನು ಎಂದು ಮಹಾಭಾರತದಲ್ಲಿ ಹೇಳಿದೆ.

ಏವಂ ರಾಜನ್, ಅಹಿಚ್ಛತ್ರಾ ಪುರೀ ಜನಪದ್ಯೈರ್ಯುತಾ ।
ಯುಧಿ ನಿರ್ಜಿತ್ಯ ಪಾರ್ಥೇನ ದ್ರೋಣಾಯ ಪ್ರತಿಪಾದಿತಾ॥
(ಮಹಾಭಾರತೇ–ಆದಿ–132 ಅಧ್ಯಾಯ)

## ಪುಟ 138

**ಭಟ್ಟ** – ವೇದಶಾಸ್ತ್ರ ನಿಪುಣನಾದ ಪೂರ್ವಾಪರ ಕರ್ಮಕಾಂಡ ಕುಶಲ. **ಯಾಜೀ** = ಯಜ್ಞದೀಕ್ಷಿತನಾದವನು, **ಅವಭೃತ** – ಯಜ್ಞಾಂತ ಮಂಗಳಸ್ನಾನ ಕರ್ತೃ. **ಸಭಾಹಿಂತ**=ಸಭಾಧ್ಯಕ್ಷನಾಗಿದ್ದು, ಧರ್ಮಾಧರ್ಮಗಳ ವಿಚಾರ ನಡೆಸಿ, ನಿರ್ಣಯ ಹೇಳುವವನು. **ಮಧ್ಯಸ್ಥ**= ನ್ಯಾಯ ವಿಚಾರ ಸಮಯದಲ್ಲಿ ಮಧ್ಯಸ್ಥನಾಗಿ ವಿಷಯ ಮಂಡಿಸುವವನು. **ಹೆಗಡೆ**= ಮೇಲಿನವರೆಲ್ಲರಿಗೂ ಯೋಗ್ಯವ್ಯವಸ್ಥೆ ಮಾಡಿ ಆಡಳಿತ ನಿರ್ವಹಿಸುವವನು.

## ಪುಟ 143

**ದಿವ್ಯವಾಣೀ** – ಸಂಸ್ಕೃತಂ ನಾಮ ದೈವೀವಾಗನ್ವಾಖ್ಯಾತಾ ಮಹರ್ಷಿಭಿಃ ।
ತದ್ಭವಸ್ತತ್ಸಮೋ ದೇಶೀತ್ಯನೇಕಃ ಪ್ರಾಕೃತ ಕ್ರಮಃ ॥
(ದಂಡೀ–ಕಾವ್ಯಾದರ್ಶ) ದೇವವ್ಯವಹಾರ ಯೋಗ್ಯವೂ ಯಾಸ್ಕಪಾಣಿನಿ ಮುಂತಾದ ಮಹರ್ಷಿಗಳಿಂದ ಪ್ರಕೃತಿ ಪ್ರತ್ಯಯ ಪ್ರದರ್ಶನ ಪೂರ್ವಕವಾಗಿ ವ್ಯುತ್ಪಾದಿಸಲ್ಪಟ್ಟದ್ದೂ ಆದ ಭಾಷೆಯೇ ಸಂಸ್ಕೃತ, ಅಂದರೆ, ವೈದಿಕ-ಲೌಕಿಕ ಈ ಎರಡೂ ಕ್ಷೇತ್ರಗಳಲ್ಲಿ ವ್ಯವಹರಿಸಲ್ಪಟ್ಟ ಭಾಷೆ ಸಂಸ್ಕೃತಃ ಪ್ರಕೃತಿಯಾದಸಂಸ್ಕೃತದಿಂದ ಆದ ಭಾಷೆಗಳು

ಪ್ರಾಕೃತ ಭಾಷೆಗಳು, ಅವು ತದ್ಭವ - ತತ್ಸಮ ದೇಶೀ ಎಂದು ಅನೇಕ ವಿಧವಾಗಿವೆ. ತದ್ಭವ–ಸಂಸ್ಕೃತ ಜನ್ಯ ತತ್ಸಮ - ಸಂಸ್ಕೃತ ಭಾಷೆಯ ಆನುಪೂರ್ವೀ ಹೊಂದಿದ ಸಮ ಸಂಸ್ಕೃತ ಪದಗಳು, ದಯಾ ದೇಶದಲ್ಲಿ ರೂಢಿಗೆ ಬಂದವು ಇವೆಲ್ಲಾ ವಿಕೃತಿಗಳೇ.

## ಪುಟ 146

ಶ್ರೀಮದ್ರಾಘವೇಂದ್ರಭಾರತೀಸ್ವಾಮಿಗಳ ಸನ್ನಿಧಿಯಲ್ಲಿ ತೀರ್ಥಹಳ್ಳಿಯಲ್ಲಿ ಮನ್ಮಥ ಸಂವತ್ಸರದ ಆಶ್ವಯುಜ ಬಹುಳ ಬಿದಿಗೆ ಮತ್ತು ತದಿಗೆ (1955ನೇ ಅಕ್ಟೋಬರ್ ಎರಡು ಮತ್ತು ಮೂರನೇ ತಾರೀಖು) ಈ ಎರಡು ದಿವಸ ಮೊಟ್ಟ ಮೊದಲನೆಯ ಹವ್ಯಕ ಮಹಾಧಿವೇಶನವು ಏರ್ಪಟ್ಟಿತು. ಈ ಅಧಿವೇಶನದಲ್ಲಿ ಶ್ರೀ ಹೊಸಬಾಳೆ ಸುಬ್ಬರಾಯರು ಸ್ವಾಗತಸಮಿತಿಯ ಅಧ್ಯಕ್ಷರಾಗಿದ್ದರು. ಶ್ರೀ॥ ಚಕ್ರಕೋಡಿ ಶಾಮಶಾಸ್ತ್ರಿಗಳು ಸೂಕ್ತ ಸಲಹೆಗಾರರಾಗಿ ಕಾರ್ಯ ನಿರ್ವಹಿಸಿದರು. ಮಹಾಧಿವೇಶನ ಶ್ರೀಗುರುಗಳ ಆಧಿನಾಯಕತ್ವದಲ್ಲಿ ನಡೆಯಿತು. ಶ್ರೀ ವಿ. ಆರ್, ಭಟ್ಟರು ಸಭಾಧ್ಯಕ್ಷರಾಗಿದ್ದರು. ನಿವೃತ್ತ ನ್ಯಾಯಾಧೀಶರಾದ ಶ್ರೀ ಎಂ ಎಸ್ ಹೆಗಡೆ ಯವರು ಅಧಿವೇಶನವನ್ನು ಉದ್ಘಾಟಿಸಿದರು. ಹವ್ಯಕರ ಅನೇಕ ಇಷ್ಟಾರ್ಥಸಿದ್ಧಿಯು ಘಟನಾವಳಿಯಿರುವ ಅನೇಕ ಪ್ರಸ್ತಾವಗಳು ಸ್ವೀಕರಿಸಲ್ಪಟ್ಟವು. ಅವು ಗುರು ಶಿಷ್ಯೋಭಯ ಹಿತಗಳಾಗಿದ್ದವು.

## ಪುಟ 156

ಶಿವಮೊಗ್ಗಾ ಜಿಲ್ಲಾ ಹೊಸನಗರ ತಾಲ್ಲೂಕಿನ ಶರಾವತೀನದೀ ತೀರದ ಲ್ಲಿರುವ ಶ್ರೀಮದ್ರಾಮಚಂದ್ರಾಪುರದಪ್ರಧಾನಮಠದಲ್ಲಿ ರಾಕ್ಷಸನಾಮಸಂವತ್ಸರದ ಚೈತ್ರಶುಕ್ಲ ಸಪ್ತಮೀ ಶುಕ್ರವಾರ(ತಾರೀಖು 18–4-1975)ದಂದು ಗುರುವರ್ಯ ರಿಂದ ಶ್ರೀರಾಘವೇಂದ್ರಭಾರತೀಸ್ವಾಮಿಗಳಿಂದ ಪ್ರತಿಷ್ಠಾಪಿತವಾದ ಶ್ರೀಶಂಕರ ಭಗವತ್ಪಾದರ ವಿಗ್ರಹದ ವೈಶಿಷ್ಟ್ಯ.

ಶ್ರೀ ಮದಾಚಾರ್ಯ ಶಂಕರರಮೂರ್ತಿ ಅಮೃತ ಶಿಲೆಯಿಂದ ತಯಾರಿಸಲ್ಪಟ್ಟಿ ರುವುದು, ಸುಂದರವಾದ ಈ ವಿಗ್ರಹವನ್ನು ಶಿಲ್ಪಿಯು ತಯಾರಿಸಿ, ದೃಷ್ಟಿಯಿಟ್ಟು, ಸಜ್ಜುಗೊಳಿಸಿದ ಬಳಿಕ ಅದನ್ನು ಚೆನ್ನಾಗಿ ತೊಳೆಯಲಾಯಿತು. ಆಗ ಸುವರ್ಣ ರೇಖೆಯೊಂದು ಶಿಲಾವಿಗ್ರಹದ ಸಮ್ಮುಖದಲ್ಲಿ ಮೂರ್ತಿಯ ಎಡ ಭುಜದಿಂದ ಕೆಳಗೆ ಇಳಿದು ಬಲಭುಜದ ತನಕ ಯಜ್ಞೋಪವೀತದ ಆಕಾರವಾಗಿ ಮೂಡಿ ಬಂದಿರುವುದು ಗೋಚರವಾಯಿತು. ಹೀಗೆ ಮೂಡಿ ಬಂದಿರುವ ಬಂಗಾರದ ಗೆರೆಯೇ ಈ ವಿಗ್ರಹದ ಲ್ಲಿರುವ ವಿಶೇಷತೆ ಶ್ಲೋಕದಲ್ಲಿ ಈ ರೇಖೆಯನ್ನು ಉತ್ಪ್ರೇಕ್ಷಿಸಲಾಗಿದೆ.

ಯತಿಧರ್ಮವನ್ನು ಸ್ವೀಕರಿಸಿರುವ ಶ್ರೀಮದಾಚಾರ್ಯರಲ್ಲಿ ಯಜ್ಞೋಪವೀತಕ್ಕೆ ಆಸ್ಪದವಿಲ್ಲದಿದ್ದರೂ ಈ ಮೂರ್ತಿಯನ್ನು ತಯಾರಿಸಲು ಆಯ್ದ ಶಿಲೆಯಲ್ಲಿ ಸಹಜ ವಾಗಿಯೇ ಜನಿವಾರದಂತೆ ಚಿನ್ನದ ಗೆರೆಯೊಂದು ಮೂಡಿ ಬಂದದು ಆಶ್ಚರ್ಯ

ಕರವೇ ಸರಿ. ಆದುದರಿಂದ ಈ ಕಲ್ಪನೆಯು ಕವಿಯ ಮನಸ್ಸಿಗೆ ಭಾಸವಾಗಿ ಚಿತ್ರಿಸಲ್ಪಟ್ಟಿತು. ಈ ವಿಗ್ರಹವು ಈ ರಾಮಚಂದ್ರಾಪುರದ ಮಠಕ್ಕೆ ಶ್ರೀಶಂಕರ ಭಗವತ್ಪಾದರ ಪೂರ್ಣಾನುಗ್ರಹದದ್ಯೋತಕವೇ ಸರಿ.

## ಪುಟ 167

ಮಂಗಳೂರು ಹೋಬಳಿ ಬಂಟವಾಳ ತಾಲ್ಲೂಕಿಗೆ ಸೇರಿದ ಪುತ್ತೂರು ಸೀಮೆಯ ಪೆರಾಜೆ ಗ್ರಾಮದಲ್ಲಿ ಹೊಸದಾಗಿ ಕಟ್ಟಿಸಿರುವ ಶ್ರೀಮದ್ರಾಮಚಂದ್ರಾಪುರ ಶ್ರೀ ಮಠದಲ್ಲಿ ಶಾಲಿವಾಹನ ಶಕ ವರ್ಷ ೧೯೧೧ನೆಯ ಪ್ರಭವ ಸಂವತ್ಸರದ ಮಾಘಮಾಸದ ಬಹುಳ ತದಿಗೆಯಿಂದ ಶುರುವಾಗಿ ಮೂರು ದಿವಸಗಳವರೆಗೆ (ತಾರೀಖು 5-2-1988 ರಿಂದ 7-2-1988ರ ವರೆಗೆ) ಅಲ್ಲಿನ ಶಿಷ್ಯ ಸಮೂಹವು ಗುರುವರ್ಯ ಶ್ರೀರಾಘವೇಂದ್ರಭಾರತೀಸ್ವಾಮಿಗಳವರ ಷಷ್ಟ್ಯಬ್ದ ಪೂರ್ತಿ ಸ್ಮಾರಕ ಮಹೋತ್ಸವವನ್ನು ಅತ್ಯಂತ ವೈಭವದಿಂದ ಆಚರಿಸಿತು, ಈ ಸಮಯದಲ್ಲಿ ವಿಶೇಷವಾದ ವೈದಿಕ ಕರ್ಮಾನುಷ್ಠಾನಗಳು ವಿಧಿವತ್ತಾಗಿ ನಡೆದವು ಸಮಾಜದ ಎಲ್ಲಾ ಭಾಗಗಳಿಂದಲೂ ಪಂಡಿತರೂ. ವೈದಿಕರೂ ಸಭ್ಯಗೃಹಸ್ಥರೂ ಈ ಉತ್ಸವದಲ್ಲಿ ಭಾಗವಹಿಸಿದ್ದರು.

ಈ ಹೋಬಳಿಯ ಶಿಷ್ಯರು ಶ್ರೀಮದಾಚಾರ್ಯವರ್ಯರಿಗೆ ಸಮಸ್ತ ಬಿರುದಾವಳಿಯಿಂದೊಡಗೂಡಿದ, ಕಿರೀಟಧಾರಣೆಯೊಂದಿಗೆ ಅಡ್ಡಪಾಲಕ್ಕಿಯ ಉತ್ಸವವನ್ನೂ ಮಾಡಿಸಿ, ಆನಂದಿಸಿದರು ಈ ಸಂದರ್ಭದಲ್ಲಿ ಶ್ರೀಮಠದ ಪ್ರಧಾನೋಪಾಸ್ಯ ದೇವತೆಯಾದ ಶ್ರೀ ಸೀತಾರಾಮ ಚಂದ್ರಮೌಳೀಶ್ವರಾದಿ ದೇವತಾ ಮೂರ್ತಿಗಳಿಗೆ ಸುವರ್ಣ ಮಂಟಪದಲ್ಲಿ ಕೂರಿಸಿ ವಿವಿಧ ಸುವರ್ಣಮಯಾಲಂಕಾರಗಳಿಂದ ಅಲಂಕರಿಸಿ ವೈಭವದ ವಿಶೇಷ ಪೂಜೆ ನಡೆಸಿದುದು ಮತ್ತು ಕಲಾತ್ಮಕವೂ, ಅನರ್ಘ್ಯವೂ ಅಪೂರ್ವವೂ ಆಗಿರುವ ಶ್ರೀಮಠದ ಆನೆಯ ದಂತದ ಸಿಂಹಾಸನವನ್ನು ವಿಧಿವತ್ತಾಗಿ ಸ್ಥಾಪಿಸಿ ಪೂಜಿಸಲು ಏರ್ಪಡಿಸಿದುದೂ ಈ ಉತ್ಸವದ ವೈಶಿಷ್ಟ್ಯ.

ಈ ಸಮಾರಂಭದ ಸಭೆಯಲ್ಲಿ ಶ್ರೀಗುರುಗಳ ದಿವ್ಯ ಸನ್ನಿಧಿಯಲ್ಲಿ ಈ ಸೀಮೆಗೆ ಸೇರಿದ ಕಲಾವಿದರು. ಕವಿಗಳು, ವೈದ್ಯರು ಪಂಡಿತರು, ವೇದ ಶಾಸ್ತ್ರ ವಿದ್ವಾಂಸರು ಮುಂತಾದವರನ್ನು ಸಮ್ಮಾನಿಸಲಾಯಿತು. ಈ ಮಹೋತ್ಸವದ ಸವಿನೆನಪಿಗಾಗಿಯೋ ಎಂಬಂತೆ ಇಲ್ಲಿಯ ಶಿಷ್ಯರು ವೈದಿಕ ವಿದ್ಯಾಭಿವೃದ್ಧಿ ಮುಂತಾದ್ದರ ಅಭಿವೃದ್ಧಿಗಾಗಿ 'ಶ್ರೀರಾಘವೇಂದ್ರಭಾರತೀ' ವಿದ್ಯಾಪೀಠ ಎಂಬ ಸಂಸ್ಥೆಯನ್ನು ರೂಪಿಸಿ ಕೊಂಡರು. ಇದರ ಆಶ್ರಯದಲ್ಲಿ ವಿಭವ ಸಂವತ್ಸರದ ಮಕರ ಪುಷ್ಯ ಬಹುಳ ಚೌತಿ ದಿವಸದಿಂದ (ತಾ 26-1-1989) ಶ್ರೀಮಠದಲ್ಲಿ ಗುರುಕುಲ ಪದ್ಧತಿಗೆ ಅನುಸಾರವೂ ಸಾಂಪ್ರದಾಯಿಕವೂ ಆದ ಶ್ರೀರಾಮ ಸವೇದಸಂಸ್ಕೃತಪಾಠಶಾಲೆಯನ್ನು ಸ್ಥಾಪಿಸಿ ನಡೆಯಿಸುತ್ತಿರುವುದು ಶ್ರೀ ಗುರು ಕೃಪೆಯ ವೈಶಿಷ್ಟ್ಯ.

# ಪರಿಶಿಷ್ಟ

ಶ್ರೀ ಶಾಲಿವಾಹನ ಶಕ ೧೯೨೭ ತಮೇ ಪಾರ್ಥಿವ ಸಂವತ್ಸರೇ ವೈಶಾಖ ಶುಕ್ಲ ದಶಮ್ಯಾಂ ಸೋಮವಾರೇ ಶ್ರೀಮದ್ರಾಮಚಂದ್ರಾಪುರ ಮಠೇ ಪ್ರವೃತ್ತನೂತನ ಶಿಷ್ಯಪರಿಗ್ರಹೋತ್ಸವಸ್ಯ ಅಂಗೀಭೂತೇ ಯೋಗಪಟ್ಟಾಭಿಷೇಕೋತ್ಸವಾವಸರೇ ವಿದ್ವಾನ್ ಕೆ ಎಸ್. ಭಾಸ್ಕರ ಭಟ್ಟೇನ, ವಿರಚ್ಯ ಪರಿತ್ವಾ ಸಮರ್ಪಿತಾ

**ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀರಾಮಚಂದ್ರಾಪುರ ಮಠಾಧಿಷ್ಠಿತ**
**ಶ್ರೀಮದ್‌ರಾಘವೇಂದ್ರಭಾರತೀಸ್ವಾಮಿನಾಂ ಶುಭಾಶಂಸನ**
**ಪದ್ಯ ಪುಷ್ಪಮಾಲಿಕಾ**

ಶ್ರೀಮನ್ಮಂಗಳವೇದಿಬದ್ಧಮುಕುರಶ್ರೇಣೀಷು ಲಜ್ಜಾಭರಾ–
ದನ್ಯೋನ್ಯ ಪ್ರತಿಬಿಂಬ ವೀಕ್ಷಣಮನಾಗಂತಃ ಕೃತಾನಂದಯೋಃ
ವ್ಯಕ್ತಾವ್ಯಕ್ತಮಿತಸ್ಮಿತಪ್ರವಿಲಸದ್ಗಂಡಸ್ಥಲಸ್ನಿಗ್ಧಯೋಃ
ಸೀತಾರಾಘವಯೋಃ ಕಟಾಕ್ಷಸರಣಿರ್ವೈವಾಹಿಕೀ ಪಾತು ವಃ ||

ರಾಘವೇಶ್ವರಾಭಿಧಾನಭಾರತೀಕರಾಂಬುಜಾ
ಜ್ಜ್ಞಾತಮಾತ್ಮನಿಷ್ಠಮಾರ್ಯರಾಮಚಂದ್ರಭಾರತೀಮ್ ।
ರಾಮಚಂದಿರೇ ಪುರೇ ಶರಾವತೀ ಪ್ರತೀರಗೇ
ಶಾಂಕರೇ ಸನಾತನೇ ಮಠೇ ವಸಂತಮಾಶ್ರಯೇ ॥ ೨

ಸಭಾಯಾಮಾಸೀನಃ ಕನಕಮಯಪೀಠೇಽತಿರುಚಿರೇ
ತಪಸ್ವೀ ತೇಜಸ್ವೀ ಯತಿಪತಿರಯಂ ರಾಮಪದಭಾಕ್ ।
ಗುರುಃ ಸೀತಾಭರ್ತುಶ್ಚರಣಯುಗಪಾಥೋಜಮಧುಪೋ
ಜಯತ್ಯಸ್ಯ ಶ್ರೀಮಾನ್ ನವತರುಣಶಿಷ್ಯೇಣ ಯತಿನಾ ||

ವಿಪ್ರೈರ್ವೇದಪುರಾಣಶಾಸ್ತ್ರನಿಪುಣೈಸ್ಸಾನಂದಮಾರಾಧಿತಃ
ಶಿಷ್ಯೈರ್ಭಕ್ತಿಪುರಸ್ಸರಂ ಪ್ರಣಮಿತಃ ಸಭ್ಯೈಶ್ಚ ಸೋಪಾಯನೈಃ ।
ವಿದ್ಯಾಮಂಟಪವೇದಿಮಧ್ಯನಿಹಿತೇ ವ್ಯಾಖ್ಯಾನಸಿಂಹಾಸನೇ
ಭಾರತ್ಯೇಷ ಗುರುರ್ಲಸತ್ಯತಿತರಾಂ ಶ್ರೀರಾಮಚಂದ್ರಾಹ್ವಯಃ||

ವೈಶಾಖೇ ಪಾರ್ಥಿವೇಽಬ್ದೇ ಜಲಧಿರಸಕಕುಪ್ಚಂದ್ರಯುಕ್ತೇ ದಶಮ್ಯಾಂ
ಶುಕ್ಲೇ ಪಕ್ಷೇ ಶುಭಂಯೌ ಹಿಮಕರದಿವಸೇ
ರಾಮಚಂದ್ರಾಪುರಾದ್ರೇಃ ।
ಪ್ರಾತಃ ಶೋಣಾಂಬರಾಭಾರುಣವಸನಧರೋ ಯೋಗಪಟ್ಟಾಭಿಷಿಕ್ತೋ
ಹಂಸಃ ಕೋಽಪ್ಯಾವಿರಾಸ್ತೇ ಖಲು ನಿಖಿಲಜನಾನಂದ
ಸಂದೋಹಹೇತುಃ || ೫

ಶಾಸ್ತ್ರೇಷೂಕ್ತವಯಸ್ಯಯಂ ವಟುರಥೋ ಪಿತ್ರೋಪನೀತಸ್ತತೋ
ವೇದಂ ಯಾಜುಷಮಧ್ಯಗೀಷ್ಟ ವಿಹಿತಾಚಾರಾನುದಾರಂ ವ್ರತೀ।
ತ್ಯಕ್ತ್ವಾ ಸಂಪ್ರತಿ ಮೋಹಮಾತ್ಮವಿಭವಾದೀನಾಂ ವಿರಜ್ಯಾಂಜಸಾ
ಸಂನ್ಯಸ್ಯ ಸ್ವಯಮಾತ್ಮತೇಜಸಿ ರತಃ ಶ್ರೀರಾಘವೇಂದ್ರಾಭಿಧಃ ॥

ಕಾಮಕ್ರೋಧತಟಾಂ ಕಲತ್ರಪುಲಿನಾಂ ಮೋಹಾವಿಲಾಂಭೋವಹಾಂ
ಮಿತ್ರಾಮಿತ್ರಝಷಾಂ ಮಹೇರ್ಷ್ಯಮಕರಾಮೈಶ್ವರ್ಯ
ಕಲ್ಲೋಲಿನೀಂ ।
ಪುತ್ರಾವರ್ತಯುತಾಂ ಸ್ವಬಂಧುದೃಷದಂ ಘೋರಾಂ ಭವಾಂಭೋನಿಧಿಂ
ತೀರ್ತ್ವಾ ಶೋಭತ ಏಷ ಮಸ್ಕರಿಯುವಾ ಜ್ಞಾನಪ್ಲವೇನಾಧುನಾ

ಶ್ರೀರಾಮೇಂದುಯತೀಂದ್ರಹಸ್ತಕಮಲಾಜ್ಜಾತಸ್ಯ ಸಂನ್ಯಾಸಿನಃ
ಕಾಷಾಯಾಂಬರಧಾರಿಣಃ ಕೃತಧಿಯಃ ಶೋಣಾದ್ರಿವಿದ್ಯೋತಿನಃ
ವ್ಯಾಖ್ಯಾಪೀಠಮುಪೇಯುಷೋಽತ್ರ ಭವತಃ ಶ್ರೀರಾಘವೇಂದ್ರಸ್ಯ ನಃ
ಸರ್ವೇಷಾಂ ನಯನೋತ್ಸವೋ ವಿಜಯತಾಂ
ಶ್ರೀಯೋಗಪಟ್ಟೋತ್ಸವಃ ॥ ೯

ಧೀಮಾನ್ ಹಸ್ತಾಮಲಕಸದೃಶೋ ವೀತರಾಗಃ ಕುಮಾರೋ
ಬ್ರಹ್ಮಾದ್ವೈತಂ ನಿಜಹೃದಿ ಸದಾ ಭಾವಯನ್ ನಷ್ಟಶೋಕಃ ।
ಶ್ರೀರಾಮೇಂದೋಃ ಪರಮಕೃಪಯಾ ಸ್ವೀಕೃತಾಧ್ಯಾತ್ಮದೀಕ್ಷಃ
ಸೋಽಯಂ ಯೋಗೀಶ್ವರಪರಿವೃಢೋ ಭ್ರಾಜತೇ ಭದ್ರಪೀಠೇ ॥

ಶ್ರೀಮಚ್ಛಂಕರಭಾಷ್ಯಸೂಕ್ತಿಕುಸುಮೈಃ ಸದ್ಬ್ರಹ್ಮಸೂತ್ರಾನುಗೈಃ
ಬ್ರಹ್ಮಾನಂದಿಪುರಸ್ಕೃತೈಃ ಪರಿಮಲೋದಾರೈರಲಂ ಭಾವುಕೈಃ ।
ಸೇವ್ಯಾಂ ಕಲ್ಪತರೂಪಬೃಂಹಿತರಸೈರಾಗುಂಫಿತಾಂ ಭಾಮತೀಂ
ಮಾಲಾಂ ಬಿಭ್ರದಯಂ ವಿಭಾತಿ ನಿತರಾಂ ಶ್ರೀರಾಮಚಂದ್ರೋ
ಗುರುಃ ॥ ೧೦

ಶ್ರೀಮನ್ಮಂಗಳಮೂರ್ತಿರಾಶು ಮಘವಾ ಸ್ವರ್ಲೋಕನಾಥೋ ಹರಿಃ
ಪರ್ಜನ್ಯೋ ವಸುಧಾಂ ಸುಖಾರ್ಥಮಖಿಲಾಮಾಕ್ಲೇದಯನ್
ವೃಷ್ಟಿಭಿಃ ।
ಸೌಖ್ಯಂ ಸಂಭೃತಯಜ್ಞಭಾಗಮುದಿತೋ ದತ್ವಾ ಚ ನಃ ಸರ್ವದಾ
ಪಾಯಾದ್ವಜ್ರಧರಸ್ತ್ವಶೇಷಜಗತೀಜೀವಾತುರೇಕೋ ವಿಭುಃ ॥

ಶ್ರೀರಾಮಚಂದ್ರಪುರಪೀಠಯತೀಶ್ವರಸ್ಯ
ಶ್ರೀರಾಘವೇಂದ್ರ ಇತಿ ಸಂಜ್ಞಿತದೇಶಿಕಸ್ಯ ॥
ಯೋಗಾಭಿಷೇಕಮಭಿನಂದ್ಯ ಮಯಾ ಕೃತೇಯಂ
ಮಾಲಾರ್ಪಿತಾ ಗುರುಪದೇ ಕಿಲ ಭಾಸ್ಕರೇಣ ॥ ೧೧

## ಶ್ರೀ ಗುರುಕೃಪಾತರಂಗಿಣಿಯಲ್ಲಿರುವ ಶ್ಲೋಕಗಳ ಅಕಾರಾದಿ ವರ್ಣಾನುಕ್ರಮ ಸೂಚಿ

# ಶುದ್ಧಾಶುದ್ಧ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| 8 | 19 | ಕಮಲೇಷ್ಟ | ಕಮಲೇಷ್ವ |
| 19 | 28 | ಪದಾಹಯ | ಪದಾಹ್ವಯಂ |
| 30 | 1 | ಸಂಸಾರಹಿತ | ಸಂಸಾರ ರಹಿತ |
| 31 | 28 | ತಕ್ರ | ತತ್ರ |
| 34 | 7 | ಶ್ಪರಾಖ್ಯಃ | ಶ್ವರಾಖ್ಯಃ |
| 35 | 15 | ಸ್ಟಶಿಷ್ಯ | ಸ್ವಶಿಷ್ಯ |
| 38 | 13 | ಮುದ್ಧಾ | ಮುಬ್ಧೌ |
| 42 | 7 | ಶ್ರಮಃದಿಂದ | ಶ್ರಮದ |
| 44 | 11 | ಮಂಡಲಿಯ | ಮಂಡಲಿಗೆ |
| 58 | 27 | ಸನಾರ್ಥಮ್ | ಸನಾಥಮ್ |
| 60 | 3 | ಸಾಧಾಂಣೀಂ | ಸಾಧಾರಿಣೀಂ |
| 72 | 9 | ಪೀಧಿಪ್ರ | ಪೀಧಿವಂಶ |
| 72 | 10 | ದದತ್ | ದಧತ್ |
| 91 | 12 | ತತ್ಪರೇ | ತತ್ವರೇ |
| 112 | 4 | ಪಾರ್ಥಯ | ಪ್ರಾರ್ಥಯ |
| 119 | 27 | ರಕಚಯ | ರರಚಯ |
| 123 | 13 | ಪದ | ಪದ್ಯ |
| 128 | 7 | ನನ್ನ | ತನ್ನ |
| 131 | 16 | ಪೂರಣೀಯಂ | ಪೂರಣೀಯಾಂ |
| 144 | 19 | ಕ್ಷಣ | ಕ್ವಣ |
| 177 | 1 | ಕೆಕ್ಕಾರು | ಕೆಕ್ಕಾರೌ |
| 177 | 11 | ಶಿವೆ | ಶಿವ |
| 187 | 20 | ಸ್ವೀಕೃತಃ | ಸ್ವೀಕೃತಾಃ |
| 200 | 12 | ಪ್ರಾಜ್ಯಾಃ | ವ್ರಾಜ್ಯಾಃ |
| 201 | | ವ್ಯಾದತ್ತಾನನ | ವ್ಯಾತ್ತಶ್ರೀಮುಖ |
| ಟಿಪ್ಪಣಿ | | ತದ್ಭಾವ | ತದ್ವಾವ |